ಶ್ರೀ

ಶ್ರೀ ಗುರುರೂಪ ವಿಶ್ವನಾಥಾಯ ನಮಃ



ಶ್ರೀಮದ್ವಿಶ್ವನಾಥಾಂಘ್ರಿ ಭುವನೇಜಗಂಧಲುಬ್ಧಭ್ರಮ
ದ್ಭ್ರಮರ ಶಿವಮಂತ್ರಸಂಸಕ್ತಮಾನಸಲಸದು
ಭಯಕವಿತಾವಧೂವಶೀಕೃತ

ಪದ್ಮಣಾಂಕ ಮಹಾಕವಿಯಿಂದ
ರಚಿತಮಾದ

# ಪದ್ಮರಾಜ ಪುರಾಣಂ

ಲೇಖಕಪ್ರಮಾದಾದಿದೋಷಗಳಿಲ್ಲದಂತೆ
ಮೈಸೂರು ಮಹಾರಾಜಾ ಗವರ್ನಮೆಂಟ್ ಕನ್ನಡ ಸ್ಕೂಲ್
ಲೇಟ್ ಅಸಿಸ್ಟೆಂಟ್ ಮಾಸ್ಟರ್ ಬೇಚನಹಳ್ಳಿ ಮಲ್ಲಾರಾಧ್ಯ
ರವರಿಂದ ಪರಿಷ್ಕರಿಸಲ್ಪಟ್ಟು



ಬೆಂಗಳೂರು

ಒಕ್ಕಲಿಗರಸಂಘದ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು

ಪ್ರಥಮ ಮುದ್ರಣ ೩೦೦೦ ಪ್ರತಿ.

ಶಾಲೀವಾಹನಶಕ ೧೮೩೧ ಸೌಮ್ಯನಾಮಸಂವತ್ಸರ

**1909.**



[ಸ್ಥಳದ ಕ್ರಯ ರೂ ೨.]

# ಅವತರಣಿಕೆ.



“ ಅಖಿಳಶಾಸ್ತ್ರಸಾರ ” ವೆಂದು ವಿವರಿಸಲ್ಪಡುವ ಈ ಪದ್ಮರಾಜ ಪುರಾಣವು ಪದ್ಮಣಾಂಕ ಮಹಾಕವಿಯಿಂದ ರಚಿಸಲ್ಪಟ್ಟಿದೆ. ಇದರ ಕಥಾನಾಯಕರು ಕೆರೆಯ ಪದ್ಮಣಾರ್ಯರೆಂಬ ಮಹಿಮರು * ಇವರು “ ಈಶಾಪರಾವತಾರ ” ರೆಂತಲೂ “ ಶ್ರೀಶಿವಾದ್ವೈತಸಾಕಾರ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ” ರೆಂತಲೂ ಹೊಗಳಲ್ಪಟ್ಟಿದ್ದಾರೆ. ಈ ಮಹಾತ್ಮರ ಚರಿತ್ರೆಯೇ ಈ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇದರ ಕವಿತಾಗಾಂಭೀರ್ಯವೂ, ವಾಗ್ವೈಖರಿಯೂ ಅಸಾಧಾರಣವಾದುವುಗಳು. ಇದರಲ್ಲಿ ಭಕ್ತಿರಸವು ಪ್ರಧಾನವಾಗಿದ್ದರೂ ಅಲ್ಲಲ್ಲಿ ಸಮಯೋಚಿತವಾಗಿ ಇತರ ರಸಗಳೂ ಪ್ರಕಟಿತವಾಗಿವೆ. ಸರ್ವಕಾವ್ಯಲಕ್ಷಣಗಳೂ ಇರುವುದರಿಂದ, ಇದನ್ನು ಮಹಾಕಾವ್ಯವೆಂದೇ ಹೇಳಬೇಕು. ವರ್ಣಕ ಕವಿತ್ವವಾದಾಗ್ಯೂ ಪುರಾತನವಸ್ತುಕ ಕವಿತ್ವಗಳಿಗೆ ಸಮಾನವಾದ ಉತ್ಕೃಷ್ಟ ಶೈಲಿಯಿಂದ † ಬರೆಯಲ್ಪಟ್ಟಿದೆ. ವರ್ಣಕ ಕವಿತ್ವಗಳಲ್ಲಿ ಇದರಷ್ಟು ಉದ್ದಾಮ ಗ್ರಂಥವು ಇದುವರೆಗೆ ಯಾವುದೂ ಹೊರಪಟ್ಟಿಲ್ಲ. ಈಗ ಪ್ರಚಾರದಲ್ಲಿರುವ ವಾರ್ಧಕ ಷಟ್ಪದಿಯ ಗ್ರಂಥಗಳಲ್ಲಿ ಹಂಪೆಯ ವಿರೂಪಾಕ್ಷ ಪಂಡಿತಾರಾಧ್ಯರ ಚೆನ್ನಬಸವಪುರಾಣವೇ ಪುರಾತನವಾದುದು. ಅದ

---

* ಇವರು ನರಸಿಂಹಬಲ್ಲಾಳಭೂಪತಿಯ ಮಂತ್ರಿಯಾಗಿ ಕೆಲವುಕಾಲವಿದ್ದರು. ಆಗ ಬೇಲೂರಲ್ಲಿ ಕೆರೆಯ ಕಟ್ಟಿಸುವುದಕ್ಕಾಗಿ ದೊರೆಯಿಂದ ಕೊಡಲ್ಪಟ್ಟ ಹನ್ನೆರಡುಸಾವಿರ ಹೊನ್ನುಗಳನ್ನು ಶಿವರೂಪಿಯಾದ ವಿಟಜಂಗಮುನಿಗೆ ಪದ್ಮರಸರು ಕೊಟ್ಟುಬಿಟ್ಟರು. ಈ ವರ್ತಮಾನವು ಚಾಡಿಕಾರರಿಂದ ದೊರೆಗೆ ತಿಳಿದು ಮಂತ್ರಿಯನ್ನು ಕರೆಯಿಸಿ ಕೆರೆಯನ್ನು ನೋಡಬೇಕೆನ್ನಲು ಕರೆದುಕೊಂಡುಹೋಗಿ ತಮ್ಮ ಮಹಿಮಾಬಲದಿಂದ ಕೆರೆಯನ್ನು ನಿರ್ಮಾಣಮಾಡಿ ತೋರಿಸಿದರು. ಆದ್ದರಿಂದ ಅವರಿಗೆ ಕೆರೆಯಪದ್ಮರಸರೆಂದು ಹೆಸರುಂಟಾಯಿತು.

† ಈ ವಿಷಯದಲ್ಲಿ ಮೊದಲನೇಸಂಧಿ ೩೦. ಮುಕ್ತೂ ೩೭ ರಿಂದ ೫೦ ರ ವರೆಗಿನ ಪದ್ಯಗಳನ್ನು ನೋಡಿ.

ಕ್ಕಿಂತಲೂ ಇನ್ನೂರು ವರ್ಷಗಳ ಹಿಂದೆ ‡ ಈ ಪುರಾಣವು ಬರೆಯಲ್ಪಟ್ಟಿತು. ಉಭಯ ಕವಿತಾವಿಶಾರದನಾದ ಈ ಕವಿಯು 'ಮಹಾಕವಿ' ಎಂಬುವುದಕ್ಕೆ ಈ ಮಹಾಕಾವ್ಯವೇ ಸಾಕ್ಷಿ. ಈತನು ಕಥಾನಾಯಕರ ವಂಶದಲ್ಲಿಯೇ ಹುಟ್ಟಿದವನೆಂದು ಈ ಗ್ರಂಥದ 1 ನೇ ಸಂಧಿಯಲ್ಲಿ ವಿವರಿಸಿರುವ ವಂಶಾವಳಿಯಿಂದ ವ್ಯಕ್ತಪಡುತ್ತದೆ. (16 ರಿಂದ 29 ವರೆಗಿನ ಪದ್ಯಗಳನ್ನು ನೋಡಿ) ಈ ವಂಶದವರು ಆರಾಧ್ಯ ಬ್ರಾಹ್ಮಣ ಕುಲಕ್ಕೆ ಸೇರಿದವರು. ಆರಾಧ್ಯಕುಲ ಶಿರೋರತ್ನರೆಂದು ವಿಶೇಷಿಸಲ್ಪಟ್ಟಿದ್ದಾರೆ. ಈ ಪದ್ಮಣಾರ್ಯರಿಗೆ ಕಮ್ಮೆ ಕುಲದ ಗೌರಪದಣಾಯಕರ ಮಗಳಾದ ಮಾದೇವಿಯು ಮದುವೆಯಾಗಿತ್ತು. ಇವರ ವಂಶಸ್ಥರು ಕೆರೆಯ ಪಂಡಿತರೆನ್ನಿಸಿಕೊಂಡು, ಈಗಲೂ ಇರುತ್ತಾರೆ. ಇವರ ಪೈಕಿ ಒಬ್ಬರಾದ ಮೈಸೂರು ಡಿಸ್ಟ್ರಿಕ್ಟ್ ಹೆಗ್ಗಡದೇವನಕೋಟೆ ತಾಲ್ಲೂಕು ಆಂಡುಗೆರೆಯಲ್ಲಿ ನಮ್ಮ ಸಮೀಪ ಬಂಧುಗಳಾದ ವೇ|| ಸಕಲೇಶ್ವರಾರಾಧ್ಯರಲ್ಲಿ ಈ ಪುರಾಣದ ಒಂದು ಪ್ರತಿಯು ನನಗೆ ದೊರೆಯಿತು. ಅದು ತಕ್ಕಮಟ್ಟಿಗೂ ಶುದ್ಧವಾದ ಪ್ರತಿ. ಆ ಕವಿತಾಯೋಗ್ಯತೆಯನ್ನು ನೋಡಿ ಆನಂದಪರವಶನಾಗಿ, ಇಂತಹ ಸತ್ಕಾವ್ಯವನ್ನು ಮುದ್ರಣ ಮಾಡಿಸಿ ಪ್ರಕಟಿಸಿದರೆ, ರಸಜ್ಞರಿಗೆ ಪರಮಾನಂದವನ್ನು ಉಂಟುಮಾಡದಿರಲಾರದೆಂದು ನಂಬಿ, ಈ ಕಾರ್ಯದಲ್ಲಿ ನಾನು ಉದ್ಯುಕ್ತನಾದೆನು. ಆದರೆ, ಮೇಲೆ ಹೇಳಿದ ವಾಲೆ ಪ್ರತಿಯು ವಾಲೆಗಳ ಕೊನೆಕೊನೆಗಳಲ್ಲಿ ಸ್ವಲ್ಪ ಶಿಥಿಲವಾಗಿದ್ದುದರಿಂದ, ತತ್ಕ್ಷಣವೆ ನನ್ನ ಸಂಕಲ್ಪವು ಸಫಲವಾಗಲು ಅವಕಾಶತಪ್ಪಿತು. ಹಾಗೆಯೇ ಅಲ್ಲಲ್ಲಿ ವಿಚಾರ ಮಾಡುತ್ತಿರುವಾಗ ಈಶ್ವರಾನುಗ್ರಹದಿಂದ ಅದೇ ವಂಶದವರಾದ ವೇ|| ಗುರೂರು ಕಾಶೀಆರಾಧ್ಯರಲ್ಲಿ ಮತ್ತೊಂದು ಪ್ರತಿಯು ದೊರೆಯಿತು. ಇದು ಮೊದಲನೇದರಷ್ಟು ಶುದ್ಧಪ್ರತಿಯಲ್ಲದಿದ್ದರೂ, ಅದರ ಲೋಪಗಳನ್ನು ಸರಿಮಾಡಿಕೊಳ್ಳುವುದಕ್ಕೆ ಮಾತ್ರ ಸಾಕಾದಷ್ಟು ಸಹಾಯಕರವಾಯಿತು. ಇವೆರಡು ಪ್ರತಿಗಳನ್ನೂ ಇಟ್ಟುಕೊಂಡು ಯಥಾಮತಿ ಪರಿಷ್ಕರಿಸಿ ಈಗ ಅಚ್ಚುಹಾಕಿಸಿದೆನು.

---

‡ ಇದರ ಕಾಲವು ಕ್ರಿಸ್ತುಶಕದ ೧೨೮೫ನೇ ಸಂವತ್ಸರವೆಂದು ಮ|| ಆರ್. ನರಸಿಂಹಾಚಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಇವರು ಬರೆದಿರುವ ಕರ್ಣಾಟಕ ಕವಿಚರಿತೆಯಲ್ಲಿ ನಿರ್ಣಯಿಸಲ್ಪಟ್ಟಿದೆ.

ಒಂದೆರಡು ಕಡೆಗಳಲ್ಲಿ ಮಾತ್ರ ತಿದ್ದುವುದಕ್ಕೆ ಸಾಧ್ಯವಿಲ್ಲದೆ, ಪೂರ್ವ ಪ್ರತಿಗಳಲ್ಲಿದ್ದಂತೆಯೇ ಬಿಟ್ಟಿದೆ.

ಅಚ್ಚಿಗೆ ತಯಾರಾದನಂತರ, ನನ್ನ ಸ್ನೇಹಿತರಾದ ಮೈಸೂರು ಮಹಾರಾಜಾ ಕಾಲೇಜು ಕನ್ನಡ ಮುನ್ಷಿಯವರಾದ ಮ|| ರಾ|| ಪಿ. ಆರ್. ಕರಿಬಸವಶಾಸ್ತ್ರಿಗಳು ಅದನ್ನು ಒಂದಾವೃತ್ತಿ ನೋಡಿ, ಕೆಲವು ತಿದ್ದುಪಾಟುಗಳನ್ನು ಸೂಚಿಸಿದ್ದಕ್ಕಾಗಿ, ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ಅಚ್ಚುಹಾಕಿಸುವ ಕಾಲದಲ್ಲಿ "ಪ್ರೂಫ್" ಮೊದಲಾದವುಗಳನ್ನು ಪರಿಶೋಧನೆ ಮಾಡುವುದರಲ್ಲಿಯೂ, ಲೇಖಕಪ್ರಮಾದಾದಿ ದೋಷಗಳನ್ನು ಸರಿಪಡಿಸುವುದರಲ್ಲಿಯೂ ನನ್ನ ಜ್ಯೇಷ್ಠ ಪುತ್ರನಾದ ಮೈಸೂರು ಚೀಫ್ ಕೋರ್ಟು ಡೆಪ್ಟಿ ರಿಜಿಸ್ಟ್ರಾರ್ ಕೆಲಸದಲ್ಲಿರುವ ಚಿ|| ಬಿ. ಬಸವಾರಾಧ್ಯನಿಂದ ತುಂಬಾ ಸಹಾಯವಾಯಿತೆಂದು ಹೇಳಲು ಸಂತೋಷಿಸುತ್ತೇನೆ.

ಬೆಂಗಳೂರು
ಸನ್ 1909 ನೆ ಇಸವಿ,
ಮೇ 12.

ಬಿ. ಮಲ್ಲಾರಾಧ್ಯ.

# ಅ ನು ಕ್ರ ಮ ಣಿ ಕೆ





* ಗುರು ಅಂದರೆ ಕೆರೆಯಪದ್ಮರಸರು.

# ಶುದ್ಧಾಶುದ್ಧಪತ್ರಿಕೆ.



| ಪುಟ. | ಪದ್ಯ. | ಪಙ್ತಿ. | ಅಶುದ್ಧ | ಶುದ್ಧ. |
|---|---|---|---|---|
| ೧೦ | ೫೨ | ೩ | ಗೀಷ್ವತಿ | ಗೀಷ್ಪತಿ |
| ೧೫ | ೨೦ | ೩ | ಕ್ಯತ್ಯಂ | ಕೃತ್ಯಂ |
| ೧೬ | ೨೫ | ೪ | ಗೋಷ್ಟಿ | ಗೋಷ್ಠಿ |
| ೧೭ | ೨೯ | ೩ | ತಚ್ಛೃತಿ | ತಚ್ಛ್ರುತಿ |
| ೨೧ | ೪೭ | ೫ | ನೂರ್ದ್ವ | ನೂರ್ಧ್ವ |
| ೨೫ | ೭೦ | ೪ | ಜೋಗಳ | ಜೋಗುಳ |
| ೨೬ | ೭೩ | ೧ | ಶಿವಾಸೆ | ಶಿವಾವಸ್ಥೆ |
| ೨೭ | ೭೯ | ೧ | ಮೊದವಿತೋ | ಮೊದವಿತೊ |
| ,, | ,, | ೩ | ವನುಗ್ರಹಿಪ | ನನುಗ್ರಹಿಪ |
| ,, | ೮೧ | ೨ | ಸಿದ್ಧಾಂಶ | ಸಿದ್ಧಾಂತ |
| ೨೮ | ೧ | ೪ | ರಾಬ | ರಾಜ |
| ೩೦ | ೧೦ | ೧ | ಮಲನಮ | ಮನಮಲ |
| ೩೨ | ೨೪ | ೩ | ನೃಪರಂಪರಾ | ನೃಪಪರಂಪರಾ |
| ೩೪ | ೩೧ | ೩ | ಪೊಂಬಂಣ | ಪೊಂಬಂಣ |
| ,, | ೩೪ | ೩ | ಬೊಂಮಂಗಳು | ಬೊಂಮಂಗಳ |
| ,, | ,, | ೪ | ನೆಂದ | ನೆಂದು |
| ೩೯ | ೫೭ | ೧ | ವಿಮಲ\|ಕರ | ವಿಮಲ\|ತರ |
| ೪೦ | ೬೨ | ೩ | ತದಂತರಬಂದ | ತದಂತರಬದ್ಧ |
| ೪೧ | ೬೫ | ೩ | ವೈಷಿಕಾ. | ವೈಶಿಕಾ |
| ೫೩ | ೪೨ | ೪ | ಅಂತನರಕ್ಕೆ | ಅಂತೆನ್ನರಕ್ಕೆ |
| ೫೪ | ೪೬ | ೪ | ಕಾಲ್ಗೆರ್ಪ್ಸಿ | ಕಾಲ್ಗೆರ್ಪ್ಪಿ |
| ,, | ೪೭ | ಫುಟ್‌ನೋಟ್ | ಶಿವೆತಿ | ಶಿವೇತಿ |
| ೫೫ | ೫೨ | ೧ | ಪರಮನೇ | ಪರಮನೆ |
| ೫೯ | ೪ | ೧ | ತುರಕ | ತುರುಕ |
| ೬೦ | ೮ | ೪ | ಪ್ರಿತಂ | ಪ್ರೀತಂ |
| ೬೧ | ೧೨ | ೪ | ಗಹಗಹಸು | ಗಹಗಹಿಸು |
| ೬೩ | ೨೧ | ೩ | ಕ್ಷೆತ್ರ | ಕ್ಷೇತ್ರ |
| ,, | ೨೩ | ೧ | ಸ್ಠಾನ | ಸ್ಥಾನ |
| ೬೫ | ೩೨ | ೧ | ಭಕ್ತಿ | ಶಕ್ತಿ |

| ಪುಟ. | ಪದ್ಯ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|---|
| ೬೮ | ೪೫ | ೪ | ಕಲಾಪ | ಕಲಾಪಾ |
| ೭೨ | ೮ | ೨ | ಕರುಣಿಕ | ಕರಣಿಕ |
| ೭೫ | ೨೩ | ೫ | ಸದಾವ | ಸದ್ಭಾವ |
| ೮೦ | ೪೮ | ೧ | ಮೆಹಸ್ತ | ಮೇಹಸ್ತ |
| ೮೧ | ೪೯ | ೪ | ವಿಶ್ವೇತ್ವರಾ | ವಿಶ್ವೇಶ್ವರಾ |
| ,, | ೫೧ | ೧ | ವೃಷಂದ್ರಾಯ | ವೃಷೇಂದ್ರಾಯ |
| ೮೨ | ೫೭ | ೫ | ನೆಂವಣ್ಣಿಪೆಂ | ನೇಂವಣ್ಣಿಪೆಂ |
| ೯೧ | ೧೦೦ | ೧ | ಮಿಭವ | ವಿಭವ |
| ೯೩ | ೧ | ೧ | ದಿಷ್ಣ್ಯ | ಧಿಷ್ಣ್ಯ |
| ೯೬ | ೧೬ | ೫ | ಲೆಪಿಸಿ | ಲೇಪಿಸಿ |
| ೯೯ | ೨೮ | ೩ | ಗುಡಿಗಟ್ಟಿ | ಗುಡಿಗಟ್ಟೆ |
| ೧೦೦ | ೩೪ | ೩ | ಬುಜಗ | ಬುಜಂಗ |
| ,, | ೩೬ | ೩ | ಮಾದುದೊ | ಮಾದುದೋ |
| ೧೦೨ | ೪೫ | ೪ | ಸರ್ವೋವೈ | ಸರ್ವೋರ್ವೈ |
| ,, | ,, | ,, | ರುತಂ | ಋತಂ |
| ೧೦೩ | ೪೯ | ೫ | ಪಡವೇ | ಪಡೆದೇ |
| ೧೦೬ | ೧೨ | ೩ | ತಲ್ಲಕ್ಷ್ರೀ | ತಲ್ಲಕ್ಷ್ರ |
| ,, | ,, | ೫ | ರಂಗಳೋ | ರಂಗಳೊ |
| ೧೦೭ | ೧೬ | ೨ | ನಾಲ್ವೆಸೆಯ | ನಾಲ್ವೆಸೆಯಿ |
| ,, | ,, | ,, | ಕಯ್ಯ್ರತಿ | ಕಯ್ಯೆತ್ತಿ |
| ೧೦೮ | ೨೩ | ೪ | ಲಕ್ರಿ | ಲಕ್ಷ್ರಿ |
| ,, | ೨೪ | ೧ | ಪೊದಾಳ | ಪೊಂದಾಳ |
| ೧೦೯ | ೨೯ | ೪ | ಸದಪುಲಾ | ಸದಮುಲಾ |
| ,, | ೩೦ | ೪ | ಮುಂದುವಲಿ | ಮುಂದುಲಿವ |
| ೧೧೧ | ೩೮ | ೪ | ಕ್ಷಿಪನುವೊ | ಕ್ಷಿಪನುವೋ |
| ,, | ೪೦ | ೫ | ಕಾದುದುಘ | ಕಾಮದುಘ |
| ೧೧೨ | ೪೫ | ೫ | ನುಡಿಗಿಸಿ | ನುಡುಗಿಸಿ |
| ೧೨೭ | ೧೨ | ೧ | ದೆವೇನ | ದೆನೆನ |
| ೧೨೮ | ೧೭ | ೪ | ಗೆಲ್ದೋಡಿಸಿದರೆ | ಗೆಲ್ದೋಡೀಯೆ |
| ,, | ೧೯ | ೪ | ರಭಿದಾನ | ರಭಿಧಾನ |
| ೧೩೨ | ೩೭ | ೨ | ಒರ್ಪ | ಬರ್ಪ |
| ,, | ,, | ೪ | ಕಹಳೀ | ಕಾಹಳೀ |
| ೧೩೩ | ೪೨ | ೫ | ಬತ್ತನೆಯ | ಬತನೆಯ |
| ,, | ವಚನ | ೧೦ | ರೊಯಿನಲ್ | ರೋಯಿನಲ್ |
| ೧೩೪ | ೨ | ೧ | ನಾವಭೂ | ನಾವನಾಭೂ |
| ೧೩೫ | ೯ | ೪ | ಯೊಳವ | ಯುಂಟ |

| ಪುಟ. | ಪದ್ಯ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|---|
| ೧೩೬ | ೧೪ | ೪ | ನ್ರೂಜ್ಯ | ಪೂಜ್ಯ |
| ೧೩೯ | ೨೮ | ೩ | ಲಿಗ | ಲಿಂಗ |
| ೧೪೧ | ೩೫ | ೧ | ತ್ರಂತು | ತ್ರಂತುಟು |
| ,, | ೩೬ | ಫುಟ್‌ನೊಟ್ | ಗೃಹೆ | ಗೃಹೇ |
| ೧೪೩ | ೪೪ | ೨ | ಸವ್ಯೈ | ಸ್ಸವ್ಯೈ |
| ,, | ೪೫ | ೨ | ಎನುತ್ತೆಲೆ | ಎನುತ್ತೆ |
| ,, | ೪೬ | ೨ | ಎಕ | ಏಕ |
| ,, | ,, | ,, | ಯತಸ್ಥೇ | ತಸ್ಥೇ |
| ೧೫೧ | ೭೭ ಫುಟ್‌ನೋಟ್ ೧ನೆಪಙ್ಕ್ತಿ | | ರುದ | ರುದ್ರ |
| ೧೫೪ | ೮೯ ಫುಟ್‌ನೋಟ್ ೪ನೆಪಙ್ಕ್ತಿ | | ಶಿವಜಾನಂ | ಶಿವಜ್ಞಾನಂ |
| ೧೬೧ | ೧೧೭ | ೪ | ಸಿದ ಞಪಂ | ಸಿರ್ದಪಂ |
| ೧೬೩ | ೧೨೫ | ೫ | ಬಹುಯ್ಯುರ್ಕೊತ್ತ | ಬಹುಳ್ಳೆಯ್ಯುರ್ಕೊತ್ತೇ |
| ೧೬೪ | ೧೩೦ | ೩ | ಧೊದ್ವಾರಾ | ಧೋದ್ವಾರಾ |
| ,, | ೧೩೧ | ೫ | ನಿವಾರ್ಹನಮುಂ | ನಿರ್ವಾಹನಮುಂ |
| ೧೬೫ | ೧೩೩ | ಫುಟ್‌ನೋಟ್ | ಸ್ಕಂದೇ | ಸ್ಕಂಧೇ |
| ,, | ,, | ,, | ಧೇವಾ | ದೇವಾ |
| ೧೬೬ | ೧೩೮ | ೪ | ರೂಭೂಷ | ರೋಭೂಷ |
| ,, | ೧೪೦ | ೪ | ದನುತೆ | ದೆನುತೆ |
| ೧೭೧ | ೧೬೨ | ೨ | ವೈಷ್ಣಪಾ | ವೈಷ್ಣವಾ |
| ೧೭೧ | ೧೬೩ | ಫುಟ್‌ನೋಟ್ | ಚಿನಾಲಯಂ | ಜಿನಾಲಯಂ |
| ೧೭೩ | ೧೭೦ | ,, | ಮದಲಾ | ಮೂಲಾ |
| ೧೭೪ | ೧೭೫ | ೨ | ಬಲೀನ್ಯವ | ಬಲೀನ್ಯೆವ |
| ,, | ,, | ೨ | ದರಸಾಲಾ | ದರಸ್ಸಾಲಾ |
| ,, | ೧೭೪ | ೧ | ಯೆತ್ತಂ | ಯೆತ್ತೇಂ |
| ೧೭೪ | ೧೭೬ | ೪ | ಕಾರಿಯೊಳೆ | ಕಾಶಿಯೊಳೆ |
| ,, | ೧೭೪ | ಫುಟ್‌ನೋಟ್ ೩,೪ | ಪ್ರಾಯಚ್ಛತ್ | ಪ್ರಾಯಚ್ಛತ್ |
| ೧೭೫ | ೧೭೯ | ಫುಟ್‌ನೋಟ್ | "ಬ್ರಹ್ಮತತ್ವಂ" | |
| | | ೧ | ಆದವೇಲೆ | "ನಾರಾಯಣಃ" |
| | | | "ನಾರಾಯಣಃ | ಪರಂ" |
| | | | ಪರಂಜ್ಯೋತಿಃ | ಎಂದಿರ |
| | | | ಎಂಬುದಕ್ಕೆಮೊದಲು | ಬೇಕು |
| ೧೭೬ | ೧೮೪ | ೨ | ವರವುಂ | ಪರವುಂ |
| ೧೭೭ | ೧೮೭ | ೪ | ಶಿವನನೆ | ಶಿವನನೇ |
| ,, | ೧೮೯ | ೪ | ಮನೀಶ್ವರಂ | ವಿನೀಶ್ವರಂ |
| ೧೮೦ | ೧೯೯ | ೧ | ಯೆಂತೆಸೆವ | ಯಂತೆಸೆವ |
| ೧೮೧ | ೨೦೫ | ೧ | ಯುರಿಯ | ಯುರಿಯಿ |

| ಪುಟ. | ಪದ್ಯ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|---|
| ೧೮೩ | ೨೧೬ | ೧ | ಸಂಬಧಿ | ಸಂಬಂಧಿ |
| ೧೮೪ | ೨೨೦ | ೨ | ಸೀವೆಂ | ನೀವೆಂ |
| ೧೮೫ | ೨೨೪ | ೪ | ಒಳಿವು | ಬಳಿವು |
| ೧೮೬ | ೨೩೨ | ಫುಟ್‌ನೋಟ್ | ಗೂಪಾತ್ತ | ಗೋಪಾತ್ತ |
| ೧೮೭ | ೨೩೮ | ೨ | ವೊಳಪುಗೆ | ಮೊಳಪುಗೆ |
| ೧೮೮ | ೨೩೯ | ೧ | ಸುರಚಿರ | ಸುರುಚಿರ |
| ೧೮೮ | ೨೪೧ | ೩ | ಋುಗ್ಯ್ಯಜು | ಋುಗ್ಯಜು |
| ೧೮೯ | ೨೪೫ | ೧ | ರೂಪವಾಗಿ | ರೂಪನಾಗಿ |
| ,, | ೨೪೬ | ಫುಟ್‌ನೋಟ್ | | |
| | | ೧ | ಶಿವಸಾಜ್ಞ್ಯಾ | ಶಿವಸ್ವಾಜ್ಞಾ |
| ,, | ,, | ೨ | ವಿರಾಟ್ಪಿ | ವಿರಾಟ್ಸ |
| ೧೯೬ | ೨೭೭ | ೨ | ದೆನುತು | ದೆನುತುಂ |
| ೧೯೭ | ೨೭೯ | ಫುಟ್‌ನೋಟ್ ೧ | ಸರ್ವ | ಸಸರ್ವ |
| | | | ನಕಾಯೋ | ಅಕಾಯೋ |
| ,, | ೨೮೧ | ಫುಟ್‌ನೋಟ್ ೧ | ನೆವಾನ್ಯ | ನ್ಯೆವಾನ್ಯ |
| ೧೯೮ | ೨೮೪ | ೪ | ವಾದಂ | ಪಾದಂ |
| ೧೯೯ | ೨೮೮ | ೪ | ಭೇದವನೆಸಗಿ | ಭೇದನವೆಸಗಿ |
| ೨೦೦ | ೧ | ೨ | ಸಂಹಾರಾ | ಸಂಹರಾ |
| ,, | ೧ | ೪ | ಶ್ರೃತಿಕುಲೆಶ್ವರ | ಶ್ರುತಿಕುಲೇಶ್ವರಾ |
| ೨೦೧ | ೪ | ೨ | ವಜಡತೆ | ಮಜಡತೆ |
| ೨೦೨ | ೧೧ | ೩ | ಉರವಿಣೆಸಿ | ಉರವಣೆಸಿ |
| ,, | ೧೨ | ೧ | ಎನುತೆ | ಮೆನುತೆ |
| ೨೦೩ | ೧೭ | ೫ | ಪವಂ | ತಪವಂ |
| ೨೦೪ | ೨೧ | ೩ | ನೀರನ | ನಿಃಸ್ವರನ |
| ೨೦೫ | ೨೬ | ಫುಟ್‌ನೋಟ್ | ಧೂಮಿಾ | ಭೂಮಿಾ |
| ,, | ,, | ೨ನೆ ಫುಟ್‌ನೋಟ್ | | |
| | | ೧ | ಮುತ್ರ್ಯೋಹ್ಯನ್ಯ | ಮುತ್ರೋಹ್ಯನ್ಯ |
| ೨೦೬ | ೨೮ | ೨ | ವಿಶ್ವೆಶ್ವರ | ವಿಶ್ವೇಶ್ವರ |
| | | | ಲಥರ್ವ | ಲಥರ್ವ |
| | | ,, ೩ | ಭುನುತುಂ | ಯೆನುತುಂ |
| | | ,, | ಗುಣೀ | ಗುಣಾ |
| ೨೦೭ | ೩೧ | ಫುಟ್‌ನೋಟ್ | ತದ್ಬ್ರಹೇ | ತದ್ಬ್ರಹ್ಮೇ |
| ,, | ,, | ೫ | ಯಸ್ಮ್ಯಾಂತಸ್ನಾನಿ | ಯಸ್ಮ್ಯಾಂತಸ್ಥಾನಿ |
| ೨೦೮ | ೩೫ | ೧ | ತತ್ರಯಿನೆ | ತತ್ರಯನೆ |
| ,, | ,, | ೪ | ಯೆತ್ತ | ಯೆನುತ್ತ |
| ೨೦೮ | ೩೫ | ೪ | ಸಮುಗ | ಸರ್ವ |

| ಪುಟ. | ಪದ್ಯ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|---|
| ,, | ೩೭ | ೫ | ಮೊಂದನುತ್ತುಂ | ಮೊಂದೆನುತ್ತಂ |
| ೨೧೦ | ೪೪ | ೧ | ಕ್ಷರೊ | ಕ್ಷರೋ |
| ೨೧೩ | ೫೩ | ೩ | ಮೊನಖಿಲ | ಮೊನಲಖಿಲ |
| ೨೧೪ | ೫೪ | ಫೂಟ್‌ನೋಟ್ ೧ | ಯತ್ಕಪಶ್ಯಂತಿ | ಯತ್ಪ್ರಪಶ್ಯಂತಿ |
| ೨೧೭ | ೭೪ | ೫ | ಶಕಿ | ಶಕ್ತಿ |
| ,, | ೭೫ | ೧ | ದಂಡ | ದೆಂಡ |
| ,, | ೭೭ | ೩ | ಶೋಕೊರ್ಮಿ | ಶೋಕೋರ್ಮಿ |
| ೨೧೮ | ೭೯ | ೩ | ಸದ್ಬಕ್ತಿ | ಸದ್ಭಕ್ತಿ |
| ೨೨೦ | ೮೯ | ೩ | ಕೂಟ್ಟ | ಕೊಟ್ಟ |
| ೨೨೨ | ೧೦೧ | ಫೂಟ್‌ನೋಟ್ | ಸಚಾಸ್ತ್ರ | ಸಚ್ಛಾಸ್ತ್ರ |
| ೨೨೪ | ೧೦೯ | ಫೂಟ್‌ನೋಟ್ ೪ | ಉತ್ತಮಸರ್ವ | ಉತ್ತಮಸ್ಸರ್ವ |
| ೨೨೫ | ೧೧೫ | ೨ | ಧನ್ಯ | ದನ್ನ |
| ೨೩೨ | ೧೫೦ | ೩ | ತ್ತಮುಂಯು | ಯುತ್ತಮುಂ |
| ೨೪೨ | ೧೯೮ | ೪ | ಯುಬರ್ಿ | ಯುಬರ್ |
| ೨೪೪ | ೩ | ೪ | ಯುಣ್ಮಿ | ಯುಣ್ಮೆ |
| ೨೪೭ | ೨೨ | ೧ | ಜನಕ | ಜನಕ್ಕ |
| ೨೪೮ | ೨೪ | ೩ | ಳ್ವಿತ್ತಮಂ | ಳ್ಳಿತ್ತಮಂ |
| ,, | ,, | ೪ | ಪುನರ್ಭವಕ್ಕೆ | ಪುನರ್ಭವಕೆ |
| ,, | ೨೫ | ೩ | ಲನ್ಮಂಗಳಿಂ | ಲಜನ್ಮಂಗಳಿಂ |
| ೨೫೦ | ೩೪ | ೨ | ಪೊರೆವುದಾ | ಮೊರೆವುದಾ |
| ೨೫೧ | ೩೯ | ೧ | ನೆಬಿದೇವ | ನೆಲಿದೇವ |
| ,, | ,, | ೪ | ಪೊಪ್ಪುದದು | ಪೊಪ್ಪುದುದು |
| ,, | ೪೦ | ೨ | ಪ್ರಾಣವಾಗ | ಪ್ರಾಣವಂಗವಾಗ |
| ,, | ೪೨ | ೨ | ಕ್ಕಕ್ಕ | ಕ್ಕಕ್ಕ |
| ೨೫೩ | ೪೯ | ೩ | ಪುದಿದ | ಪುದಿದು |
| ,, | ೫೨ | ೧ | ಪೋಳ್ತಿಳಿ | ಪೋಲ್ತಿಳಿ |
| ೨೫೪ | ೫೩ | ೩ | ಲಾಳ್ವನಿತ | ಲಾಳ್ವನಿತು |
| ,, | ೫೪ | ೩ | ನೀಕ್ಷಿಸಿ | ನೀಕ್ಷಿಸೆ |
| ,, | ೫೬ | ೪ | ಸಜಾಶ್ಮ | ನಿಜಾತ್ಮ |
| ೨೫೫ | ೨ | ೫ | ಪ್ರೀಕ್ತಿ | ಪ್ರಲಾಪೋಕ್ತಿ |
| ೨೫೬ | ೩ | ೨ | ಕಳುಪಿ | ಕಳಿಪಿ |
| ,, | ೪ | ೫ | ಮುಚ್ಚುಳಿ | ಮುಚ್ಚಿಳಿ |
| ೨೫೭ | ೫ | ೨ | ನಿಳುಹು | ನಿಳುಹ |
| ೨೬೮ | ೬೬ | ೩ | ಉಕ್ಕಿರ್ತ್ತ | ಉಕ್ಕಿತ್ತ |

ಶ್ರೀಮತ್ಪರಮಗುರುಭ್ಯೋನಮಃ

# ಪದ್ಮರಾಜ ಪುರಾಣಂ.

ಶ್ರೀಮದಾಚಾರ್ಯಕುಲ ಚಕ್ರವರ್ತಿಯ ಮುಕ್ತಿ | ಕಾಮಿನೀಪ್ರಿಯಭುಜಂಗನ ಕೆರೆಯಪದ್ಮರಸ | ನೀಮಹಾಚರಿತ ದೋಳ್ಪ್ರೀತಿಕೆಯು ನೊರೆವೆನಾಕರ್ಣಿಪುದು ಭಕ್ತನಿಕರಂ || ಪದ ||

ಶ್ರೀವಿಗ್ರಹಸ್ಥಹಸ್ತ್ಯಜಿನಂ ಘನಂ ಶ್ರುತಿಪು | ಟಾವಬದ್ಧಾಹೀಂದ್ರಗೀತಘೋಷಂಘನಾ | ರಾವಂ ಕರಾಸಿರುಚಿ ಚಪಲಂ ಸುರಸ್ತ್ರೀಚಲಿತಚಾಮರೋತ್ಕಾಡಿತ|| ಪಾವನ ಜಟಾಗ್ರ ಗಂಗಾಜಲೋತ್ಥಿತಶೀಕ | ರಾವಲಿಗಳೇ ವೃಷ್ಟಿಯೂಗೆ ಮಳೆಗಾಲದಂ | ತಾವಗಮೆಸೆವ ವಿಶ್ವಪತಿ ಶರಣ ಸಸ್ಯಮಂ ಸಲಹುಗೆ ಜಗದ್ಧಿತಾರ್ಥಂ || 1 ||

ದೇವಗಣ ವಿವಿಧ ಪೂಜಾಗ್ರಹಣಪದದಿಂ ಮ | ಹಾ ವಿಶ್ವತಃಪಾದನೆನಿಪ ತತ್ಸುರಕುಲ ಕೃ | ಪಾವೀಕ್ಷಣದೆ ವಿಶ್ವತಶ್ಚಕ್ಷುವೆನಿಪ ತಂತ್ರತ್ರಯಿಮುಖಬೋಧದಿಂ|| ಶ್ರೀವಿಶದ ವಿಶ್ವತೊಮುಖನೆನಿಪ ಭುಕ್ತಿ ಮು | ಕ್ತ್ಯಾವಲಿ ಪ್ರದಕರದೆ ವಿಶ್ವತೊಬಾಹುವೆನಿ | ಪಾವಿಷ್ಣುಗುಪರಿ ಪದದಿಂ ವಿಶ್ವಪತಿಯೆನಿಪನಾವನಾತಂಗೆರಗುವೆಂ || 2 ||

ಧಾನುಷ್ಕನೊಂದು ಗುರಿಯಿಸೆ ತಪ್ಪಿದೊಡೆಶರಕೆ | ಹೀನವೋ ಯೆಚ್ಚಂಗೆ ಹೀನವೋ ವೀಣೆಯಂ | ಗಾನಿಬಾಜಿಸೆ ಸುತಾನಂತೇನತೇನಮಾಗುಣ್ಮದೊಡೆ ಬಂದಕೊರತೆ || ಗಾನಿಗೋ ವೀಣೆಗೋ ನೀನಾಡಿಸುವ ಹಾಹೆ | ಯಾನಾದಕತದಿ ನಿಂತೀಕೃತಿಯೊಳಗೆ ನೆಗಳ್ದ | ಹಾನಿವೃದ್ಧಿಗಳೆನಗೊ ನಿನಗೊ ನೀನಿದನರಿದು ನಡಸಯ್ಯ ವಿಶ್ವಪತಿಯೇ || 3 ||

ಪಾತಕಸಮೂಲಕೋತ್ಪಾತೆ ವಿನತಾಮರೀ | ವ್ರಾತೆ ನಿಜಭಜಕಸಂಪ್ರೀತೆ ಸಚ್ಚಿದ್ರಸ | ನ್ನಾತೆ ಲೋಕೈಕಪ್ರಸೂತೆ ಕಾರುಣ್ಯಾಭಿಜಾತೆ ವಿಲಸದ್ವಿನೀತೆ || ಆತತಾನಾರತಪುನೀತೆ ಸೌಭಾಗ್ಯಸಂ | ಭೂತೆ ವೇದೌಘವಿಖ್ಯಾತೆ ಸುಜ್ಞಾನಪ್ರ | ಣೀತೆ ವಿಶ್ವೇಶ್ವರಸಮೇತೆ ಹಿಮಗಿರಿತನೂಜಾತೆ ರಕ್ಷಿಪ್ಪುದೆಮ್ಮಂ || 4 ||

ಐರಾವಣಮರಾಳಮಾರುತಾಹಾರವರ | ಶಾರದಾಮರ್ತ್ಯದುಘನಾರದಸ್ಫಟಿಕಕುಂ | ದೋರುಮಂದಾಕಿನೀಕ್ಷೀರವಾರಾಕರಪಟೀರ ಶಾರದನೀರದಾ || ಹಾರನೀಹಾರ ಕರ್ಪೂರಡಿಂಡೀರ ನುಂ | ದಾರ ಶಶಿತಾರ ಸುಸ್ಮೇರನವಹೀರ ಸ | ತ್ತಾರಾದಿಗೌರ ಧಿಕ್ಕಾರ ಕೀರ್ತಿಪ್ರಭಾಪೂರ ಮಾಂತಾಹಿಬಸವಾ || 5 ||

ರಮಣೀಜನಾನಂದಸಿಂಧುಚಂದ್ರಾನನೆಯ | ರಮಣೀಯ ಸದ್ಗುಣಗಣಾಲಂಕೃತೆಯ ಶಿವಾ | ರಮಣ ಶರಣಾಂಘ್ರಿ ಸರಸಿಜಪರಾಗ ಲಲಾಮಘಾಲೆಯ ವಿಪುಲಶೀಲೆಯ | ರಮಣಾನುಕೂಲೆಯ ಬಸವಗಣೇಶನ ಮನೋ | ರಮಣಿಗಂಗಾಂಬಿಕೆಯ ವಿಮಲಪದಕಮಲಮಂ | ಭ್ರಮರನಂತಾನೊಂದಿನುಡಿಯಲೆನಗಿಂಚರಂ ಸಮನಿಸುವುದಾಶ್ಚರ್ಯಮೇ || 6 ||

ಬಭ್ರುಸದ್ದ್ರುಷ್ಟ್ಯ ಚಿತ್ತಭ್ರಾಂತಿಕೃಲ್ಲುತ | ತ್ಪ್ರಭ್ರಾಜಿತೊದ್ಯತ್ಕಕುಭ್ರಮಿತಘೃಣಿಜಯಾ | ದಭ್ರಸ್ಫುಲಿಂಗವಮಿವಿಭ್ರಮವಿ ಭೃತ್ಪಡ್ಗ ಷುಭ್ರವಕ್ಷಕರಾಕ್ಷತಾ || ಬಭ್ರುವರ್ಣಜಟೋತ್ಕಟಾಭ್ರೀ ಷತತ್ಪರಾ | ತ್ರಭ್ರಮರಸಾಂದ್ರಸಾಂಭೊಭ್ರನಿಭಗಳಭವ | ಶ್ವಭ್ರಗಂದಕ್ಷಾಧ್ವರ ಭ್ರಂಶಕಾವಮಾಂಬಭ್ರುನುತ ವೀರಭದ್ರಾ || 7 ||

ಸರ್ವಮನ್ಯತ್ಪರಿತ್ಯಜ್ಯ ಎಂದಿರದುಲಿವ | ಥರ್ವವೇದೋಪಾಂತ ಸೂಕ್ತ್ಯರ್ಥದಿಂ ಧ್ಯೇಯ | ನೋರ್ವ್ವಂಶಿವಂ ಶಿವಂಕರನೆಂಬುದಂ ಪ್ರಮಾಣಿಸಿ ತನ್ನಿಗವುಭಕ್ತಿಯಂ || ಉರ್ವಿಯೊಳ್ಪ್ರಕಟೀಕರಿಪೆನೆಂದು ಮನದಂದ | ಖರ್ವೈಕಲಿಂಗನಿಷ್ಠೆಯನಕೋ ದೃಷ್ಟಾಂತ | ಪೂರ್ವಕಂಪಾರ್ವತೀವ್ಯಾಜದಿಂ ಸ್ಥಾಪಿಸಿದ ಭೃಂಗಿಗಾಂಲೆಂಗಿಯುಪ್ಪೆಂ || 8 ||

ಖಂಡೇಂದುಧರನ್ನೆಮೊಗದೊಳೈಮೊಗವನಿಟ್ಟು | ಮುಂಪಾಪೆ ಸುತಮೋಪದಿಂದುಳಿದುದೊಂದುಮುಖ | ಮಂಡಲಂ ದೈನ್ಯರಸಮಂ ಸೂಸುತಿರೆಯುದಂ

ಪುಂಡರೀಕಾಕ್ಷಿಗಿರಿಜೆ || ಕಂಡುಗಣಪಂಗೆ ಕಣ್ಣಂನೆಯಿಂತೋರಿಸುತ | ಖಂಡಪ ರ್ಶದಿ ನೆತ್ತಿತಳ್ಕೈಸಿ ಪೊಲೆಯೂಡೆ | ಯುಂಡುಮುದದಿಂ ನಲಿವಷಣ್ಮುಖನೆ ಮಗೆಕುಡುಗೆ ತತ್ಪ್ರಸಾದಸ್ತನ್ಯಮಂ || 9 ||

ವಿಲಸತ್ಪ್ರಮಥಗಣಂಗಳ್ಗೆ ರುದ್ರಗಣಾಳಿ | ಗೆಲಘುತರ ವೃಷಭಯೋ ಗಾಚಾರ್ಯಕುಲಕೆ ನಿ | ರ್ಮಲಿನರಾದ ರುವತ್ತುಮೂವರ್ಗೆ ಷೋಡಶಗಣಂಗಳ್ಗೆ ತೇರಸರ್ಗೆ || ಸುಲಭರೆನಿಸಿದ ದಶಗಣಂಗಳ್ಗಮರಗಣಾ | ವಳಿಗುಳಿದಸಂಖ್ಯಾತ ಭಕ್ತರ್ಗೆ ಮನ್ಮನದ | ಜಲನಮಂ ತೊಲಗಿಸಿ ಶಿವಾಂಘ್ರಿಯೊಳ್ಬಿಜ್ಜಂತೆ ನಿಲಿ ಸುಗೆಂದಾಂವಂದಿಪೆಂ || 10 ||

ಶ್ರೀವಿಶುದ್ಧ ಪ್ರಕರಣಂಗಳನೆಸಗಿ ವೇದ | ಶೈವತಂತ್ರಾವಳಿಗೆ ಭಾಷ ಮುಂದೀಪಿಕೆಯ | ನಾವೃತ್ತಿಯಂ ವ್ಯಾಖ್ಯೆಯಂ ಒರೆದ ಬೋಧಾಯುಸಾರ್ಯನುರು ಶಂಕರಾರ್ಯರ್ಗಂ || ಪೋವೊಹರದತ್ತರ್ ತ್ರಿಲೋಚನಾಘೋರ ಶಿವ | ದೇವ ಗುಣನಿಲಯ ಸರ್ವಾತ್ಮಶಂಭುಗಳಾನ | ತಾವನಭೂತಿಕಂಠಾದಿ ಪೂರ್ವಾ ಚಾರ್ಯರೀವುದೆಮಗಮಲ ಮತಿಯಂ || 11 ||

ವೀರಮಾಹೇಶ್ವರಾಚಾರ ಸಂಗ್ರಹಶಾಸ್ತ್ರ | ಕಾರನೆನಿಸಿದ ನೀಲಕಂಠ ನಾಗಾರ್ಯಂಗೆ | ಸಾರತರಬಸವ ರಾಜೀಯಮಂನೆಗಳ್ದ ಪಾಲ್ಕುರಿಕೆಸೋಮೇಶ್ವ ರಂಗೆ || ಚಾರುಸಾರೋದ್ಧಾರಮಂ ಪಡೆದ ಲಕ್ಷ್ಮೀಧ | ರಾರಾಧ್ಯಪತಿಗುರು ಶಿವಜ್ಞಾನದೀಪಿಕೆಯ | ನೋರಂತೆರಚಿಸಿದನು ಪಮಮಲ್ಲಿಕಾರ್ಜುನಾಚಾರ್ಯಂಗೆ ವಂದಿಸಿದಪೆಂ || 12 ||

ಖಂಡಿತಪ್ರತಿಪಕ್ಷಶಿವಲೆಂಕಮಂಚಣ್ಣ | ಪಂಡಿತರ ಭರ್ಗವೇತಂಡಭೂ ತೋರ್ಧ್ವಾಕ್ಷ | ಪಂಡಿತರ ಪರವಾದಿತುಂಡಪದ್ಮಾಬ್ಜಪ್ರಚಂಡವಿಭವಶ್ರೀಪತಿ || ಪಂಡಿತರಹರನದೋರ್ದಂಡ ಬಲರೆನಿಸಪಿಲ | ಪಂಡಿತರವಿಮಲ ಚರಣಾಬ್ಜಂಗ ಳಿಮ್ಮ ಹೃ | ತ್ಪುಂಡರೀಕಾಕರನೊಳಿರ್ಕೆ ಸತ್ಕವಿಪಂಸಮಂಡಲಂ ವಿಹರಿ ಪಂತೆ || 13 ||

ಪಡೆದುಬುಧರಾಶ್ರಯಿಪ ಬಾಣಂಗಸಿತಕಂಠ | ಪದಭಕ್ತನುದ್ಭ ಟಂಗತುಳಕವಿರಾಘವಂ | ಗುಣಿತಕುಕವಿಮುಖೇಂದುರಾಹುಭೋಜಂಗೆ ಮಂ ಗಳಮಯಹರೀಶ್ವರಂಗೆ || ಸದಧೀಶದೇವಾರ್ಯಭೀಮಂಗೆ ಗುರುಗುಣಾ | ಸ್ಪದ

ಮಯೂರಂಗೆ ಜಿತಝಷಕೇತುರೂಪ ನೆನಿ | ಸಿದಮಲ್ಲಣಂಗೆ ಲೋಕಾಪ್ತ
ಭಾರವಿಗೆರಗುವೆಂನವಗ್ರಹಬಲಾರ್ಥಂ || 14 ||

ವರಭೂತಕಾಲದೋಳ್ಘೂ ತಿರುದ್ರಾಕ್ಷೆಶಂ | ಕರಮಂತ್ರಮಿಮಲಲಿಂಗಂ
ದಾಳ್ದು ಮೆರೆದ ಸ | ತ್ಪುರುಷಜಯಕೀಭವತ್ಕಾಲದೊಳಚಲಶಂಭುವಂಭಜಿಸಿ
ಮೆರೆವುತಿರ್ಪಾ|| ಶರಣಾವಳಿಗೆ ಭವಿಷ್ಯತ್ಕಾಲದೋಳ್ಕಿವಾ|ವರನನರ್ಚಿಸಿ ಮೆರೆ
ವಭಕ್ತತತಿಗಾಂ ನಮ | ಸ್ಕರಿಸುವೆಂಮತ್ಕೃತಿಗೆ ಸರಸೋಕ್ತಿಗಳನಿತ್ತು ನೆರವಾ
ಗಿನಡಸುಗೆಂದು || 15 ||

ಶ್ರೀಮದಾನಂದರೂಪಂ ವಿಗತತಾಪಂ ಪ್ರ | ಭಾಮೂಲ ಭಸ್ಮಲೇಪಂ
ಸ್ಮರಯುವಿಲೋಪಂಪ | ರಾಮೃತಕಲಾಕಲಾಪಂ ತೃಣೀಕೃತಪುಷ್ಪಚಾಪಂ ಗತಾ
ಘಲೇಪಂ || ಆಮಹೇಶಸುಖಾಬ್ಧಿಚಂದ್ರಂ ಯತೀಂದ್ರಂ ವ | ರಾಮಲಪ್ರಬಲ
ಸಾಂದ್ರಂ ಶಾಂತಿರುಂದ್ರನೆಂ | ಮಿಾಮತಿಸರೋಜಕೆದಿನೇಂದ್ರನಕ್ಕೊಲ್ದು ಶಿವ
ಯೋಗಿ ಮಲ್ಲರಸನನಿಶಂ || 16 ||

ಪರಮಶಿವಸಾಮರ್ಥ್ಯರೂಪ ಶಿವಯೋಗಿಮ|ಲ್ಲರಸಾಗ್ಯಶೇಖರನ ಸೂನು
ವಿತತಾನತಾ | ಮರಧೇನು ಭಕ್ತಲಪನಾಂಭೋಜಭಾನು ಸತ್ತ್ರಣುತಜನರತ್ನ
ಸಾನೂ || ನಿರುಪಮಶಿವೈಕ್ಯನಕ್ಷರಚಿದೌತ್ಸುಕ್ಯನುರು | ತರ ಸತ್ಯವಾಕ್ಯನಂ
ತಕಬಲಾಶಕ್ಯ ನೆನ | ಲರರೆಮೆರೆದಭಿನವಮಹೇಶಸಕಳೇಶಮಾದರಸರೆಮಗೀಗೆ
ಸುಖಮಂ || 17 ||

ಆಶಿವಸುಖಾಬ್ಧಿಮಗ್ನಸ್ವಾಂತನಾದಸಕ | ಲೇಶಮಾದರಸರಾತ್ಮೋದ್ಭ
ವಂ ವಿಚ್ಛೇದಿ | ತಾಶಾಸಮೂಹನಾಶಾಸಮೂಹಭ್ರಮಿತಕೀರ್ತಿ ವೈಮಲ್ಯ
ಮೂರ್ತಿ || ಪಾಶಪಶುಪತಿಪದಾರ್ಥತ್ರಯಜ್ಞಾನಸಂ | ಕಾಶ ನಘನಾಶನೆನಿಸಿದ
ಮಾಯಿದೇವಾರ್ಯ | ದೇಶಿಕೋದ್ಭಾನು ಮನ್ಮುಖಾಂಬುಜಮಂ ವಿಕಾಸಿಸುಗೆನಿಜ
ತೇಜದಿಂ || 18 ||

ಅಲಘುಬಲಮಾಯಿದೇವಾರ್ಯೋದರೇಂದ್ರದಿ | ಕ್ಫಲಿತಮಾರ್ತಾಂಡಂ
ಶಿವಜ್ಞಾನಪಿಂಡಂ ಪ್ರ | ಬಲಭಕ್ತಿಷಂಡಂ ಸುಗುಣಮಣಿಕರಂಡಂ ಭವಾಂಬುಧಿ
ತರಣತರಂಡಂ|| ಮಲಿನಾನ್ಯವಾದಜಯಶೌಂಡಂ ಸಕಲಶರಣ|ಕುಲಸುವೇತಂಡಂ
ವಿಲೂನಯಮದಂಡಂ ವಿ | ಮಲಲಪಿತ ತುಂಡಂ ಕೆರೆಯ ಪದ್ಮಣಾರ್ಯರೆಮಗೊ
ಲವಿನಿಂದೀಗೆ ಮತಿಯಂ || 19 ||

ಆಕೆರೆಯುಪದ್ಮಣಾರ್ಯೋದರಾರ್ಣವನವಸು | ಧಾಕರಂ ಪರವಾದಿಭೀ
ಕರಂ ವಿಲಸತ್ಕೃ| ಪಾಕರಂ ಜ್ಞಾನರತ್ನಾಕರಂ ನತವಿಪದ್ಭೇಕೌಘದರ್ವೀಕರಂ||
ಶ್ರೀಕರಂಹಾರ ಗೌರವಲ್ಯೈಂಗ್ಯಭಕ್ತಿಪ್ರ | ಭಾಕರಂ ವಿಮಲಮಪಿಮಾಕರನೆನಿಸಿ
ಶಿವನೊ | ಳೇಕೀಕರಿಸಿದ ಸುಕುಮಾರಪದ್ಮರಸಾರ್ಯರೀಕೃತಿಯುನೋವುಗನಿಶಂ
|| 20 ||

ನಿರುಪಮಕುಮಾರಪದ್ಮರಸಾರ್ಯರಾತ್ಮಜಂ | ಪರಮತಧ್ವಾಂತಪ್ರ
ಚಂಡಭಾಸ್ಕರನೀಶ | ಶರಣಚರಣಾಬ್ಜ ಚಂಚಚ್ಚಂಚರೀಕಂ ನಮಸ್ಕೃತಸಮ
ಸ್ತಲೋಕಂ|| ಕರದಲಿಂಗದೊಳೆಸದ್ಯಃ ಪ್ರಸನ್ನತೆವಡೆದು | ನಿರತಿಶಯಸಂವಿತ್ಸು
ಖಮನೆಯ್ದಿದಾರ್ಯಪ್ರ | ಸರಚಕ್ರವರ್ತಿ ವಿಶ್ವಾರಾಧ್ಯರೆಂಮ ಜಿಹ್ವಾಗ್ರದೋ
ಳ್ನಿಲ್ಕೆಸತತಂ || 21 ||

ಆಮಹಾಮಹಿಮ ವಿಶ್ವಾರಾಧ್ಯರುದರಾಬ್ಧಿ | ಸೋಮಂ ಶಿವಕ್ರಿಯೋ
ದ್ದಾಮಂ ವಿಮಲಪುಣ್ಯಾ| ನಾಮಂ ವಿವೇಕವಿಶ್ರಾಮಂಪ್ರಣತಬುಧಸ್ತೋಮಂ
ಗುಣಾಭಿರಾಮಂ || ಕಾಮಾದಿಷಡರಿನಿಸ್ಸೀಮಂಸಪತ್ನಕುಲ | ಭೀಮಂ ಶರಣ
ಸಾರ್ವಭೌಮಂಲಸದ್ಗುಣಾಲ | ಲಾಮನೆನೆಸಂದ ದೇವಾರಾಧ್ಯರೆಂಮ ಹೃತ್ತಾ
ಮರಸದೊಳ್ನೆಲಸುಗೆ || 22 ||

ಕೆರೆಯಪದ್ಮರಸರಚರಿತ್ರಮಂ ಪೇಳ್ವೆಡೆಯೊ | ಳರಿವರುಳರಾದವಾದಿಗ
ಳೆಂದರೇಂಪುಸಿಯೊ | ಬರಿಯನೆಲನೇರಿಯಾಕೃತಿಯಾಗಿ ನೀರ್ದುಂಬಿಮೆರೆದುದುಂ
ಟೇಯಂತದಂ || ಅರಿವೆವಿಂದೀಯನಾವೃಷ್ಟಿಯೊಳ್ಪತ್ತಿದೀ | ಕೆರೆದುಂಬಿಸಿದೊ
ಡೆನೆ ವಿಯನ್ನದೀಜೂಟನಂ | ಕುರಿತುನುತಿಗೆಯ್ದು ಮಳೆವಡೆದು ಕೆರೆದುಂಬಿಸಿದ
ಮಹಿಮದೇವಾರ್ಯಶರಣೂ || 23 ||

ಅನುಪಮಾಚರಣನ ಶಿವಾಗಮಾಭರಣನ ಭು | ವನಹಿತನ ದೇವಾರ್ಯ
ಪುಂಗವನಪುತ್ರಂ ವೃ | ಜಿನತಿಮಿರಮಿತ್ರಂ ಸಮಸ್ತಪರಸಮಯ ಜೈತ್ರಂ ಲಸಿತ
ಭಸಿತಗಾತ್ರಂ || ಘನಗುಣಾಮತ್ರಂ ಚಿದುದ್ಧವಕ್ಷೇತ್ರಂ ಸು | ಜನನುತಚರಿ
ತ್ರಂಭವಾಂಬುಧಿವಹಿತ್ರನೆಂ| ದೆನಿಪಗೌರಾರ್ಯಚಿಚ್ಚಂದ್ರಮಂ ತಳ್ಕೈಸುಗೆಂಮ
ಮತ್ಕೃತ್ಪಲಿನಿಯಂ|| 24 ||

ಒಂದುದಿವಸಕ್ಕೆ ನೂರೊಂದುಕುಸುಮಂಗಳಿಂ | ದಿಂದುಧರನಂಪೂಜಿಸುವ
ನಿಯಮದಿಂದಿರು | ತ್ತೊಂದುದಿನಮೆಂತುವುಂ ಕುಸುಮಮೊದವದಿರೆ ಶಿವನಿತ್ತಪ

ನೆನುತೆನಿಪ್ಪೆಯಿಂ || ಒಂದಿನೂರೊಂದುಪಾದಂಗಳಿಂಗದ್ಯಮನ | ದೊಂದನುಸಿ ರ್ದೀಶನಂ ನುತಿಸೆ ಕುಸುಮಂಪಾದ | ಕೊಂದೊಂದುಬರೆ ಶಿವನನರ್ಚಿಸಿಮೆರೆದು ಗೌರಣಾರ್ಯರೆಂಮಂಸಲಹುಗೆ || 25 ||

ಆರಾಧ್ಯಕುಲಶಿರೋರತ್ನಗೌರಾಚಾರ್ಯ | ರಾರಮ್ಯಗರ್ಭೋದ್ಭವಂ ದಿವ್ಯಮೂರ್ತಿ ಯಘ | ವೈರಾನುವರ್ತಿ ಸುಜ್ಞಾನವಿಸ್ಫೂರ್ತಿ ಯಪಗತಪುನರ್ಜನನಜೂರ್ತಿ || ಚಾರುದೇಶಿಕಚಕ್ರವರ್ತಿ ಪರಿಹೃತನತಾ | ಪಾರಾರ್ತಿಭವತವೋದೀಪಿಕಾವರ್ತಿ ದಿ| ಕ್ಪೂರಿತೋಜ್ವಲಕೀರ್ತಿ ದೇವಾರ್ಯರೆಮಗೀಗೆ ಸಾರವಾಕ್ಚಾತುರ್ಯಮಂ || 26 ||

ಆಗುರುವರೇಣ್ಯದೇವರಸರ ಸುತಂ ಸಮ | ಸ್ತಾಗಮಾಚಾರ್ಯಮುಕುರಂ ಶಿವಾನುಭವ | ಸಾಗರನಿಮಗ್ನಚಿತ್ತನುದಾತ್ತವೃತ್ತನುತ್ತಮಚಿದಾಯತ್ತನಚಲಂ || ಶ್ರೀಗಿರಿಶಪೂಜಾನುರಕ್ತಂ ವಿಮಲಭಕ್ತ | ಯೋಗಸಕ್ತಂ ಪ್ರಾಕೃತತ್ಯಕ್ತನೆನಿಸಿಮೆರೆ | ವಾಗರುವವೀರಣಾಚಾರ್ಯರಡಿದಾವರೆಗಳೀಗೆಮಗೆ ನಿರ್ವಿಘ್ನಮಂ || 27 ||

ಆಭುವನನುತವೀರಣಾರ್ಯಂಗೆ ಜನಿಸಿದ | ಶೋಭಾಕರರ್ತನುಜರೆಂತೆ ನಲ್ವನದಾ | ನಾಭಯುದಕರಯುಗಳದಂತೆ ವೃಷಭೇಂದ್ರನವಿಷಾಣದ್ವಯಂಗಳಂತೇ || ಶ್ರೀಭಾಸ್ವದಭವಭಕ್ತನ ಚಿತ್ಕ್ರಿಯೆಗಳಂತೆ | ಭೂಭಾಗದೊಳ್ಪದ್ಮಣಾರ್ಯ ಚಾಮುಂಡಾರ್ಯ | ರೀಭಜಕಭಾಗ್ಯರೆನೆ ನೆಗಳ್ದರವರೆಮಗೆ ವಾಗ್ವೈಭವಮನೀಗೆಸತತಂ || 28 ||

ಅವರೀರ್ವರೊಳಗಗ್ರಜಾತನಾದುರುಗುಣಾ | ರ್ಣವಪದ್ಮಣಾರ್ಯನಸುತಂ ವಿಶ್ವನಾಥಾಂಘ್ರಿ | ಭುವನೇಜಗಂಧಲುಬ್ಧಭ್ರಮದ್ಭ್ರಮರಂ ಕಲಾಘಜ್ಞನಾಗಮಜ್ಞಂ || ಶಿವಮಂತ್ರಸಂಸಕ್ತಮಾನಸಂ ಲಸದುಭಯ | ಕವಿತಾವಧೂವಶೀಕೃತನಮಲಶಂಭುಭ | ಕ್ತನಿತಾನಭೃತ್ಯನೆನಿಸುವ ಪದ್ಮಣಾಂಕನಿದನೊರೆದನೆನಲಾರ್ಮುಜ್ಞರೋ || 29 ||

ರಸದಾಳಿಯೆಸೆವ ಪಾಲ್ಗೊನಲೊ ಸೊಗಯಿಪಪೊಚ್ಚ | ಪೊಸಜೇನಸೋನೆಯೊ ಘುಣೆ ಮೆಯುಸಸಿಯುಚ | ಟ್ಟೊಸರ್ದು ಪರಿತರ್ಪದಿವ್ಯಾಮೃತದತೊರೆಯೊ ಪಾಲ್ಗಡಲುರ್ವಿಮೇರೆದಪ್ಪೀ || ಒಸೆದುದಾಂಗುಡಿಯಿಟ್ಟು ಪಸರಿಸಿತೊ ಈಕೃತಿ

ಯ | ರಸವೊಪೇಳೆಂದೆಲ್ಲ ರಸಿಕರಾನಂದಿಪಂ | ತೆಸಗುವುದು ತದ್ವಿಧಿಯೊಳೆಸ ಗದಿರ್ದೊಡೆ ಬಯ್ವರೇ ಒಡಿವರೇ ಒಡಿವರೇ || 30 ||

ನುಡಿಬೆಡಂಗಂಬೀರೆ ರೀತಿವಿಖ್ಯಾತಿಯಂ| ಮಡಲಿಪೆ ಚಮತ್ಕಾರವಮಮ ಸತ್ಕಾರಮಂ | ಸಡಗರಿಸೆ ಮೋಹನಂ ಮೋಹರಿಸೆ ಗಾಡಿಪರಿದಾಡೆ ಪೊಸದೇಸಿಸೂಸೆ || ಕಡುಜಾಣ್ಮೆ ಕಯ್ಗುಣ್ಮೆ ಮೃದುಪದಂ ಸಂಪದಮ | ನಡರೆ ಭಾವಂ ಸತ್ತ್ರಭಾವಮಂಕಯ್ಗೆಯ್ಯೆ | ಪಡೆದುಕೃತಿಯಂ ಶಿವಾರ್ಪಿತವನೆಸಗುವ ನಿಂನಸ್ಬೆ ಪಿಂಗೆಸಾಟಿಯುಂಟೆ || 31 ||

ಕುಳಿರ್ವೆಟ್ಟು ಮುಗಳತನುಕಾಂತಿ ಜಲದೋಳ್ಮಿಂದು| ಬಳಿಕವಳ ಕರುಣಾಮೃತವ ನೀಂಟಿ ಯೂಸದು | ಜ್ವಳಮೃದೂಕ್ತಿಗಳನೋಲಗಿಸಿ ಯೂಕೆಯು ಕಟಾಕ್ಷ ವಿಲಾಸದೊಡನೆ ನಟಿಸಿ || ಬಳೆದಿಂತುಸವಿಯಾದವಕ್ಕುಂ ಸಿಜೋಕ್ತಿಗಳ| ತುಳ ಪದ್ಮಣಾಂಕ ಪೇಳಲ್ಲದಂದೀವಿನಿ |ಗ್ಗಿ ಮಳವೀ ಮಧುರವೀ ಸುಬದ್ಧವೀ ಸನ್ಮೋಹನಂ ಸಾಗುರ್ಮೇ ಶಿವಶಿವಾ || 32 ||

ಎಂದು ಸಕಲ ಕಲಾಪ್ರವೀಣರಾದಖಿಳಬುಧ| ವೃಂದಂ ಪೊಗಳೆ ಪರಮ ಶಿವಭಕ್ತತತಿ ತಂಮ | ಕಂದನ ತೊದಲ್ನುಡಿಗಳೆಂದು ಮೆಯ್ಯುರ್ವಿಪುಳಕಂದಾಳ್ದು ಲಾಲಿಸುತಿರೆ|| ಒಂದಿಪದ್ಮರಸಾರ್ಯರಂಘ್ರಿಯಂ ವಾಕ್ಪುಷ್ಪ | ದಿಂದರ್ಚಿಸುವೆ ನಿದಂತಾಳಲಾರದೆ ಬಾಯ್ಗೆ | ಬಂದಂತೆಗೆಡೆವ ಕುಜನರ್ಮುಖದೊಳಿರ್ಕವರ್ಗದೆಂದುವುಂ ಸಾಜಮಲ್ತೇ || 33 ||

ಸರ್ಪನಾಶ್ರಯಿಪುದೆನುತಳ್ಕಿ ಮನೆಯಂ ಮಾಡ | ದಿರ್ಪರೇ ಮುಳ್ಮುರಿಗುಮೆಂದು ಪಯಣಂ ಪೋಗ | ದಿರ್ಪರೇ ಶ್ವಾನಂಗಳಂಟುವವೆನುತೆ ರಾಜವೀಧಿಯೊಳಗೇಂ ನಡೆಯರೇ|| ದರ್ಪದಿಂ ಮುಂದುಗಾಣದ ಗಾಂಪರೆನಿಪಬರು| ಬರ್ಪಳಿವರೆಂದು ಸಮ್ಯಕ್ಕಾವ್ಯಮಂ ರಚಿಸ | ದಿರ್ಪರೇ ದಿವ್ಯಮಂತ್ರಂಕೆಪ್ರಯಿಷ್ಟಿವಾಗ್ಬಂಧನಂಗಕ್ತಮಗಿರೇ || 34 ||

ಪರಿಕಿಸಲುಭಯಪಕ್ಷಶುದ್ಧನನಿಮಿಷಭೋಗ | ಪರಿಪುಷ್ಟತನುವೇಕಪಾದಸ್ಥವೃತ್ತನುರು | ತರಮಿತ್ರಸಹಚಾರಿ ಯಪಗತತಮೋಘೇತ ಸಕಲುಷೋದರನನೂನಂ || ನಿರುತವಾಸೆನಗೆ ಕುಮುದಾಪ್ತನೆಣೆಯೇ ಎಂದು | ಕರಮೆಬಕನಿಂದುವಂ ಜರೆವೊಲ್ಜಡ ಸ್ಥಲದೊ | ಳರರೆಯುಜ್ಞಕಲಾನಿಧಿಗಳಂ ಜರೆವರ್ದುರಭಿಮಾನವೇಗೆಯ್ಯದೋ || 35 ||

ಮುಂನೆಗಳ್ದಕವಿಗಳೋಳ್ಕೆಲರೆಕಟ ದುರ್ಜನಂ | ಗಂನಮಿಪೆವೆಂದು ತಂ ಮಯಕೃತಿಮುಖದೊಳಿಟ್ಟ | ರೇಂ ನಿರುಕ್ತಿಯನರಿದರೋ ಅದಿರ್ಕಜ್ಞಂಗೆತಜ್ಞ ನೆರಗುವುದುಚಿತಮೇ || ತನ್ನಿಂದೆತಾನೆವಂದಿಪನದೆಂತೆನೆಸಭೆಯೊ | ಳುಂನತರ್ಮೆಚ್ಚಿಬಂಣಿಸೆ ಕಂಡುತಲೆವಾಗಿ | ಸನ್ನಿಧಿಯೊಳಿರ್ಪುದದು ಲಜ್ಜೆಯೆಂಬೊಂದು ನೆವದಿಂದೆರಗಿದಂದಮಲ್ತೆ || 36 ||

ವಿಲುಳಿತಸಮಸ್ತಾಸಮಸ್ತಮಾನಿತ ಸಕೋ | ಮಳ ಸರಳದುಸ್ತರನಿರೋಷ್ಠ ಪ್ರಘಟ್ಟಕೋ | ಜ್ವಳ ರಸವ್ಯಂಗ್ಯಸುರಸಸ್ನಿಗ್ಧ ತಾತ್ಕಾಲಿಕಪ್ರಭೃತಿ ವಿವಿಧಪದದಿಂ || ಸಲೆಮೆರೆವಸತ್ಕಾವ್ಯಮಂತಜ್ಞರರಿವಂತೆ | ಮಲಿನಾತ್ಮರಾದ ದುಷ್ಕವಿಗಳೇನರಿವರೇ | ವಿಲಸನ್ಮದಾಳಿಯರಿವ್ರೋಲ್ ಬಂಭರಾಳಿಯರಿದಪುದೆ ಪುಷ್ಪಾಮೋದಮಂ || 37 ||

ಅರಿಸಮಾಸಂ ರಸಾಭಾಸವಚಮತ್ಕಾರ | ವರರೆದುಸ್ಸಂಧಿಯಪಶಬ್ದ ವಧನೊಪಮೆಸು | ಕರಕತರ್ತೃಕರ್ಮಕ್ರಿಯಾಪದಾ ಸಂಬಂಧವಪಗತವಿಭಕ್ತಿವಿಯತಿ || ಸ್ಖರಿತಶಾಸ್ತ್ರವಿರೋಧವಂತೆ ಛಂದೋಭಂಗ | ಮುರುಪಾದಪೂರಣಂ ಮೊದಲಾದದೋಷ ಪ್ರ | ಕರವನರಿಯದೆ ಬಾಯ್ಗೆಬಂದಂತೆ ಸಮೆದಕೃತಿವಿದ್ವತ್ಸಭಾಯೋಗ್ಯಮೇ || 38 ||

ಸತಿಸಪ್ತಮಿಯಭೇದಮಂ ರಳಕುಳಕ್ಷಳವು | ನತಿಶಯದ ಗಮಕಕ್ರಿಯಾಸಮಾಸಂಗಳಂ | ಶೃತಿಸಹ್ಯಸಂಧಿಯುಂ ತದ್ಧಿತಪದಮನಪಭ್ರಂಶದೇಶೀಯಂಗಳಿಂ || ನುತಮಾಗೆ ಯೋಗಿಪಸಮಾಸಮಂ ಸುಸಮ ಸಂ | ಸ್ಕೃತಮಂ ವಿರಹಿತಾವ್ಯಯೋರು ಸಂಸ್ಕೃತಲಿಂಗ | ತತಿಶಿಥಿಲಪದ ಮುಖಾದ್ಯುಕ್ತ ಲಕ್ಷಣಮರಿವ ಚತುರರೀಕೃತಿಗೊಲಿಯರೆ || 39 ||

ಸರಸತ್ವದಿಂಸಲಕ್ಷಣದಿಂ ಬೆಡಂಗಿನಿಂ | ಪರಮಸೌಂದರ್ಯದಿಂ ಜಾತಿಯಿಂ ಗುಣದಿ ನು | ತ್ಕರವೃತ್ತಿಯಿಂದಲಂಕಾರದಿಂ ಮೋಹನದಭಾವದಿಂ ನಿರ್ದೋಷದಿಂ || ನಿರುಪಮಮೃದೂಕ್ತಿಯಿಂ ಪ್ರೌಢಿಯಿಂ ರೀತಿಯಿಂ | ವರಗಮಕದೆಸಕದಿಂ ದೊಳ್ಪಿಂಸಕಲಕಲಾ | ಸ್ಫುರಣದಿಂದೊಪ್ಪುವೀಕೃತಿಯುವತಿಕೋವಿದರನೇಂ ಸೋಲಿಸದೆಬಿಡುವಳೇ || 40 ||

ಕಣ್ಮಲರ್ಗೆಕಡುರಮ್ಯಮಾಗಿನರುಗಂಪ್ರಸೆರೆ | ಪೊಣ್ಮಲರೆವಿರಿದ ಪೊಂದಾವರೆಯಬಂಡ ನುಂ | ಡುಣ್ಮುವಾನಂದದಿಂ ಪ್ಮೈಮರೆದುಚಿನುಗುವಾರಡಿವರಿಯಲೀಲೆಯಂತೆ || ಜಾಣ್ಮೇರಿಕೋರುವೇರುಂಜವ್ವನದಜೆಲ್ವ | ಪೆಣ್ಮಣಿಯ ಸುಸಿಲಮುಸಕದೊಳಿಂ ಪನುಗುತೊಗೆವ | ನುಣ್ಮಾತುಗಳರೀತಿಯಂತೆ ರಸಿಕರಮನವನಿದುಜಕ್ಕುಲಿಸದಿರ್ಪುದೇ || 41 ||

ಕರಣೇಂದ್ರಿಯವ್ಯವಹೃತಿಗಳೆಲ್ಲವುಂ ಲಿಂಗ | ಕರಣೇಂದ್ರಿಯವ್ಯವಹೃತಿಗಳಾಗಿನಾಡೆ ತಂ | ನಿರವೆಲ್ಲವುಂ ಲಿಂಗದಿರವಾಗಿ ಲಿಂಗದಿರವೆಲ್ಲವುಂ ತಂನದಾಗಿ || ಪರಿಕಿಸಲ್ಕುಸುಮಗಂಧದ ತೆರದಿನನ್ಯೋನ್ಯ | ಪರಿಗತಿಯಿನಮಿತಲಿಂಗಾಂಗಸಂಯೋಗಿ ಯಾ | ದುರುಸುಖಿಯಬೋಧದಂತುಟು ವಿವೇಕಿಗಳಚಿತ್ತವ ನಿದು ವಶೀಕರಿಸದೇ || 42 ||

ಏನಾನುವೊಂದೆರಡು ತಾಣದೊಳಗೊಂದಿದ ರ | ಸಾನಂದದಿಂ ಮರವೆಯಿಂ ಜಾಡ್ಯಭಾವದಿಂ | ದೀನವ್ಯದಿವ್ಯಕೃತಿಯೋಳ್ದೋಷ ಮಿರ್ದೊಡಂ ಪರರ್ಗೆಡೆಗುಡದಪಾಂಗಿನಿಂ || ಮಾನಿತೋಭಯಲಸದ್ಭಾಷಾಪ್ರವೀಣ ಶಿ | ವಾನುಭಾವಿಗ ಳಮತ್ಸರರೆನಿಪ ಭಕ್ತಪ್ರ| ತಾನಮಿದನೊಲ್ದು ತಿರ್ದುಗೆ ತಿರ್ದುವಂತೆ ಕಾವಂ ತನ್ನಪೂವಿನಂಬಂ || 43 ||

ಕೇಳ್ವವರಕರ್ಣಾಭರಣ ವಮಲರಸಜಲಗೂ | ಳಾಳ್ವವರ ಕಾಯಸಂಸಿದ್ಧಿ ಯನುಭವಸುಖದೆ | ಬಾಳ್ವವರಭಾಗ್ಯದೇವತೆ ಕಲಾವಿದರ ಚಿಂತಾರತ್ನವಮರ್ದಸೊಗಸಂ || ತಳ್ವದೊರೆವವರ ಜಿಹ್ವಾಮೃತಂ ಮನವೊಲ್ದು | ತಾಳ್ವವರಹೃದಯಕಮಲಾನಂದವೆನಲಿದಂ | ಪೇಳ್ವೆನಾಲಿಪುದೆಲ್ಲ ಶಿವಭಕ್ತರೇಕೆಂದೊಡಲಂ ನಿಂಮಭೃತ್ಯನದರಿಂ || 44 ||

ಆಶೀರ್ನಮಸ್ಕ್ರಿಯಾವಸ್ತು ನಿರ್ದೇಶಂಗ | ಳಾಶುದ್ಧಕವಿಕುಲಸ್ತುತಿಯಾತ್ಮಶಕ್ತಿಸ | ಕ್ಲೇಶಕವಿಖಂಡನಮೆನಿಪ್ಪಿವಂ ಕೃತಿಮುಖದೊಳುಚಿತದಿಂದಿಡುವುದೆಂಬ || ಈಶಾಸ್ತ್ರ ಮಾರ್ಗಮಂ ಮನ್ನಿಸಿದೆನಲ್ಲದೆ ಮ | ಹೇಶಭಕ್ತರಸಭೆಯೊಳಾತ್ಮಸ್ತುತಿಗೆ ಮನದೊ | ಳಾಶಿಸುವೆನೇ ಅಕಟತನ್ಮಹಾಭಾರತಂಕೋಟಿಮೂರ್ಖಾದೆನೆ || 45 ||

ಆದ್ಯಕೃತಿಗಳ್ಪಲವು ಮುಂಟವಿರ್ದಂತಿದೆಂ | ಹೃದ್ಯಮೇ ನೂತನಕಪಿತ್ಥ ಮೆನ್ನದಿರಿದುವೆ | ಹೃದ್ಯಮೆಂತೆನೆ ಭೋಗಿಸಲ್ಬಲ್ಲ ರಸಿಕಂಗೆಪಳೆದುಪ್ಪ ವೆನಿತಿರ್ದೊಡಂ || ಸದ್ಯೋಘೃತಂಸೊಗಸನೀಯದೇ ಪ್ರೋದ್ಯದನ | ವದ್ಯವಿದ್ಯಾವಿಲಾಸಮದಿರ್ದಬಳಿಕೆ | ವಿದ್ವದ್ಯೋಗ್ಯಮಾಗದೇ ಅಂದಿನವರಿಂದಿನವರೆಂಬದು ಭ್ರಾಂತಿಯೇಕೇ || 46 ||

ನುಡಿಯಲೇನಕಟಶುದ್ಧದಮಡಲೆನಿಪ್ಪಕೆ || ಟ್ಟೊಡಲಾಂತುಕರ್ಮಭೋಗಂಗೆಯ್ದುಕುತ್ತದಿಂ | ಮಡಿವಪುಲ್ವಾನಿಸರುಮಂ ಕ್ಷುದ್ರದೈವಮಂ ಪೊಗಳ್ದುಮುಂನುಳ್ಳ ಮತಿಯಂ|| ಕೆಡಿಸಿಕೊಳ್ವಧಮಕವಿಗಳ ಮಾತವೇಕಿಲ್ಲಿ | ಜಡುಜಡುಸಮಸ್ತಲೋಕಾರಾಧ್ಯನೆನಿಸು ವೆ | ನ್ನೊಡೆಯ ಪದ್ಮರಸದೇಶಿಕ ಶಿರೋಮಣಿಗೆವಾರಿದೆನೆನ್ನ ಮತಿಯನನಿಶಂ || 47 ||

ಮತ್ತ್ರತಿಜ್ಞಾವಚನಮಂ ಕೇಳ್ವುದಿಳೆಯೊಳು | ದ್ವೃತ್ತಾಘರಾದ ಮಾಹೇಶ್ವರವ್ರಾತಂ ಜ | ಗತ್ತ್ರಭುವೆನಿಪ ವಿಶ್ವನಾಥನಂ ಬ್ರಹ್ಮಾಚ್ಯುತೇಂದ್ರಾದಿ ವಿಬುಧನುತನಂ || ತತ್ತ್ರಮಥರೊಳಗಾದರಂ ಪೊಗಳ್ವೆನಲ್ಲದೆ ಯ | ಸತ್ತ್ರಕೃತಿಯೊಳಗನ್ಯರಂ ಬಣ್ಣಿಸಿದೊಡೆಯು | ಷ್ಮತ್ತ್ರಸಾದಕ್ಕೆ ಸೀಡುಂದೂರವಪ್ಪೆನೀಭಾಷೆಯಂಪಾಲಿಸುವುದು || 48 ||

ನಾಸ್ತಿತತ್ವಂಗುರೋಃ ಪರಮೆನುತೆ ಮತ್ತಂ ಪ್ರ | ಶಸ್ತದಿಂ ವಾಙ್ಮನೋತೀತ ಮೆನುತಿಂತುಟು ಸ | ಮಸ್ತ ಸೂಕ್ತಿಗಳಿರಲ್ತತ್ಪರಾತ್ಪರಮ ಗುರುವಂತಾಂನುತಿಸುವಂಗಡಾ || ಪ್ರಸ್ತುತಮಿದಲ್ತೆನ್ನ ದಿರಿಸೀಮಿದಂಮಾಣ್ದೊಡೇ | ನಸ್ತಮವದೇತರಿಂ ಪರೆವುದದರಿಂದೀ ಗು | ರುಸ್ತುತಿಯ ನೆನ್ನಪಾಪಕ್ಷಯಾರ್ಥಂಭಕ್ತಿಯಿಂ ಬಲ್ಲವೊಲ್ವಿರಚಿಪೆಂ || 49 ||

ಆದಿಕರ್ತಾಕವಿಃ ಸಾಕ್ಷಾದೆನುತೆಮೇಣ್ ಪ್ರ| ವೋದದಿಂ ಶೂಲಪಾಣಿರಿತಿಶ್ರುತಿರೆನುತ್ತು | ವೇದಲ್ಪುರಾಣ ಮಷ್ಟಾದಶಸುವಿದ್ಯಾಧಿಪತಿ ಮಹಾಕವಿಶಂಭುವಂ || ವೇದವಿಧಿವಿಧು ಸುರಪಫಣಿಪಗೀಷ್ಪತಿದೇವತಾದಿಗಳ್ಪೊಗಳ್ದುಕಡೆಗಾಣರೆನೆ ಕಿಂಚಿಜ್ಞನಾದೆನಗೆ ಶಕ್ಯಮೇ ಮದ್ವಚಶ್ಶುದ್ಧ್ಯರ್ಥಮಾಗಿ ಬಣ್ಣಿಪೆನಳ್ತಿಯಿಂ || 50 ||

ಭಕ್ತಜನನೇತ್ರಜೀವಂಜೀವ ಚಂದ್ರಮನ|ಭಕ್ತಜನ ನಿರ್ಮಲ ಸ್ವಾಂತಶ ಯ್ಯಾಗೃಹನ| ಭಕ್ತಜನವಿಪದಿಂಧನ ಪ್ರಬಲವೀತಿಹೋತ್ರನ ಜಗದ್ಧಿತಗಾತ್ರನ || ಭಕ್ತಬಾಂಧವನ ಭಕ್ತೇಪ್ಸಿತಾರ್ಥ ಪ್ರದನ | ಭಕ್ತರಕ್ಷಾಮಣಿಯ ಭಕ್ತೈಕವಲ್ಲ ಭನ|ಭಕ್ತವತ್ಸಲನ ಪದ್ಮರಸನೀಕೃತಿಗೆ ಮೊದಲಾವುದೆನೆಮುಂದೆಪೇಳ್ವೆಂ ||51||

ಮದಕುಧರವಿದಳನ ಭಿದುರಪರಮಶಿವ ಭಕ್ತ | ಪದ ಶತದಳಾದಭ್ರಮ ಕರಂದಲೀಲಾ ಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕ ಪ್ರಣೀತಮಾಗಿ || ಸದಮಳಾಖಿಳಶಾಸ್ತ್ರ ಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜ ಪುರಾಣಕಥೆಯೊಳಿಂ | ತಿದು ಪೀಠಿಕಾಸಂಧಿ ಸಕಲವಿಬುಧಗ್ಗೆ ಸನ್ಮುದದ ಪೇಠಿಕಾನುಸಂಧಿ || 52 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶನ ಕೆರೆಯಪದ್ಮ ಣಾರ್ಯನ ಲಸ | ಚ್ಛ್ರೀಶಿವಾದ್ವೈತಸಾಕಾರಸಿದ್ಧಾಂತಪ್ರತಿಷ್ಠಾಪನಾಚಾರ್ಯ ನಾ || ಈಶುದ್ಧಚರಿತಮಂ ತಿಳಿಪಿದಗೊರ್ದದ | ಗಾರ್ಶಿಯಿಂ ಕೇಳ್ದಗೆ ಭುಕ್ತಿ ಮುಕ್ತಿಗಳಂ ಮ | ಹಾಶುಭಂಗಳನಾಯುಮಂಕೊಟ್ಟು ಗುರುರೂಪವಿಶ್ವ ನಾಥಂ ರಕ್ಷಿಪಂ || 53 ||

ಪ್ರಥಮಸಂಧಿ 1 ಕ್ಕಂ ಪದ 53 ಕ್ಕಂ ಮಂಗಳಮಗಮತ್ || ಶ್ರೀ ಶ್ರೀ ಶ್ರೀ ||

---

## 2 ನೆಯ ಸಂಧಿ.

ಶ್ರೀಗುರುರೂಪ ವಿಶ್ವನಾಥಾಯನಮಃ.

ಗುರುಕುಲೋತ್ತಮನ ಸದ್ವಂಶಾವತಾರಮ ನ | ವರ ಚರಿತಮಂ ಸೂ ಚನೆಯಿನುಸಿರ್ದು ಪದ್ಮಣಾ | ರ್ಯರ ಜನನಮಂ ಶೈಶವಮನಮಲವೃತ್ತಿಯಂ ಪೇಳ್ವೆಂಬುಧಪುಳಕಿಸೆ || ಪದ ||

ಧ್ವಸ್ತದುರಸುರಸುರಶಿರಸ್ತಟೋಪರಿ ಪರಿ | ನ್ಯಸ್ತಪದಪದನಖಗ ಭಸ್ತಿವೃ ತಲೋಕ ಲೊ | ಕಸ್ತೋಮ ವರವರದ ಹಸ್ತಹಸ್ತಸ್ಥಿತಸಮಸ್ತ ಶುಭಶುಭದಾ ಯಕ || ಅಸ್ತಮಿತದುಷ್ಕೃತಕೃತಸ್ತವ ಸುಭೋಗದ ಗ | ದಸ್ತೋಭಹರ ಹರನಿರಸ್ತಯಮಮಯುತ ಮ | ನಸ್ತತತತಪ್ರೀತಶಸ್ತ ಮೃತ್ಯುಂಜಯಜ ಯಾಸ್ತೋಕ ವಿಶ್ವನಾಥಾ || 1 ||

ಪರಮಗುರುಶಿವಯೋಗಿ ಮಲ್ಲಿಕಾರ್ಜುನ ಪಂಡಿ |ತರ ತದಾತ್ಮೋದ್ಭವ ನೆನಿಪ್ಪಸಕಲೇಶ ಮಾ | ದರಸರ ತದುದರಭವನಾದದೇಶಿಕಶಿಖಾಮಣಿ ಮಾ ಯಿದೇವಾರ್ಯನ || ಚರಿತಮಂಟಣ್ಣಿಪೊಡೆ ವಿಶ್ವಪತಿಗಲ್ಲ ದುಳಿ | ದರಪವಣೆಬ ಲ್ಲ ನಿತನೊರೆವೊಡಂಪದ ಭಾರ | ಕಿರದಕ್ಕಿ ಸಂಕ್ಷೇಪದಿಂಪೇಳ್ವೆ ನರಿವರಾನಂ ದಿಪವೊಲೆಂತೆಂದೆನೇ || 2 ||

ಪಾವಕಾಂಬಕನೆಪತಿಯಾಮೆಲ್ಲರುಂ ಪಶುಗ | ಳೀವಾಕ್ಯಮಂ ಪ್ರತಿಷ್ಠಿ ಪೆನೆಂದು ವಿಷ್ಣ್ವಾದಿ | ದೇವಕುಲಮೆಲ್ಲಂನೆರೆದು ಮಿಸುನಿಯಿಂಸಮೆದು ನಿಲಿಸಿ ದಜಯಸ್ತಂಭವೋ || ವೋವೊದೀಪಾರಾಧನೆಯ ಮಹಾಫಲವೆಂದು |ಭೂವನಿತೆ ಭರ್ಗಂಗೆ ನೆತ್ತಿಯೋಳ್ಪೊತ್ತ ಸೊಡ | ರೋವಿಚಾರಿಪೊಡೆನಿಸಿ ಪೊಂಬೆಟ್ಟಿಸೆ ವುದದರ ತೆಂಕಲುರೆಬಿಂಕಮಾಗಿ || 3 ||

ಕರ್ಣಾಟದೇಶವೊಪ್ಪುವುದದರ ಮಧ್ಯದೊಳ|ಗರ್ಣವಂ ಕೊರಲಹಾರ ಮೆನಿಪ್ಪ ಭೂಸತಿಯ | ಪೂರ್ಣೇಂದುವದನವೋಎನಿಪ ಚೆಲ್ವಿಂಕಲ್ಲಕುರಿಕೆಯೆಂ ಬನುಪಮ ಪುರಂ|| ಸ್ವರ್ಣನಿರ್ಮಿತ ಹರ್ಮ್ಯಕುಲದಿಂಸುರಥ್ಯಾವಿ | ಕೀರ್ಣತೆ ಯಿ ನಶ್ವಗಜಶಾಲಾವಿಶಾಲದಿಂ | ವರ್ಣನೆಗಳುಂಬಮಾದಪಿಲ ವಿಭವಂಗಳಿಂದೆ ಸೆವುದಾನಗರಿಯಲ್ಲೀ || 4 ||

ಶ್ರೀಪರಂಜ್ಯೋತಿಸ್ಸ್ವರೂಪನ ಲಸತ್ಕೃಪಾ | ಕೂಪಾರ ವಿಶ್ವನಾಥನ ಸರ್ವಸಾಮರ್ಥ್ಯ | ವೇಪಶೂದ್ಧರಣಾರ್ಥಮಾಗಿ ಯುಪಚಾರದಿಂಜನಿಸಿ ದಿನದಿ ನಕೆಬಳೆದು|| ಭಾಪುರೇಗುರುಮಲ್ಲಿಕಾರ್ಜುನಪ್ರಭುವೆಂಬ | ಪಾಪಕ್ಷಯಾಖ್ಯದಿಂ ನೆಗಳ್ದುಶಿವತೇಜಃ ಕ | ಲಾಪದಿಂ ಶೈವಸಾಮ್ರಾಜ್ಯಮಂ ಪಾಲಿಸುತೆಭೂಪಾಲ ವೃತ್ತಿಯಿಂದೇ || 5 ||

ಕಲ್ಲಕುರಿಕೆಯೆರಾಜಧಾನಿಯಾಗೆಸೆಯೆ ಜನ | ರೆಲ್ಲರಂ ಲಿಂಗೈಕ್ಯರಂ ಮಾಡಿಭಕ್ತಿಲತೆ | ಪಲ್ಲವಿಸಿಪರ್ವಿಮಡಲಿಡೆ ಕಡಲುಡಿಗೆಯಾದ ಪೊಡವಿಯೋ ಳ್ಪಿಡದೆನಿಲಿಸಿ || ಉಲ್ಲಾಸದಿಂಕೆಲವು ಬರಿಸಮಿದಾ೯ಸುಖಮ | ನೊಲ್ಲದುರೆ ಮಾಯಾಂಶ್ವವದ್ರಹೇದೆಂದುಸಿರ್ವ | ಸಲ್ಲಲಿತಸೂಕ್ತಿಯಿಂ ನಾಯ್ಗೆಸರಿಗಂಡು ಮಾಯಾರಚನೆಯಂವರ್ಜಿಸೀ || 6 ||

ವೈರಾಗ್ಯದಿಂ ಶ್ರೀಗಿರಿಯನೆಯ್ದಿ ತದಚಲಾ | ಗಾರನಂ ಮಲ್ಲೇಶನಂ ಸ್ಮರಿಸೆ ದೇಶಿಕಾ | ಕಾರದಿಂ ಬಂದುಸಂತಪಿಸಿ ತನ್ನಗದಮಹಿಮೆಯನೆಲ್ಲವಂ ತೋರಿಸಿ || ಚಾರುಚಿದನುಗ್ರಹಂಗೆಯ್ದು ತುಂಯತಿಕುಲ | ಕ್ಕಾರಾಧ್ಯನಾಗಿವು ತ್ಸಾಮರ್ಥ್ಯರೂಪ ನೀ | ನೀರಮ್ಯಬಿಲ್ವವನದಲ್ಲಿ ಶಿವಯೋಗಿಮಲ್ಲರಸರೇ ಸರ ಸರೆನಿಸೀ || 7 ||

ಆನೆನ್ನೆ ವರಮಿಾಗಿರಿಯೊಳಿರ್ಪೆ ನನ್ನೆವರ | ಮಿಾನವ್ಯದಿವ್ಯ ಪುಣ್ಯಕ್ಷೇತ್ರ ದೊಳಗಾನೆ | ನೀನಾಗಿವಿಹರಿಸೆಂದಾಜ್ಞಾಪಿಸುತೆ ಶಿವಂತನ್ನಹೃದಯದೊಳಡಂ ಗೇ || ಆನಿರತಿಶಯಸುಖಸುಧಾಂಬುಧಿಯೊಳೋಲಾಡು | ತಾನತಸುರದ್ರುಮಂ ಶಿವಯೋಗಿಮಲ್ಲರಸ | ನೇನೆಂದುಬಣ್ಣಿಪೆನದ್ವೈತ್ಯಾಕೃತಿಯಿ ನೀಶಸಾಮ್ಯವೃತ್ತಿ ಯೊಳೊಪ್ಪಿದಂ || 8 ||

ಆಮಲ್ಲಿಕಾರ್ಜುನಾಚಾರ್ಯಪುತ್ರನ ಮುಕ್ತಿ | ಕಾಮಿನೀಮುಖಲಲಾಮನ ಶಿಷ್ಯಕುಲ | ಸಾರ್ವಭೌಮನ ಚರಿತ್ರವೆಂತೆನೆ ಪೂರ್ವದಲ್ಲಿರುದ್ರಗಣಂಗಳೋಳ್ಮೊ ಳಗುವ || ಶ್ರೀಮಹಾಸಹನೇಶಗಗನೇಶ ರೀರ್ವರೊಳ | ಗೀಮಾತೊ ಗಗನೇಶ ನೆಂಬವಂ ಚಿದ್ವಿಲಾ | ಸಾಮೋದದಿಂ ಕ್ರಿಯಾನಿಷ್ಠನಂನೋಡಿ ಕಿಂಚಿತ್ತ್ರಹಸಿ ತಾಸ್ಯನಾಗೆ || 9 ||

ಸಹನೇಶನಾಮಿತ್ರನಂ ಕಟಾಕ್ಷಿಸಿಕೋಪ | ಸಹಿತನಾಗುತ್ತೆಂದನೆಲೆಚಿ ತ್ಕ್ರಿಯಾದ್ವಯದೊ | ಳಹಹ ನೀಂಚಿದ್ವಿಶ್ರಮಣನಾಗಿ ಸತ್ಕ್ರಿಯಾನಿರಸನಂ ಗೆಯ್ದೆಯದರಿಂ || ಮಹಿಯೊಳುದ್ಭವಿಸಿ ಯೆರಡೇಳ್ನೂರು ಬರಿಸಮುಂ | ಮಹಿತ ಕ್ರಿಯಾಜ್ಞಾನ ವಿಹಿತವೃತ್ತಿಯೊಳೆ ನಿ | ರ್ವಹಿಸಿತದ್ಯುಗಮಂ ಪ್ರತಿಷ್ಠಿಸಾಸು ಪ್ರತಿಷ್ಠೆಯೆ ಎಂಮಶರಣಮಾರ್ಗಂ || 10 ||

ವರಚಿದಸ್ಥಿತನಾದೊಡಂ ನಿಷ್ಕ್ರಿಯನನೀಶ | ಶರಣರೊಪ್ಪರದೆಂತೆನಲ್ತು ರುಣಿತನ್ನನಿಜ | ದಿರವಿನಿಂಮೋಹಿಸುವ ರೂಪವತಿಯಾದೊಡಂ ವಸ್ತ್ರಭೂಷಣ ಸುಮಾಲ್ಯ || ಪರಿಮಳಾದಿಗಳಿಂದಲಂಕರಿಸಿಕೊಳ್ಳದೊಡೆ | ಪುರುಷರೆಂತೊಪ್ಪರಂ ತದರಿಂದೆ ತದ್ಯುಗ | ಸ್ಫುರಣಮಂಮಾಡು ನಿನಗಿದು ಜಗದ್ಧಿತಕಾರ್ಯಮೆನೆಯದಂ ಮನದೆಗೊಂಡು || 11 ||

ಗುರುಮಲ್ಲಿಕಾರ್ಜುನಪ್ರಭುಗೊಗೆದುಬಳಿಕವಂ | ಪರಮವೈರಾಗ್ಯಸ್ಥನಾಗೆಯಾತನರಾಜ್ಯ | ದುರುಭಾರಮಂಧರಿಸಿ ಚಿರಕಾಲಮಧಿಕಪ್ರತಾಪದಿಂದರಸುಗೆಯ್ದು || ಹರಭಕ್ತಿಯಂಪ್ರತಿಷ್ಠಿಸಿ ದಿವ್ಯಹರ್ಷದಿಂ | ದಿರುತೊಂದುಪಗಲಲ್ಲಿ ತವ್ಮಯ್ಯನಾದ ಮ | ಲ್ಲಿರಸರವಿರತಿಗೇಳ್ದು ಸಾವ್ರಾಜ್ಯಭೋಗಮಂಪರಿಹರಿಸಿ ಚಿಚ್ಛಕ್ತಿಯಿಂ || 12 ||

ವೈರಕ್ತ್ಯವೃತ್ತಿಯಿಂ ಪೊರಪೊಡಲೊಡಂ ತನ್ನ | ನಾರಿಪುತ್ರಂ ಸೊಸೆಕೆಲವುಬಕತರೊಡವರ | ಲ್ಮಾರಾರಿಯಾಂ ಬಿಟ್ಟೊಡಂನಿನ್ನವಾಯೆ ಬಿಡದೆನುತೆಬರೆವರೆಮುಂದಣ || ದಾರಿಯೊಳ್ಭಕ್ತಿಕಾಂತೆಯಸವಿಸ್ತಾರ ರ | ವ್ಯೊರಸ್ಥಲವ್ರೊಭಾವಿಸುವೊಡೆನಿಸಿ ಯಂಬೆಯೆಂ | ಜೂರೆಸೆದುದಲ್ಲಿರ್ದ ಭಕ್ತರಿವರೆಯ್ತುರ್ಪವಾರ್ತೆಯಂಕೇಳ್ದುನಲಿದು || 13 ||

ಸರ್ವಸಂಭ್ರಮಸಹಿತರಾಗಿ ಬಂಬವಿಗೊರ್ಂಡ | ಖರ್ವಸುಶ್ರದ್ಧಾಪುರಸ್ಸರಮವರ ನತ್ಯ | ಪೂರ್ವೋಪಚಾರಂಗಳಿಂದೆ ಮನ್ನಿಸಿತಮ್ಮಭಕ್ತಿನಿರ್ಮಲಪಾಶದಿಂ || ಪರ್ವತಕ್ಕಡಿಯುನಿಡಲೀಯುದೆ ತಡೆಯುಲೊಡಂ | ಸರ್ವಜ್ಞಸಕಲೇಶ್ವರನ ತಂತ್ರವಿಂತಿದಂ | ನಿರ್ವಹಿಸಲೇವೇಳ್ಕು ಮೆಂದಖಿಲ ಶಿವವೈಭವಂಗಳಂಸಂಗ್ರಹಿಸುತೆ || 14 ||

ಪನ್ನೆರಡುಪೊನ್ನಿಂಸಮಸ್ತ ಪೂಜಾದ್ರವ್ಯ | ಮಂ ನಿಜ್ಜ ಪೊದವಿಸೆ ಶಿವಾರ್ಚನಮನತಿಸಾಂಗ | ದಿಂ ವಿಮಿರ್ಚಿಯನಂತರಂ ಬಳಸಿಮೆರೆವ ಮೂವತ್ತೆರಕ್ಷೋಣಿಯೊಳಗೆ || ಪನ್ನಗಧರಂಗಿಷ್ಟಮಾದುದು ಲಿದೊಡೆತೆಗೆದ | ದಂ ನಾಡೆಶಂಕರಂ ತಲೆದೂಗೆಬಾಜಿಸು | ತ್ತುಂನಾದ ವಿದ್ಯಾಪ್ರವೀಣನಿಳೆಯಂ ಶಿಷ್ಯರಂಮಾಡಿ ಮಹಿಮೆವೆತ್ತು || 15 ||

ಸರಳವೃತ್ತಂ ಕಲಾಸ್ಫೂರ್ತಿ ಲೇಖಸ್ತುತಂ|ಶರಣಸಿಧಿ ಮಾನ್ಯಂ ದಳಿತಕಲ್ಪಸಂವರಮಾ | ಕರವಿಗ್ರಹಂ ಸರಸವಿಸರಸರಸಂ ರಂಜಿತಾಂತರಂಗಂಪವಿತ್ರಂ|| ದುರಿತಾರಿ ಮಿತರಹಿತಸುಮಹಿಮಂ ದೇವಗುಣ| ಸಿರಸನಂ ವಂದಿತಾಖಿಲಜನಂ ಭಕ್ತಸುರ | ತರು ಜಿತಾಕ್ಷಂ ಸಿದ್ಧಿದಂ ದಂಭವೈರಿ ಮಾದರಸರೊಪ್ಪಿದರೆಂತೆನೆ || 16||

( ಈ ಪದದ ಪ್ರತ್ಯೇಕ ಪದಂಗಳ ಮೊದಲಕ್ಷರಂಗಳ ಕೂಡಿ ಯೋಚಿಸೊಡೆ ಸಕಲೇಶ ಮಾದರಸರಂ ಪದುಮಿದೇವಂ ಭಜಿಸಿದನೆಂದಿರ್ಕು ಮಿದೊಂದು ಪ್ರಬಂಧಂ|| )

ಸರ್ವಜನದಾಯುಷ್ಯಕಲ್ಪನಾರ್ಥಂಶತಾ | ಯುರ್ವೃಯೆನುತ್ತೆ ಪುರ್ವ ಷೊಯೆಂದೆನುತ್ತಿರ್ಪ | ಖರ್ವವೇದದಹಾದಿಯೋಳ್ಮೃಳ್ನೆಳೆದು ಲೋಕವನಗಿ ವಕಾಲನೆಂಬ || ದರ್ವೀಕರನದಾಡೆಯಂ ಕೀಳ್ತವಧಿವಿಧಿಗ | ಳಿರ್ವಗೆ‌ತೊಳ್ತು ಗೆಲಸವನಿತ್ತುರೋಗಂಗ | ಳುರ್ವಿನಂಕುರಮಂಚಿವುಂಟಿ ಕರ್ಮದಸಿಯುಬೇ ಗೆ ಬಿಸುಸೀರನೆರದು || 17 ||

ಅರರೆಸಾವಿರದಮುನ್ನೂರಮೂವತ್ತೆಂಟು | ಬರಿಸಮುಂದಿಂಗೆಸಲಶೊಂದು ದಿವಸಂಬಡವ | ನುರುಶಿಷ್ಯನಾದೇಶಿಕಾರಾಧನಕೆ ಧನಂದೊರಕದಿರೆ ಧೃತಿಗುಂ ದದೇ || ವರಸುತೆಯಸೊತ್ತೆಯಿಟ್ಟಾ ಪನ್ನೆರಡುಪೊಂನ | ನಿರದೆಗುರುಪಿಂಗರ್ಪಿ ಸಲ್ಕಿತ್ತಮಾದಾಂಬೆ | ಸರಿದಪಳೆನುತೊತ್ತೆ ಗೊಂಡವನವಳಕಾಲ್ಗೆ ಪಟ್ಟಳೆವೊ ಲಿದುಕೊಂಡಿರೆ || 18 ||

ಇತ್ತಗುರುಲಿಂಗಾರ್ಜನಂಗೆಯ್ಯುತಾರತಿಯ | ನೆತ್ತುತಿರೆಯಾರಮ್ಯಗ ರ್ಭದೊಳ್ತೊಳತೊಳಗಿ | ತತ್ತರುಣಿಪಟ್ಟಳೆವೆರಸಿ ತೋರೆಸಾಶ್ಚರ್ಯಮನನಾಗಿತಚ್ಛಿ ಷ್ಯನಿಂ || ವೃತ್ತಾಂತವೆಲ್ಲವನರಿದು ಕೊರಗಿಯಾಮಗಳ | ನೊತ್ತೆಗೊಂಡಿರ್ದ ನಿಂಬಿಡಿಸಿಭಕ್ತಗಿರೀವಿ | ಪತ್ತೆಮ್ಮಕತದಿನಾಯ್ತುಕಟನುತ್ತವನನುದ್ಧರಿಸಿಸತಿಯಂ ಭಾವಿಸೀ || 19 ||

ವರಪುತ್ರಮಾಯಿದೇವಾರ್ಕರಂಕರೆದು ನೀ | ನಿರುನಿನ್ನಗರ್ಭದೋಳ್ಪನಿಸು ವಂತರುಣೆಂದು | ಧರಸಮಾನಂಕಾರಣಿಕನೊರ್ವ ನಾಮಹಾಪುರುಷನಿಂದೀಶ ಕೃತ್ಯಂ || ಪರಿಪೂರ್ಣವಪ್ಪುದೆಂದಾಭವಿಷ್ಯತ್ಕಾರ್ಯ | ದಿರವನಮಲಜ್ಞಾನನೇತ್ರ ದಿಂಕಂಡುಪೇ | ಳ್ದಿರಿಸಿಶಿಷ್ಯವ್ರಾತಮಂಕಳಿಪಿ ವೈರಾಗ್ಯದಿಂದೆಪರ್ವತವನೆಯ್ದಿ || || 20 ||

ಮಲ್ಲಿಕಾರ್ಜುನಯತೀಂದ್ರನನರಸಿಪೋಪಪಥ | ದಲ್ಲಿಯದ್ಭುಂಗಟ್ಟಿಭ ಸ್ಮಾಗ್ರಿವೊಲ್ಕುರುಪ | ನೆಲ್ಲಿಯುಂಕಾಣಿಸದೆ ತಪ್ಯೋಗಿಪಟ್ಟಿರೆಮುಡಿಯುದೆಸೆಗೆ ಮೂರುಬರಿಸಂ || ಸಲ್ಲಲಿತನರಸಿಕಾಣದೆಬಳಲ್ದುಡಿಯತ್ತ | ತಲ್ಲಣಿಸುತೆಂಟು ಬರಿಸಂನಡೆದುಭಕ್ತಿಲತೆ | ಪಲ್ಲವಿಸಿಪರ್ವವೊಲ್ನುತಿಸೆ ತದ್ಭೀಕರಾಕೃತಿಯನು ಳಿದಾಮುಪಾತ್ಮಂ || 21 ||

ತಂನಮುಂಂನಿನೞೆನ್ನರೂಹುದೋರಿಸಿ ಶರಣ | ನಂನೇಹದಿಂದಪ್ಪಿಯಾಶ್ರಾಮಕೆ ಕೊಂಡೊಯ್ದು | ಮಂನಿಸಿ ಶಿವಾನುಭವದಲ್ಲಿನಿಸುವೊಳ್ತಿರಿಸಿಕೊಂಡಿರ್ದುಮಗನೆನ್ನಿನಗೆ || ಇಂನುಂಥರಣಿಯೊಳೈವತ್ತುಬರಿಸದವರ್ತ | ನಂನೆರೆವುದದನೆಂಮಬಸವಾದಿಗಳ್ಭಕ್ತಿ| ಯಂನಿಲಿಸಲೆಂದು ಕಲ್ಯಾಣದೋಳ್ಬಂದಿರ್ಪರವರೊಡನೆ ಕಳಿಯೆಂದೆನೇ || 22 ||

ಗುರುವೆನಿಮ್ಮಂಘ್ರಿಯಂಬಿಡಲಾರೆನೆಂದೊರಲು | ತಿರೆಯುಂತೆಗೆಯ್ಯಂದುತಂದೊಂದುಬಬರ್ಬೂರ | ಧರಣೀಜದಡಿಯೊಳಗಿರಿಸಿ ತತ್ತ್ವೋಪಧಿಯನರುಪಿಮುರುದೆವಸದಲ್ಲಿ || ಒರೆವೆನೀತನಮನವನೆಂದುಗೋಪಾಕೃತಿಯೊ | ಳಿರದೆಯ್ದಿಕಡುನೋಯಿಸಲ್ಕವಂಕಿನಿಸೆನಗು | ತುರುನಿಜಾಕಾರಮಂ ತೋರಿನಾಣ್ಚಿಸಿಶಾಂತಿದಾಂತಿಯನುವಂ ಬೋಧಿಸಿ || 23 ||

ಇಂದಿಂಗೆಸಾವಿರದನಾನೂರು ಬರಿಸಕ್ಕೆ | ಕುಂದಾದುದೈವತ್ತುಬರಿಸಮುದುನೆರೆಯೆನಿ | ನ್ನಂ ದಿವ್ಯಸಹಜಸಮ್ಯಕ್ಸಂವಿದಮಲಸಂಯೋಗ ಸೌಖ್ಯದೊಳೊಂದಿಪೆಂ || ಕಂದಬೇಡಿಷ್ಟವೇನೆನೆ ಪರಸ್ತ್ರೀಲಕ್ಷ್ಮಿ | ಹೆಂದದಾಯುಮೆಮಾಯೆಗೀಡು ಸುರಪದವಚಿರ | ಸಿಂದುಧರಪದವಿಕೈಲಾಸವಾನಂತರಿಂ ದೆರೆಯೆನವನೆನ್ನಮನವಂ || 24 ||

ಹರಣದೆರೆಯನೆನೀನೆಬಲ್ಲೆಯೆಂದೀತೆರದೊ | ಳೊರೆದೊಂದುಗೀತಮುಂಸಾಷ್ಟಾಂಗದಿಂದೆರಗೆ | ಗುರುವರಂಕಲ್ಯಾಣಪುರದ ಬಸವಣನಮುಂದಿಳಿಪೆಯಾತಂತನ್ನಯೀ || ಕರದಸಂಗಮನಾಥನೋಳ್ಕಂಡು ನಲಿದುಬಂ | ದಿರದೆದಂಡಪ್ರಣಾಮಂಗೆಯ್ದು ಸತ್ಕರಿಸಿ | ಪರಮಾನುಭವಗೋಷ್ಟಿಯಿಂದಿರುತಿರಲ್ಚಿಕ್ಕಮಾದಂಣನೆಂಬಶಿಷ್ಯಂ || 25 ||

ಮನೆಯೊಳಿರ್ದಂತಿರ್ದು ಲಿಂಗೈಕ್ಯನಾಗೆತ | ತ್ತನಯನಾಸ್ಥಿತಿಯನರುಹಿಸೆಕೇಳ್ದುಸಕಲೇಶ್ವ | ರನ ನಿರೂಪವಿದೆಂದು ಬಂದವಂಗಸುವಿತ್ತು ಬಸವಾದ್ಯಸಂಖ್ಯಾತರಂ || ವಿನುತಮುಕ್ತಿಗೆಸಲಿಸಿ ಯೈವತ್ತುಬರಿಸವಂ | ದಿನ ದಿನಕ್ಕಾಗೆಯಲ್ಲಿಂತಳರ್ದುದಾರಿಯೊಳ | ಗನಘಶರಣಂಗೊಪೆಯಶಿವದೇವನೆಂಬವೀರವ್ರತಿಯಪುರಮೆಸೆದಿರೆ || 26 ||

ತನಗೆಸೀವಮಾಲಂಘನವ್ರತಮೆಸೆಯೆನಿಜ ಸ | ದನದಲ್ಲಿಯೊಂದುಗೊಸ ಯಂತೋಡಿಕೊಂಡು ತ | ನ್ನನುವಿಂಗೆ ಕೊರತೆಬರೆಯಸುಗಳಿವೆಸೆಂಬಸಿಷ್ಠೆಯು ನಾಂತುವಿಜಯಿಯಾಗಿ|| ಅನಘಸಕಲೇಶಮಾದರಸ ರಡಿದಾವರೆಯೊ | ಳನು ದಿನಂ ನಿಜಮನೋಮಧುಕರನ ಸಾಡಿಸುತೆ | ವಿನುತನಾದಸಮುಶಿವದೇವನಪುರಂ ಬೊಕ್ಕುತದ್ಗೃಹಾಂತರಮನೆಯ್ದೆ || 27 ||

ಕಾಣುತಷ್ಟಾಂಗದಿಂನಮಿಸಿ ನುತಿಸುತ್ತೆ ಮ | ತ್ಪ್ರಾಣೇಶ ಭವಸಾಶ ಘನ್ನನಾದೆನೆನುತ್ತೆ | ಜಾಣೆಸೆಯೆಸತ್ಕರಿಸಿ ಬಸವಾದ್ಯರೈಕ್ಯಮಂ ಕೇಳ್ದೆನಗೆ ಗುರು ದರ್ಶನಂ || ಪ್ರಾಣದಂತೊದವಿತ್ತಿದೇ ಕಾಲಮೆನುತೆ ತ | ತ್ಪ್ರಾಣಲಿಂಗದೊಳಾ ರ್ಯನಡಿವಿಡಿದಡಂಗೆ ಯ | ಕ್ಷೀಣಶಿವದೇವನಂ ಮೆರೆದಾತನಂಪೊಗಳುತಲ್ಲಿಂದ ನಡೆತರುತಿರೆ || 28 ||

ಮುಂದೊಂದುನಗರಿಯೊಳ್ಪರಮಶಿವ ಭಕ್ತನ | ರ್ಧೇಂದುಧರಶರಣ ಪೂ ಜಾಸಕ್ತನಮಲಗುಣ | ವೃಂದಯುಕ್ತಂ ಗುರೋರಾಜ್ಞಾಂನಲಂಘಯೇದೆಂಬ ತಚ್ಛ್ರುತಿಗೆಚಿತ್ತಂ || ಸಂದುಗುರ್ವಾಜ್ಞೆಯಂಮೀರದತಿಗುರುನಿಷ್ಠೆ | ಯಿಂದೆಮ ಹಲಿಂಗರಾಮನವೀರಸೆಂಬ ಶಿ | ಷ್ಯಂದಿವ್ಯಸುಖದಿನಿರೆಯಾತನೂರ್ಗೆಯ್ದಿತನ್ನಿ ವಾಸಕ್ಕೆಗಮಿಸೇ || 29 ||

ತನ್ನಗುರುವಂಕಂಡುವಿನುತಿಸುತೆ ಸಾಷ್ಟಾಂಗ | ದಿಂನಮಿಸಿ ನಿರ್ವಂಚ ಕತ್ವದೆಭಜಿಸಿ ಗುರುವಿ | ನುನ್ನತಶಿವೈಕ್ಯ ಸಮಯುವನರಿದು ಮುಕ್ತಿದಗುರುಪ್ರ ಯೆನಗೆಮರ್ತ್ಯದಲ್ಲಿ || ಇನ್ನಿರ್ಪುದಾಗದೆಂದಡಿಗೆರಗೆ ಶಿವಮಂತ್ರವಂನೆನೆವುತವ ನನೆತ್ತಿಗೆಕರಮನಿಡೆಯಿದಾಂ | ಮುಂನೊಗೆದಪಥವೆನುತಡಂಗೆಯುವನಂ ಮೆರೆದು ಪರ್ವತಾಶ್ರಮವನೆಯ್ದಿ || 30 ||

ಅಮಿತಮಲ್ಲರಸರಂಕಂಡು ಶಿವಲಿಂಗದ | ಲ್ಲಮೃತವಮೃತ ದೊಳಂಬು ವಂಬು ವೊಳ್ಬೆರಸಿದಂ | ತಮಳ್ಳೈಕ್ಯನಾಗಿಸಕಲೇಶ ಮಾದರಸನುತ್ತಮ ಸರಸಸಿ ತರವಿರಸಂ || ಸುಮಹದವಿಕಲ್ಪನಿಜ ನಿತ್ಯನಿರತಿಶಯೈಕ | ರಮಣೀಯ ಸತತೋ ದಿತಾಖಂಡಿತೋರುನಿಭ್ರಮ ನಿರಾವರಣ ನಿರುಪಾಧಿಕಚಿದಂಬುಧಿಯೊಳೋಲಾ ಡುತೊಪ್ಪುತಿರ್ದಂ || 31 ||

ಹರಭಕ್ತಿಲತೆ ಕವಲ್ವರಿವುದೀತನಿನೆಂದು | ಮರರೆದೃಷ್ಟಂದೋರ್ಪವೊ ಲ್ಕವಲ್ತವು ತತ್ತ್ರ | ಚುರಮಾಗಿ ಕುರುಳೋಳಿಮುಂದೆ ಪರವಾದಿಗಳ ವದನಂಗ ಳೀಮಾಳ್ಕಿಯಿಂ || ಅರರೆಕಂದುವವೆಂದು ಕಾಣಿಸಂತಮ ಮಿಹೀ | ವರಕುಚಾ ಗ್ರಂ ಕರ್ಪೂದಳೆದವೀತನೆ ಜಗಕೆ | ಗುರುವಪ್ಪನೆಂದು ತೋರ್ಪಂತೆ ಗೌರವ ಮಾಗಿಮೆರೆದುದುದರಂತಸ್ಸಿಯಾ || 42 ||

ತಾಪತ್ರಯಂಗಳೀ ತನಯನಿಂದಳಿವ ವೆಂ | ದಾಸರಿಯುರಿಪ್ಪವಂತೆವಳಿ ಯಡಂಗಿದುವು ಬಳಿ | ಕೀಪುತ್ರನೊಗೆಯಲಿಳಿಕೆಯ್ಯುರ್ದ ಶಿವಸಮಯಮುನ್ನತ ಮೆನಿಪ್ಪುದೆಂದು || ಭಾಪುರೇಧರೆಗೆತೋರ್ಪಂತೆ ನಾಭೀವಲಯ | ಮಾಪಪತ್ರಾಂ ಗಿ ಗುಪ್ಪಿದುದ ಮಲನೊಳಗಿರ್ಪ | ಸ್ಯೆಪಿಂಗೆ ಪೆಚ್ಚಿಪೊಡೆರೋಮಾಂಚ ವಾಂ ತಂಪೆರೋಮಲತೆ ಕಾಣಿಸಿದುದು || 43 ||

ಮಲಪರಾಗಮ ಚತುಷ್ಪಾದಂಗಳೊಕ್ಕ್ರಮಂ | ಫಲಿಸೆಮೆಲ್ಲನೆ ಶಿಷ್ಟ ರಂನಡೆಯಿಪಂದ ವೀ | ಕುಲತಿಲಕ ಶಿಶುಗಪ್ಪುದೆಂದದಂ ನಟಿಸಿತೋರ್ಪಂತೆ ನಡೆಮೆಲ್ಲನಾಯ್ತು || ವಿಲಸದಲಸಾಪಾಂಗ ಮಾಪಾಂಡುಗಂಡಮು | ಜ್ವಲ ಸುವಾಸೀಲ ಚೂಚುಕಮಲಘುಜಠರ ಮೊ | ಪ್ಪೆಲತಾಂಗಿ ಯುದರದೊಳ್ಳಿನದಿನ ಕೆ ಬಳೆದನಾಗುತಿರೆ ನವಮಾಸವಂದು || 44 ||

ಪಲ್ಲವಾಧರೆಯಿಂತೆಸೆಯಲವಳುದರ ಮಧ್ಯ | ದಲ್ಲಿ ಜಿನದಿಸಲಿಕ್ಷೆ ವಟ್ಟಾ ತ್ಮಪುದ್ಧಿಯಂ | ಸಲ್ಲಲಿತಯುಮನಿಯಮ ಮಾರ್ಗದಿಂಮಾಡಿ ಪದ್ಮಾಸನಾಸೀ ನನಾಗಿ || ಮೆಲ್ಲನಿಡೆಯಿಂ ಪ್ರಾಣವಾಯುವಂ ಪೂರಿಸುತೆ | ಸಲ್ಲೀಲೆಯಿಂದದಂ ರೇಚಿಸುತೆ ಪಿಂಗಲೆಯಿ | ಸುಲ್ಲಾಸದಿಂದೆತತ್ಸೂರ್ಯನಿಂ ಪೂರಿಸುತ್ತಾಚಂದ್ರ ನಿಂದೆಮತ್ತಂ || 45 ||

ರೇಚಕಮನೆಸಗುತಲ್ಲಲ್ಲಿ ಸೋಪಂಭಾವ | ದಾಚರಣಮಂಪಿಡಿದೆ ಮೇಲೆತತ್ಪ್ರಾಣದ ಮ | ಹಾಚಾರಮಂ ಕುಂಭಿಸುತೆ ಚತುಃಪೀಠದೊಳ್ಪ್ರಾಣವ ಮಂ ನಿಲಿಸುತೊಲಪಿಂ || ಆಚಾರುಕುಂಭಕಾಷ್ಟಕ ದೊಳಾಕೇವಲಮ | ನಾಚರಿ ಸುತುಂ ಮೂಲಬಂಧಮಂ ಬಲಿದು ತ | ತ್ಪ್ರಾಚುರ್ಯದಿಂದ ಪಾನಪ್ರಾಣಯೋಗ ಮಾಗಲ್ಕೆ ಜಠರಾಗ್ನಿಯುಣ್ಮೆ || 46 ||

ವರನಾಭಿಜಕ್ರದೇಶಸ್ಥ ಕುಂಡಲಿಯ ನತಿ | ಭರದಿ ಸೆಳ್ಪಿಸಿಯೂರ್ಧ್ವ ಮುಖದಿಂದಮದು ಚಾರು | ತರಸುಷುಮ್ನಾ ಮುಖದಿನೆಯ್ದುತುಂ ಗ್ರಂಥಿತ್ರಯಪ್ರಭೇದನಮನೆಸಗೇ || ಪರಮಹರ್ಷದಿನಲ್ಲಿ ವಾಯುವಂ ಪೂರಿಸುತೆ| ಕರಮೆಕುಂಭಿಸುತಿಂತು ತದ್ವ್ವಾರಶುದ್ಧಿಯಂ | ವಿರಚಿಸಿಯನಂತರ ಮಧೋಮುಖಾಂಬುಜ ಗಣಮನೂರ್ಧ್ವಮುಖವಾಗಿಮಾಡೀ || 47 ||

ವಿವಿಧವಿಷಯಂಗಳೊಳ್ಬಾಹ್ಯೇಂದ್ರಿಯಂಗೂಡಿ | ತವೆಚರಿಪಚಿತ್ತಮಂ ಪ್ರತ್ಯಾಹರಿಸಿ ಮತ್ತ | ಮವಿಚಲಿತ ಬಿಂದುನಾದವ್ಯೋಮ ಮಂತ್ರಸದ್ಭುವನವಿಗ್ರಹರೂಪದಿಂ || ಸುವಿಲಸಿತವಾದ ಷಡ್ವಸ್ತುವಂ ಷಟ್ಚಕ್ರ | ಭುವನೇಜಮಧ್ಯದೊಳ್ ಧ್ಯಾನಿಸಿಪದಾದಿ ಮೌ | ಲ್ಯವಸಾನವಾದ ಪಂಚಸ್ಥಲಂಗಳೊಳೀಶರೂಪಮಂ ಸ್ಮರಿಸಿಧರಿಸಿ || 48 ||

ಅಮಿತತ್ರಿಕೂಟ ಪ್ರವೇಶದೊಳ್ಪಂಚ ಭೂ | ತಮಹಾಪ್ರಕಾಶ ಮಧ್ಯದಮಂಡಲತ್ರಯ ದೊ | ಳಮರ್ದಿಸೆವ ಬಿಂದುನಾದಾಕಾರ ಲಿಂಗಮಂ ಬೇಚರಿಮಿನೆಯ್ದೆ ಕಂಡು || ಅಮಲನಾದಶ್ರವಣ ಸೌಖ್ಯದಿ ನಧೋಮುಖ | ತ್ವಮನೆಯ್ದಿದಾ ಶಿರಃಕಮಲ ಸ್ರವತ್ಸುಧಮ್ಮ | ತಮನುಂಡಲಹರಿಯಿಂ ದೇನುಮನರಿಯದೆ ತಲ್ಲಕ್ಷ್ಯದೊಳ್ಮನವಡಂಗಿ || 49 ||

ಪರವಶೀಭೂತನಾಗುತ್ತಮಲ ಶಿಶುತಾ ಯು | ದರ ದೊಳನುಪಮ ಸುಖದೊಳಿರಲಿತ್ತ ಮಾಯಿದೇ | ವರಸರೊಂದಾನು ಪೊಂದಿರುಳೀಶ ಯೋಗನಿದ್ರಾಮುದ್ರೆಯಿಂದಿರಲ್ಕೆ || ಕರಮೆಸೆವ ನಸುಗಾವಿ ಬಸುಪದೊತ್ರಂ ಸಮಂ | ತಿರದೆ ಶಂಬೆಪ ಬಹಿರ್ವಾಸ ಮುದ್ಧೂಳಿಸಿದ | ವರಲಸಿತ ಭಸಿತಪ್ರಭಾಂಗಂ ಸಮಸ್ತಸ್ಥಲಸ್ಥಸ್ಫುರತ್ತ್ರಿಪುಂಡ್ರಂ || 50 ||

ಲಲಿತವಿದ್ರುಮ ಲತಾವಿಭ್ರಮೋಪಮ ಜಟಾ | ವಲಿ ಪೊಗರನುಗುಳ್ವ ರುದ್ರಾಕ್ಷಮಾಲಾಜಾಲ | ವಲಘುಮುಕ್ತಾಕ್ಷೇಪಣಸ್ವರ್ಣನಿರ್ಮಿತಬ್ರಂಹಸೂತ್ರಂಕಕ್ಷದ || ಜ್ವಲಿತಭಸ್ಮಾಧಾರ ಘುಂಟಿಕೆಭುಜಗ ವೇತ್ರ | ಕಲಿತಹಸ್ತಂ ಯೋಗಪಟ್ಟಿಕಾನ್ವಿತಭುಜಂ | ಸುಲಭಪ್ರಸನ್ನವದನಂ ಜಗನ್ಮೋಹನಾಕಾರಂ ಕರದಪುಸ್ತಕಂ || 51 ||

ತನಗವರ್ದುರ್ಮೆತೆಯೆ ನಿರ್ಮಲಯತೀಂದ್ರಸ್ವಾಂತ | ವನಜವನಸಂಚರಣ ಚಣರಾಜಹಂಸನೆಂ | ದೆನಿಪಕಾಶೀ ಪುರಾಧೀಶ್ವರಂ ಯತಿವೇಷಮಂಧರಿಸಿ ಕಾರುಣ್ಯದಿಂ || ಮಿನುಮಿನುಪ ಪಳುಕಿನೊಳ್ವಾವುಗೆಗಳಂಮೆಟ್ಟಿ | ಯನುಪಮಗತಿಯಿನೆಯ್ದಿ ಮಾಯಿದೇವಾರ್ಯನೊ | ತ್ತಿನೊಳೊಲ್ದುಕುಳ್ಳಿರ್ದು ನೇತ್ರದಿಂ ಪೊಡೆದೆಲೆಲೆ ಮಗನೆಯೇಳೇಳೆನಲ್ಕೇ ||52||

ಅಪ್ರವೀಣಾಂಕಕಣ್ದೆರೆದುನೋಡಿ ಪೊರೆಯೊಳಿ | ರ್ದಪ್ರತಿಮಯೋಗಿಯಂ ಕಂಡು ಪುಳಕಿಸುತೆದಂ | ಡಪ್ರಣಾಮಂಗೆಯ್ದು ಭಯಭಕ್ತಿಯಿಂನುತಿಸುತಿರೆ ನೋಡಿದಂತಕಾಂತಿ || ಸುಪ್ರಸನ್ನಾನನಾಂಬುಜದೊಳ್ತುಳುಂಕೆಮಧು | ರಪ್ರೋಕ್ತಿಗಳಿನೆಂದ ನೆಲೆಮಗನೆ ಕೇಳ ನಿನ | ಗೀಪ್ರಹರವೇಡರಿಂ ಮೇಲೆಕಾರಣಿಕನೊರ್ವಂತನಯನುದ್ಭವಿಸುವಂ ||53||

ಆತನಿಂದೆಮ್ಮ ಶಿವಸಮಯಂ ಪ್ರಬಲಮಪ್ಪು | ದಾತನಿಂಸಾಫಲ್ಯಮುಪ್ಪುದೀಶ್ವರಕೃತ್ಯ| ವಾತನೆಮ್ಮಾತ್ಮಜ ನವಂಗೀಮಹಾದಿವ್ಯಲಿಂಗಮಂ ಧರಿಸೆನುತ್ತೆ || ಓತೊಂದುಲಿಂಗಮಂ ಮಾಯಿದೇವರಕರಾ | ಬ್ಜಾತದಲ್ಲಿತ್ತಿವಂಸಕಲರಂತಸ್ತವೊ | ವ್ರಾತಮಂ ಪರಿಹರಿಪನಂತರಿನವಂಗೆ ಕುಡುವುದು ಪದ್ಮರಾಜಾಖ್ಯೆಯಂ ||54||

ಈತೆರನನರಿಪಲಿಲ್ಲಿಗೆ ಬಂದೆವಿಂಪೋಪೆ | ವೇತಮ್ಮ ಎಮ್ಮಾಶ್ರಮಕ್ಕೆನೆಯತೀಶನಿ | ಮ್ಮಾತತಾಶ್ರಮ ವಾವುದೇನೆಂದು ದೇವರಭಿಧಾನಮೆನೆನಸುನಗುತ್ತೆ|| ಮಾತೇಂಪರಕ್ಷೇತ್ರಕೃತಮಘಂಪುಣ್ಯಸ್ಥ | ಲಾತಿಶಯದಿಂ ಕೆಡುಗುಮಲ್ಲಿನಗಳ್ದಘಮೆಕಾ | ಶೀತಟದೊಳಳಿಗುಮೆಂಬುಕ್ತಿನುತಕಾಶೀಪುರಂ ನೆನೆವರಘಕುಲಹರಂ ||55||

ಹರಜಟಾಗ್ರದಗಂಗೆಯಲ್ಲಿ ಭಾಗೀರಥೀ | ವರನಾಮದಿಂ ಪರಿದಳೊಂದುಕತದಿಂದದಂ | ಪರಿಕಿಸುವ್ರೊ ಡುರಗಪತಿಗಿರಗಪತಿಹರಿಗಿರಿಗಳಿಂಬವರ ಬಾಯುಪವಣೇ|| ಹರಹರಾ ವಿಶ್ವಪತಿಯೇ ಬಲ್ಲನದರಸುಂ | ದರಮಹತ್ವಮನಲ್ಲಿ ವಾಸಮೆಮಗೆಂಮಪೆಸರುರು ವಿಶ್ವನಾಥಯೋಗಿಗಳೆಂದು ನಿನ್ನನೀಕ್ಷಿಸುವ್ರೊಡೆಯ್ತಂದೆವೆನುತೇ || 56 ||

ತಮ್ಮ ನಿಮ್ಮಯ ಪಿತೃಪಿತಾಮಹಪರಿರತಿಯಿಂ | ತಮ್ಮ ಸುತರಿನಿಸುಬಳೆ
ವುದು ಮಖಿಲಸಾಮ್ರಾಜ್ಯ | ಮಮ್ಮ ಶಕಕೆಣೆಗಂಡು ಪಿಟ್ಟಮಲವೃತ್ತಿಯಿಂ
ಶಿವನೊಳೊಡೆವೆರೆದರೆಂದು || ಎಮ್ಮ ಕಡೆಸುದ್ದಿಯಹಾಗಿರ್ಪುದೀಕ್ಷೆ ಪೊಡೆ ಸೀ | ನು
ಮ್ಮ ಗನೆ ಜಾವಳನೆಸಿಜಸುತಂ ಸೆರೆಯಲೊಡ ನೆ | ಮೂರ್ಗಬಾಸುಖದೊಳಿರು
ಪೋಪೆಪಿಸ್ನೆಸುತದೃಶ್ಯನಾದಂ ಯತೀಂದ್ರಂ || 57 ||

ಆನಿತರೊೞ್ಮಾಯಿದೇವಾರ್ಯ ನೇಣ್ಣೆಸಯ ನೆ | ಯ್ದೆ ಸಿರೀಕ್ಷಿಸುತ್ತೆಲ್ಲಿ
ಯುಂ ಕಾಣದಸಮಾನ | ಮುನಿವರನನಖಿಲ ಮುನಿವರರ ನಿರ್ಮಲಹೃದಯವನ
ಜವನಕಲಹಂಸನಂ || ಮನದೊಳಚ್ಚರಿವಡುತ್ತಮ್ಮ ಮೇಗಣಕೃಪೆಯಿ | ನನಘ
ಕಾಶೀಪುರಾಧೀಶನೆಯ್ತಂದ ನೆಂ | ದೆಸುತ್ತೆ ಪುಳಕಂಬೆತ್ತು ಕಣ್ಮುಚ್ಚಿ ಪಂಚಾ
ಕ್ಷರೀ ಪ್ರಸಿತಹೃದಯನಾಗಿ || 58 ||

ಆಪರಮಮಂತ್ರಪ್ರಭಾಯೋಗದಲ್ಲಿ ಗುರು|ರೂಪದಿಂ ಬಂದುಮ್ಮೈದೋಱಿ
ಬೋಧಿಸಿದ ತ | ದ್ರೂಪಮಂ ಕಂಡು ಸಂತಸಗಡಲೊಳಾೞ್ದೀ ಜಗದ್ವ್ಯಾಪಕನ
ನೇಕನಂ || ಓಪನನಗಲ್ದಿರ್ಪ ತಾಣವುಂಟೇ ಯೆನು | ತ್ತೀಪರಿಯೊಳಾವಿಯೋ
ಗವ್ಯಥೆಯನುಳಿದು ಗುರು | ರೂಪ ವಿಶ್ವೇಶನೆಂದೀಶಂಗೆ ಪೆಸರಿತ್ತು ಪಾಡುತಾ
ಡುತ್ತೆ ಮುದದಿಂ || 59 ||

ಸಕಲಶಿವಭಕ್ತರಂಬರಿಸಿ ಮೂರುತಿಗೊಳಿಸಿ | ಯಕುಟಿಲಂ ಕಾಲೋ
ಚಿತೋದ್ಘ ಸತ್ಕಾರಮಂ | ಪ್ರಕಟಿಸಿ ಯಥಾನುವೃತ್ತಾಂತಮಂ ಬಿನ್ನವಿಸೆಕೇ
ಳ್ದು ತದ್ಭಕ್ತನಿಕರಂ || ವಿಕಸಿತಹೃದಯ ಕಮಲರಾಗಿಯಾನಂದಿಸುತೆ | ಸುಕೃ
ತಾತ್ಮನಿನಗಪಾರ್ಸರಿಯೆಂದುನುತಿಸು ತೀ | ಶಕಥಾಪ್ರಸಂಗದಿಂದಿರಲಿತ್ತ ಮಂ
ಗಲಾಂಬಿಕೆಯಮಲಗರ್ಭದಲ್ಲ || 60 ||

ಶಿವಯೋಗಸುಖಸುಧಾಬ್ಧಿಯೊಳಾೞುತ್ತೇೞು ತೊ | ಪ್ಪುವ ಸುಷಿಯುನೀ
ಶ್ವರಾಜ್ಞಾ ಶಕ್ತಿತಳ್ಕೈಸೆ | ಭುವನೋದ್ಧರಣ ಶೀಲನಾಗಿ ಮೃಡನಿಂಬೀಳ್ಕೊಳು
ತ್ತೆ ತತ್ಸುಖದಸೊಕರ್ಿಂ || ದಿವಿಜಕುಜಮುಡಿಯಿಡುವ ತೆರದಿನಲ್ಲಿಂತಳರ್ದು |
ಯುವತಿಮಣಿಗಿನಿಸಾಪೊಡಂ ನೋವುತಲೆದೋಱ | ದ ವಿಧಾನದಿಂದೊಗೆದ
ನಯ್ಯಯ್ಯ ಲೋಕೋಪಕಾರಿಗಿದು ನೈಜಮಲ್ತೆ || 61 ||

ಕುಮತಕೌಶಿಕಕುಲಂ ಕಣ್ಮುಚ್ಚೆ ಭಕ್ತಹೃ | ತ್ಕಮಲಂವಿಕಾಸಿಸೆ ಸಮಸ್ತದುರ್ಜನರ ಐು | ತ್ಕುಮುದಂಮುಗಿಯೆ ಸುಜನಚಕ್ರಂಗಳೊಡಗೂಡೆ ದುರ್ಷ್ಟವರಸಂ ಶೋಷಿಸೆ || ಅಮಲಸಂವಿತ್ರಭೆಮುಸುಂಕೆ ಮಂಗಲೆಯು ಗ | ರ್ಭಮಹಾನಭಸ್ಥಲದಿ ನೀಶಸನ್ನಿಭ ಶಿಶೂ | ತ್ತಮ ಸುಚಿದ್ಭಾನು ಉದ್ಭವಿಸಿದನವಿದ್ಯಾತಮೋಜಾಲಮಂಸಮರುತೆ || 62 ||

ತರುಣನಘೋದಯಸಮಯದಲ್ಲಿ ಮಾಯಿದೇ | ವರಸಾರ್ಥ್ಯ ನಸಮಸಂತೋಷದಿಂತನ್ನ ಹೃ | ತ್ಸರಸಿರುಹ ಮಧ್ಯದೊಳ್ಗುರುರೂಪ ವಿಶ್ವಪತಿಯಂಸ್ಮರಿಸಿ ಲಿಂಗಶಿಸುಗೆ || ಧರಿಸಿಗಳದಲ್ಲಿತಲ್ಲಿಂಗಮಂ ಶರಣರ್ಗೆ | ವರಭಸಿತತಾಂಬೂಲವಸ್ತುಗಳನಿತ್ತು ಸ | ತ್ಕರಿಸುವನಿತರ್ಕೆ ತದ್ಬಾಲಕನ ಬೆಳಕಿನಂಕುರದಂತೆ ಬೆಳಗಾದುದು || 63 ||

ಮೂಡುವೆಳೆನೇಸರಿಂದುರೆ ನಮಿಸಿಕೊಳ್ವ ಮೆ | ಯ್ಗಾಡಿ ವಣ್ಣದಿನೇಳ್ಗೆವೆತ್ತುಥಳಥಳಿಪಶಿಶು | ಚೂಡಾಮಣಿಯನೀಕ್ಷಿಸುತ್ತೆ ತಾಯುಂ ತಂದೆಯುಂ ಪರಮಸಂತೋಷದಿಂ || ನಾಡೆಶಿವಶರಣ ಚರಣಾಂಬುವಿಂ ಮೆಯ್ದೊಳೆದು | ಕೂಡೆತದ್ಭಕ್ತ ಹಸ್ತಾರ್ಪಿತವಿಭೂತಿಯಂ | ಪಾಡುತುಂ ಪಂಚಾಕ್ಷರಿಯ ನಳಿಕಕಿಟ್ಟು ಸರ್ವಾಂಗದೊಳ್ತೊಗಸೆತಳೆದು || 64 ||

ಪರಿದುದೆಸೆದೆಸೆಯನಳ್ಳಿರಿಯೆ ಬಹುವಾದ್ಯ ರವ | ವರರೆ ಶಿವಭಕ್ತರೆಲ್ಲರ್ಪರಸೆ ಪರಿಜನಂ | ಪುರಜನಂ ಜಯಜಯಯೆನುತ್ತಿರೆ ಸಕಲ ಶರಣ ಸಂತತಿಯನಾರಾಧಿಸಿ || ಗುರುರೂಪವಿಶ್ವಪತಿ ಪೇಳ್ದುಪೋದಂದದಿಂ | ಪರಮಪಾವನತನೂಜಂಗೆ ವಿಮಲಾಂಗಂಗೆ | ಹರಿಸದಿಂ ಪದ್ಮರಸರೆಂದು ಪೆಸರಿಟ್ಟು ಗಣಸಂತತಿಗೆ ತಂದೆರಗಿಸೀ || 65 ||

ನೆರೆದಭಕ್ತಾವಳಿಗೆ ನಮಿಸಿಬೀಳ್ಕೊಂಡು ತ | ತ್ಪರಿಜನವನುಚಿತದಿಂದುಪಚರಿಸಿಕಳಿಪಿ ಶಂ | ಕರಶಿಶುಗೆ ಪರಮಪ್ರಸಾದದಿಂ ಬಾಯ್ವೆಣ್ಣೆಯಿಟ್ಟು ಮೊಲೆಗೊಟ್ಟಕ್ಕರಿಂ || ಹರಭಕ್ತಿವಲ್ಲರೀಕಂದನಂ ಕಂದನಂ | ಚಿರದಯಾಸರಸದುಕ್ಕಂದನಂಕಂವನಂ | ನಿರುಪಮಜ್ಞಾನ ಫಲಭರಿತಮಾಕಂದನಂ ಕಂದನಂ ರಕ್ಷಿಸುತ್ತೆ || 66 ||

ನೋಡಿನಲಿಯುತ್ತೆ ಮುಂಡಾಡಿಪುಳಕಿಸುತೆ ಕೊಂ | ಡಾಡಿಪೆರ್ಚುತ್ತೆ ಪಿತೃಮಾತೃಗಳ್ಪುತ್ರ ನೊಡ | ಗೂಡಿ ಸುಖಮಿರೆಯಾಸುತಂ ಶೈಶವಮನಾಂತು ಮೆರೆದನದನೇಂ ವರ್ಣಿಪಂ || ನಾಡೆತಾಂ ತಿಮಿರರಿಪುಗಡ ತನ್ನ ಕುಡಿಯೊಳೊಡ| ಗೂಡಿದೀಕಲುಷಂಗಳಿಯ ಲಾರದೆಂದದರ | ಗಾಡಿಯುಂನಗುವಂತೆ ನೊಡವೆ ಳಗನೀಕ್ಷಿಸಿ ನಗುವನಮಲಚಿತ್ಪ್ರಕಾಶಂ || 67 ||

ಅಸಮಶಿವಯೋಗಿಯೆನಿಸುವ ಬಾಲಕಂ ತನ್ನೊ | ಳೊಸೆದುಘೋಷಿಪ ವಿಷ್ಣನಾದಮಂಕೇಳ್ದು ಸಂ | ತಸದೆ ಮೆಯ್ಮರೆದನೋಎಂಬಂತೆ ಮೊಲೆಯುಣು ತ್ತಿರ್ದಂತೆ ಸುಮ್ಮನಿರ್ಪಂ || ಎಸೆವತಾಯುದರದಲ್ಲಿರ್ದಂದು ಶಂಭುಯೋ | ಗ ಸುಖಾಮೃತವನೆಯ್ದೆ ಮೊಗೆಮೊಗೆದು ಪೀರ್ದು ಲೋ | ಭಿಸಿ ಪತ್ತಿದನಿದನಾಸ್ವಾದಿಪಿರವಿಂತೆಂಬವೋಲ್ಬೆರಲನಿರದೆಪೀರ್ವಂ || 68 ||

ಕುಡುಮಿಂಚುರನ್ನಸಸಿ ಬಿಸುಗದಿರಪೇರುರಿಗ | ಳೊಡನಾಟದೊಳ್ತ ಣ್ಣದಂತೆ ಕಣ್ಗೊನೆಯೊಳಿಡಿ | ದಡಸಿ ಪಜ್ಜಳಿಪಮಲರುಚಿಗಂಡು ಬೆರಗಾದವೋಲ್ಬೆರಗುವಟ್ಟುಮೆರೆವಂ || ಮೃಡಭಕ್ತರರ್ಚನದೊಳಾಂನಲಿವೆ ನಿಂತೆಂದು | ಪೊಡವಿಗರಿಪುವತೆರದೆ ನಲಿದಾಡುತಿರ್ಪ ನವ | ರೊಡನೆ ನೆಣಸುವರನಿಂತೊದೆ ವೆನೆಂಬಂತೆ ಪದಯುಗವನಾಡಿಸುತುಮಿರ್ಪಂ || 69 ||

ಶರಣರಂಕಂಡುಭಯದಿಂದಕಂಪಿಸುವೆ ನೀ | ಪರಿಯೊಳೆಂಬಂತುಟೊ ನೊರ್ಮೆರ್ಬೆರ್ಚುವನವರ | ಪರಮಾನುಭವಸುಖದೊಳೊಗೆವವಿಂತುಟುಸುಖಾಶ್ರುಗಳೆಂದು ತೋರ್ಪಂದದಿಂ|| ಇರದೆಕಣ್ಬನಿಗಳುಗಲಳ್ಪನಾದ್ಯರ ಗೀತ | ದೊ ರೆಯನಾಲಿಸುವಂತೆ ಜೋಗಳವನಾಲಿಸುವ | ನರರೆದಂಡಪ್ರಣಾಮವನಭಿನಯಿಸಿತೋರ್ಪಂತೆ ಪೊಡೆಮುಗುಳ್ದುಬೀಳ್ವಂ || 70 ||

ಭವಬಾಧೆಗಲಸಿಬಂದಡಿಗೆರಗಿ ಪೊಗಳ್ವ ಮಾ | ನವರ ನೀಕ್ಷಿಸಿಕರುಣದಿಂದೆ ತಲೆವಿಡಿದೆತ್ತು | ವವೋಲೆಯ್ದೆ ತಲೆಯನೆತ್ತುವನೀಶ್ವರಾರ್ಚನಕೆ ಕುಳಿತಿರ್ಪರೀತಿಗಲ್ಪ || ನೆವದೆಕುಳ್ಳಿರ್ಪನೆಮ್ಮವರ್ಗಾಚತುರ್ವಿಧ ಪ | ದವಿ ಗಳಡಿಯಾಗಿರ್ಪವೆಂದವಂ ಮೆಟ್ಟಿಚರಿ | ಸುವ ಚಂದದಂತೆಂಬಳಿಕ್ಕೆಯಾಡುವನಮಮ ಜಗದನುಗ್ರಹವಿಗ್ರಹಂ || 71 ||

ಹರಸಮಯಮಂನಿಲಿಸದಿರೆ ನಿಂತುಟೆಂದು ತೋ | ರ್ಪರವಿನಿಂ ನಿಲ್ಪನತ್ಯ ಮಲ ಷಟ್ಸ್ಥಲಮಾರ್ಗ | ದುರುತರಸುವೃತ್ತಿ ತಪ್ಪದವೊಲಡಿಯಿಡುವೆ ನಿಂತೆಂದು ದಟ್ಟಡಿಯನಿಡುವಂ || ಪುರಹರಾರ್ಚನ ದೊಳುಣ್ಮುವ ಗದ್ಗದಸ್ತುತಿಯ | ಪರಿಯರಿಪುವಂತೆ ತೊದಲಿಸಿನುಡಿವನೀಶ ಭ|ಕ್ತರಭರಂಗೇಳ್ವವರ ಪೊರೆಗೆಪರಿಪರಿದೆಯ್ದುವಂತೆ ಪರಿಪರಿದಾಡುವಂ || 72 ||

ಇಂತುಬಾಲ್ಯಾವಸ್ಥೆಯಂ ಶಿವಾಸ್ಥೆ ಯ | ರ್ಥಾಂತರಮಿದೆನೆ ನಟಿಸುತ್ತಾ ಶೈಶವದಲೀಲೆ | ಯಂ ತಿಡೆಯದೀಶ ಪೂಜಾಲೀಲೆಯಿಂ ಚರಿಸುತಿನಿಸಿನಿಸು ಬುದ್ಧಿದೋರೆ || ಕಂತುಹರಶರಣರೊಡನಾಡುತುಂ ಮತಿವಿಶಾ | ಲಂ ತನಗೊದವೆ ಶಿವಾನುಭವಲಂಪಟ ನಾಗು | ತುಂತವೆ ಮೆರೆದನಂತುಟಲ್ತೆ ಹರೆಯದಮೇಲೆ ಬರ್ಪುದೇಸದ್ವಿವೇಕಂ|| 73 ||

ಸಲೆಲೆಕ್ಕಮುಂಬರೆಪಮುಂ ವಾಚಕೌಚಿತ್ಯ | ಕುಲಮುಂಷಡಂಗ ವೇದೌಘಮಿಾಮಾಂಸಾತಿ | ಲಲಿತನ್ಯಾಯ್ಯಾಯಿಕ ಪುರಾಣ ಸದ್ಧರ್ಮ ಶಾಸ್ತ್ರಂಗಳುಂ ಗಾಂಧರ್ವಮುಂ || ಬಲವದಾಯುರ್ವೇದಮುಂ ಧನುರ್ವೇದಮುಂ | ಸುಲಭಾರ್ಥಶಾಸ್ತ್ರಮುಮುಮಲಶಿವರಹಸ್ಯಾದಿ | ಕಲೆಗಳೆಲ್ಲಂ ಮುಖೋದ್ಗತವಾದವಾ ಶಿವಪ್ರತಿಮಂಗದೇಂಗಹನಮೇ || 74 ||

ಅವಿಸರ್ಜನೀಯೋರು ವೃತ್ತಸಾಗಪಿಲ ವ | ರ್ಣವಿತಾನದೊಳ್ಲೋಪ ಕೃತ್ಯಮಂನೆಗಳದೊ | ಪ್ಪುವನೂಷ್ಮತಾನುಬೋಧಕನಾಗಿ ಪೊನ್ಯತ ಬ್ಯವಸೊರ್ಮೆಯುಂನುಡಿಯದೆ || ಅವಿಕಲ್ಪನಾಗಿ ಮೇಣ್ಪ್ರತ್ಯಾಹರಿಸದನನು | ಭವಿತವಿಗ್ರಹನಾಗೆಸಿವಪದ್ಮಣಾರ್ಯ ಪುಂ | ಗವನನಾ ಪ್ರಥಮಶಾಬ್ದಿಕನೆಂದು ವಿದ್ವಜ್ಜನಂ ಪೊಗಳ್ವುದೇಂಚಿತ್ರಮೋ || 75 ||

ಶಿವಶಿವಾಜಣ್ಣಿ ಸುವೆನೇನಸಾತನ ಸುಚಿ | ದ್ವ್ಯವಹಾರಮಂ ಮನದೊಳಿನಿಸಾದೊಡಂ ತಂದೆ | ಯಿವನಿವಳ್ತಾಯಿ ಯೆಂಪೇಪ್ರಬಲಮಾಯಾ ಮಯಾಂಕುರಂತಲೆದೋರದೇ || ಶಿವಶಿವಾಭಾವವಿಶ್ವಾಸದಿಂ ಸಂಧ್ಯಾತ್ರ | ಯವಿನುತಿನಮಸ್ಕಾರ ಪೂಜನಾದಿಗಳಿಂದೆ | ತವೆತುಷ್ಟಿವಡಿಸುತ್ತವರಸೇವೆಯೇ ಜೀವಮಾಗಿವರ್ತಿಸುವನನಿಶಂ || 76 ||

ನಡೆವಲ್ಲಿ ನುಡಿವಲ್ಲಿ ಯುಡುವಲ್ಲಿ ಯುಣ್ಬಲ್ಲಿ | ಪೊಡರ್ವನಿದ್ರಾವಸ್ಥೆ ಯಲ್ಲಿ ದರ್ಶನದಲ್ಲಿ | ಪಿಡಿವಲ್ಲಿ ಬಿಡುವಲ್ಲಿ ಕೊಡುವಲ್ಲಿ ಕೊಳ್ವಲ್ಲಿ ಯಡಸಿದು ದ್ಯೋಗದಲ್ಲಿ || ತೊಡುವಲ್ಲಿ ಪೊದೆವಲ್ಲಿ ನಡಗರದಸಮಯು ದ | ಲ್ಲೊಡನೆ ಕು ಳ್ಳಿರ್ಪಲ್ಲಿ ಯೇಳ್ವಲ್ಲುಳಿದ ಕೃತ್ಯ | ದೆಡೆಯಲ್ಲಿ ಮೃಡಮಂತ್ರವ ವನನಿಡಿದಡನಿ ಬಿಡದಿಪ್ಪುದೇಂವಶವಮಾದುದೊ || 77 ||

ಶಿವನಿಷ್ಠೆ ಶಿವಪೂಜನಂ ಶಿವೈಕ್ಯರಸೇವೆ | ಶಿವವೃತ್ತಿ ಶಿವವೀಕ್ಷಣಂ ಶಿವಕಥಾ ಪ್ರಸಂ | ಗವಿನೋದ ಗೋಷ್ಠಿ ಶಿವನಿಜಗುಣ ಸ್ತೋತ್ರಾನುಭಾಷಣಂ ಶಿವವೈಭವಂ || ಶಿವತತ್ವನಿರ್ಣಯವಿಚಾರಂ ಶಿವೋತ್ಸವಂ | ಶಿವಕಥಾವೇಶಂ ಶಿವಾವಧಾನಾದಿ ಗಳ್ | ವವ ನೊಳಂಕುರಿಸಿಪಲ್ಲವಿಸಿ ಕುಸುಮಿತಮಾಗಿ ಫಲಿ ಸಿದುವದೇಂ ಶಾಂತಿಯೋ || 78 ||

ಪರಮಭಕ್ತಿಗೆಶಿರವೊದವಿತೋ ಶಾಂತಿಗೆಮುಖಂ | ಸ್ಫುರಿಸಿತೋ ಶಿವ ನಪಾನಾಭಯದ ಗುಣಯುಗಕೆ | ಕರಮುಮರ್ದುವೋ ಚಿದ್ವಿಲಾಸಕೆರ್ದೆರಾ ಜಿಸಿತೊ ಸುಚರಿತಕೆಕಾಲ್ಬಂದುವೊ || ಇರದವಿಳಲೋಕವವನುಗ್ರಹಿಪ ಶಿವಶಕ್ತಿ ಗರರೆಬೆಸ್ನುಂಬಸಿರು ವೊಗೆದುವೋಕಡೆಗಿದೇಂ | ಗಿರಿಶನಿಪ್ಪತ್ತಾರನೆಯ ಲೀಲೆ ಯೋಎಂದು ವಿಬುಧರ್ಬಗೆಯಲೊಪ್ಪಿದಂ || 79 ||

ಮದಕುಧರವಿದಳ ನಭಿದುರಪರಮ ಶಿವಭಕ್ತ | ಪದಶತದಳಾದಭ್ರ ಮಕರಂದಲೀಲಾ ಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕ ಪ್ರಣೀತಮಾಗೀ || ಸದಮಲಾವಿಲಶಾಸ್ತ್ರ ಸಾರವೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣ ಕಥೆಯೊಳಿಂ | ತಿದು ಗುರುಪರಂಪರಾಚರಿತಂ ಗುರೂದ್ಭವಂ ರಂಜಿಪೆರಡನೆಯಸಂಧೀ || 80 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶನ ಕೆರೆಯಪ ದ್ಮಣಾರ್ಯನ ಲಸ | ಚ್ಛ್ರೀಶಿವಾದ್ವೈತ ಸಾಕಾರ ಸಿದ್ಧಾಂತ ಪ್ರತಿಷ್ಠಾಪನಾ ಚಾರ್ಯನ || ಈಶುದ್ಧ ಚರಿತಮಂ ತಿಳಿಪಿದ ಗೊರ್ವಿದ | ಗಾಶೆಯಿಂ ಕೇಳ್ವ ಗೆ ಭುಕ್ತಿಮುಕ್ತಿಗಳಂ ಮ | ಹಾಶುಭಂಗಳಸಾಯುವಂ ಕೊಟ್ಟು ಗುರುರೂಪ ವಿಶ್ವನಾಥಂ ರಕ್ಷಿಪಂ || 81 ||

ಅಂತು ಸಂಧಿ ೨ ಕ್ಕಂ ಪದಂಗಳ್ 134 ಕ್ಕಂ ಮಂಗಳಮಸ್ತು. ||ಶ್ರೀ||

## 3 ನೆಯ ಸಂಧಿ.

ಶ್ರೀಮದ್ಗುರುರೂಪ ವಿಶ್ವನಾಥಾಯನಮಃ.

ಇರದೆಕಾಳಿಗೆಪೂಯಿದೇವಾರ್ಯ ರೆಯ್ದಿಪುರ | ಹರನೋಲ್ಪಿರಸೆದೋರ ಶರಧಿಯಂಪೊಕ್ಕು ಪ | ದ್ಮರಸಸಾ ಗೌರಪದಗಾಯಕರಸುತೆಯಂ ವಿವಾಹ ಮಾಗೊಪ್ಪುತಿರ್ದಂ || ಪದ ||

ಸುಮುಹಪ್ಪಿರೋಚನ ವಿರೋಚನ ವಿರೋಚ ನಾ | ಕ್ಷಿಮನೋಜ ಸಂಹನನ ಸಂಹನನ ಸಂಹನನ | ರಮಣೀಯತೇಜೋಜಿತಾರ್ಕಕಾಂತಿ ಬಲಬಲಬಲಾ ಹಕಾಹನಯವಾಹಾ || ಹಿಮಗಿರಿಸುತಾಸನಾಥಾನಾಥನಾಥ ಸಂ | ಯಮಿರಾಜರಾಜರಾಜಪ್ರಿಯ ವಿರಿಂಚೇಂದ್ರ | ಕಮಲಾಂಬಕಾಂಬ ಕಾಂಬಕಹರ್ಷಕ ರದಿವ್ಯರೂಪ ಜಯವಿಶ್ವನಾಥಾ || 1 ||

ಈತೆರದೊಳಖಿಲಭಕ್ತರ್ಬಣ್ಣಿಪಂತೆ ಸುವಿ | ನೀತಿಯಿಂ ವೀರಮಾಹೇಶ್ವರಾಚಾರ ವಿ| ಖ್ಯಾತನಾಗಿರ್ಪ ಸುಕುಮಾರಚೂಡಾಮಣಿಗೆ ಶೈಶವಂಕ್ರಮದೆಜಾರೇ || ಓತೆಸೆವಕೋಮಲಾಂಗದ ನಳನಳಿಕೆ ಎಲ್ಲೆ | ಹಾತಿನಸೊಗಸು ಸೋಟದಿಂಪು ನಗೆಮೊಗದ ರಸ | ವಾತುರಿಪ ಮನದಬಿರ್ದುಗಳವನಪೊಸಜವ್ವನಮನದೇಂ ಸೂಚಿಸಿದುವೋ || 2 ||

ಕುಂತಳದಕಾಂತಿನೇತ್ರಾಂತರದಕಾಂತಿ ಸ | ದ್ದಂತಪಙ್ಕ್ತಿಯ ಕಾಂತಿವದನಾಂಬುಜದ ವಿಸ್ಫು | ಕಾಂತಿ ನವಕಂಬುಕಂಠದ ಕಾಂತಿನುಣ್ಗೋಳ ಕಾಂತಿ ಕರತಳದಕಾಂತಿ || ತಾಂತೊಳಪುರಸ್ಥಲದ ಕಾಂತಿವೃತ್ತೋರುಗಳ | ಕಾಂತಿ ಜಂಘಾಕಾಂತಿ ಬೆಳಗೆಂಬಿನುಗುರ್ಮೆರಲ | ಕಾಂತಿಗಕ್ಕೆಂತಿಣಿಸಿ ಘನಕಾಂತಿಮಯವಾಗಿ ಕಣ್ಗೆಂಬೆಡಂಗಾದನೋ || 3 ||

ಈಪರಿಯೊಳೆಸೆವಪೊಸಜವ್ವನಿಗನಾದ ಕುಲ | ದೀಪಕನ ನಮಲಚಿದ್ರೂಪಕನನೊಲ್ದು ಕರು | ಣಾಪಾಂಗದಿಂ ನಿರೀಕ್ಷಿಸಿ ಸಮುದಿತಾಂತಃಕರಣನಾಗಿ ಮಾಯಿದೇವಂ || ಬಾಪರಮಪುರುಷ ನಿನಗಿನ್ನಿತ್ತಶಂಭುವ ನಿ | ರೂಪದಿಂ ಕೆಲವುಭೋಗಂಗಳೊದಗುವುವವಂ | ಸ್ಯೆಪಿಂಗೆ ವಿಘ್ನಮೆಂದುಳಿಯದಂಗೀಕರಿಸೆನುತ್ತೆ ಪದ್ಮರಸಾರ್ಯರಂ || 4 ||

ಮತ್ತಮಿಂತೆಂದುಬೋಧಿಸಿದನೆಲೆಮಗನೆ ಕೇ | ಳುತ್ತಮ ಶಿವಜ್ಞಾನಿ ಪಿಡಿದಡೇನವು ಶಿವ | ನಿಮಿತ್ತಮಲ್ಲದೆ ಮಾಯಿಕಂಗಳೆನಿಪವೆಹೇಮವಂ ಭಾಮೆಯಂ ಭೂಮಿಯಂ || ಪೊತ್ತಲ್ಲದೆಂತುದಾಸೋಹ ಮುತ್ಕರ್ಷಿಪುದು ದಾತ್ತಬಸವೇಶ್ವರಾದಿಗಳವಂಗ್ರಹಿಸಿ ತ | ದ್ವೃತ್ತಿಯಿಂ ವೀರಶೈವಪ್ರತಿಷ್ಠಾಚಾರ್ಯರೆನಿಸಿ ಶಿವನೊಳ್ಬೆರೆಯರೇ || 5 ||

ಕಾಮಿಸಿಪ್ಪಾಪಿ ದುರ್ವ್ಯಸನಿ ಸದ್ವ್ಯಸನಿ ದ | ಲ್ಲೀಮಂ ವಿಗತಸೀಮ ಸುರು ರತಂವಿರತ ನೆಂ | ಜೀಮಾತಿನವನೆ ಶಿವಮುಖಕಿತ್ತು ಭೋಗಿಸಲ್ಬಲ್ಲ ಸುಪಿಗಿಂಜಾವರಂ || ಶ್ರೀಮಲ್ಲಣನನುಳಿದು ಮೂರ್ಖನೈಸಾರ ನಲೆ | ದಾಮಹಾಜೊಳಸಂ ಜರೆದುಕನ್ನದಬೊಮ್ಮ | ಧೀಮಣಿಯನೊಲ್ಲದುಳಿದರನೊಲ್ವನೆ ಅವರ್ ಸಿಲ್ಕಿಯುಂ ಸಿಲ್ಕದವರೇ || 6 ||

ತಾಳಲಯಸಂಗೀತವಾದ್ಯಾದಿಯಾಗೆಸೆವ | ಮೇಳದನುಗುಣಕೆ ನರ್ತಿಸುತಿರ್ದುವುಂಸುನಟಿ | ವಹೌಳಿಸ್ಥಕುಂಭಪರಿರಕ್ಷಣಂಗೆಯ್ವಳಂತಂತೆ ನಿಷ್ಠಲಶಿವೈಕ್ಯಂ || ಪೇಳಲೇಂಸಂಸಾರವೈಷಯಿಕ ಘನರಸದ | ಕೇಳಿಯೊಳಗಿರ್ದುವುಂ ಶಿವಯೋಗಜೀತೊ ವಿ | ಶಾಲತೆಯ ನುಳಿಯದೊಂದಿರ್ದಪೇಂ ಕಮಲದಳಗತಜಲದ ಪೊಲ್ಪೊಳಗುವಂ || 7 ||

ಅಂತರಿಂದೆಮ್ಮ ಶರಣಗ್ಗ ಸಂಸಾರಸಂ | ಗಂತಿಳಿಯೆ ಬಂಧವಲ್ಲಬ್ಬು ಕೇಳನಘನೀ | ನುಂತಡೆಯದೊದ ವಿದೇಹ್ಯದ್ಭೋಗಮಂಗ್ರಹಿಸಿ ಶಿವನವರಸಾರಾಧಿಸಿ || ಕಂತುಹರವೇಷಸ್ಥರಂ ಹರನೆನುತೆನಂಬ | ಸಂತತಮುವರಗೋಷ್ಠಿಯುಂ ಬಿಡದೆಪರವಾದ | ಮಂತಿರಸ್ಕರಿಸುತೆ ಶಿವಾಧಿಕ್ಯಮಂ ಪ್ರತಿಷ್ಠಿಸುತೆ ನಿಶ್ಚಲಚಿತ್ತದಿಂ || 8 ||

ಕಾಪುವಂ ಶಿವನಂತದರ್ಕೆತೆಕ್ಕದೆಭಕ್ತ | ರಾಡಿದುಕ್ತಿಯನೆಮ್ಮಿನಿಸುತೆ ಭಕ್ತಿಯೆನಿಪ್ಪ | ಚೋಡುದೊಟ್ಟಸಮುಕ್ತಿಯಾಫಲಕಮಂ ಪಿಡಿದುಸುಜ್ಞಾನಬಿಷ್ಣದಿಂದೇ || ಪಾಡೆಸೆಯೆವಿಷಮ ಮಾಯಾಸಮುರಮಂಗೆಲ್ವ | ಗಾಡಿಯಂಬಿಡದಿ ಮೃಡಂಕರುಣೆಸಂಪಲವ | ನಾಡಲೇಂನಿನಗಿದು ಜಗದ್ಧಿತಾರ್ಥವ್ಯಕ್ತಿಯಲ್ಲದೇಂ ಕರ್ಮತನುವೇ || 9 ||

ಎಂದಿಂತುಭಾವಿಕಾರ್ಯಮಲನಮಚಿದ್ದೃಷ್ಟಿ | ಯಿಂದರಿದು ತಿಳಿದು ಮುಂಪಾಡಿ ಕೊಂಡಾಡಿ ಕೇ | ಳ್ಕಂದ ನಿನ್ನುದಯಸಮಯದೊಳೆಮ್ಮ ಗುರುರೂಪ ವಿಶ್ವಪತಿ ಯತಿವೇಷದಿಂ || ಬಂದು ನಿನಗೀದಿವ್ಯ ಲಿಂಗಮಂ ಕೊಟ್ಟೆಮ್ಮ | ವಂದಿಟಂನೀಂ ನೆರೆಯೆತನ್ನೆಡೆಗೆ ಬಪ್ಪುದೆಂ | ದಂದುನಿರವಿಸಿದನದರಿಂದೆಮಗೆ ಕಾಶೀಪ್ರಯಾಣಮಾವಶ್ಯಕಮೆನೇ || 10 ||

ಕೇಳ್ದುತದ್ಬೋಧಮಂ ಮನದಲ್ಲಿ ದೃಢಮಾಗಿ | ತಾಳ್ದುಬಳಿಕಾವಿಯೋಗವ್ಯಥೆಗಳಲ್ಕಡಲೊ | ಳಾಳ್ದು ಹಾಹಾ ದೇಶಿಕೇಂದ್ರ ದೇಶಿಕ ಕುಲೋತ್ತಮ ದೇಶಿಕಾಗ್ರಗಣ್ಯ || ಆಳ್ದವನೆಕಂಣ್ಣೆಗತಿಯೀಮತಿಯೆ ನೀವಿಂತು | ಪೇಳ್ದಗಲಲಾನೆಂತುಳಿವೆನೆಂದು ಚರಣದೋ | ಳ್ಬೀಳ್ದೊರಲ್ವಾತ್ಮಜನುಮಂ ಪತ್ನಿಯಂ ಸಕಲ ಭಕ್ತರಂ ತೆಗೆದಿತ್ತುತೆ || 11 ||

ಸತ್ಕರಿಸಿ ಮೆಯ್ದಡವಿಕಣ್ಣೀರ್ಗಳಂತೊಡೆದು | ಚಿತ್ಕಾಯಮಾಯಿದೇವಾರ್ಯನೀಶ್ವರನ ಸಾ | ಕ್ಷಾತ್ಕಾರಯೋಗಮಂ ತಿಳಿಪಿ ಪರಮಾನಂದ ಸೌಖ್ಯಮಂ ಕಾಣಿಸುತ್ತೆ || ಹೃತ್ಕಂಪಮಂ ಪರಿಹರಿಸಿ ಸುತಾದ್ಯರ್ಗಸುಮ | ಹತ್ಕರುಣಮಂ ಬೀರಿಬೀಳ್ಕೊಟ್ಟು ಮನದೋಳ್ಜ | ಗತ್ಕರ್ತೃಶಂಭುವಂಜಾನಿಸುತೆ ಕಾಶೀಪುರಾಭಿ ಮುಖವಾಗಿ ತಳರ್ದು || 12 ||

ಕತಿಪಯದಿನಂಗಳಿಂಮೇಲೆ ಕಾಶೀಪುರಮ | ನತಿಹರ್ಷದಿಂದೆಯ್ದಿ ಪರಮಸದ್ಗುರು ವಿಶ್ವ | ಪತಿಯಾಲಯಂ ಬೊಕ್ಕುಕೈಗಳಂ ಮುಗಿದು ನುತಿಸುತಿರೆ ತದ್ಧೃತಿವೇಷದಿಂ || ಶಿತಿಗಳಂ ಲಿಂಗದಿಂದಿದಿರ್ವಂದುಬಾ ಸುತಯೆ | ನುತೆ ತೆಗೆದು ಬಿಗಿಯಪ್ಪಿತೆರೆಯೆ ತನ್ನುದರಮಂ | ಕ್ಷಿತಿಜನಮುಪೇಯುಪೇಯೆನೆಪೊಕ್ಕು ಮಾಯಿದೇವಂ ಮುಕ್ತಿಸುಖದೊಳೆಸೆದಂ || 13 ||

ಇತ್ತನಿಜಮಾತೃಸಹಿತಂಪದ್ಮರಸ ದೇಶಿ|ಕೋತ್ತಮಂ ಸಕಲ ಭಕ್ತರ್ವೆರಸಿ ಪೋಗಿ ಸಮು | ದಾತ್ತಶಿವತತ್ವ ಸಾಕ್ಷಾತ್ಸಿಚ್ಚಿದಮಲ ದಿವ್ಯಾನುಭವ ಸೌಖ್ಯದಿಂದೆ || ಚಿತ್ತದೋಳ್ಗುರುಕುಲಾಗ್ರಣಿಯ ವಿರಹಾವಸ್ಥೆ | ಯತ್ತಣಿಂದಾದನಿರ್ವಾಯಿಕಕ್ಷತಮನುಳಿ | ದುತ್ತುಂಗವೃತ್ತಿಯಿಂವಿರಲಿತ್ತ ಹೊಯಿಸಳವಿಷಯ್ಯಮೆಸೆವುದೆಂತೆಂದೆನೆ || 14 ||

ಸಳನೆಂಬಗುರುಕುಲಜನೋರ್ವಂತನಗೆ ಭಾಗ್ಯ | ಮಿಳಿಕೆಯ್ಯೆ ದೇಶಾಂತರ ಪ್ರಾಪ್ತನಾಗಿ ಬರು|ತಳವಿಸಿಂತಜ್ಞನಪದದ ಕೋಪಣಪುರದ ದುರ್ಗಾಂಬಿಕೆಯ ವರಭವನಮಂ || ಜಳಜಸಖನಸ್ತಾದ್ರಿಗೆಯ್ದುತಿರೆ ಕಂಡು ಬಂ | ದೊಳಪುಗುತ್ತಲ್ಲಿಯೋರ್ವಂ ಯತೀಂದ್ರಂ ವಿಸಿ | ಷ್ಠಳತಪನೊಳಿರೆನೋಡಿ ನಮಿಸಿನಿಃಸಾರೆನೆಪೆಸರನುಸಿರ್ದುಕುಳ್ಳಿರ್ದ್ದಿರೆ || 15 ||

ಬಳಸಿಯಾಸ್ಥಳದ ನಾಳ್ಕೈದು ಗಾವುದದಳತೆ | ಯೊಳಗಾರುಮಂ ಪೊರ್ದ್ದಲೀಯದರೆಯಟ್ಟಿತಿಂ | ದಳವುಮಿಕ್ಕಿರ್ದು ದುಷ್ಟವ್ಯಾಘ್ರನುಗ್ರದಿಂ ಘೂರ್ಮಿಸುತ್ತಲ್ಲಿಗೆಯ್ದಿ || ನಿಳಯಮಂ ಪೊಕ್ಕಿವರನಡಸಲವ್ವಳಿಸಲೊಡ | ನಳವಿಯೋಳ್ಕಂಡುಯತಿಕಯ್ಯಸೆಳಿಗೊಟ್ಟು ಪೊ | ಯ್ದಳಯೆನೆಧರಣಿಯದಿರಲಾಮ್ಬರ್ಪೊಯ್ದಾ ಪುಲಿಯಕೊಂದ ನಿಸ್ನೇಂ ಧೀರನೋ || 16 ||

ಅಸಮಬಳಸಳನಪ್ಯೌರ್ಯ್ಯಕೆ ಮೆಚ್ಚಿ ಯತಿಯಿವನಿ | ನೊಸನೀಧರೆಯನಾಳಿಸುವನೆಂದು ಬಗೆದುತ | ನ್ನಸಿತಾಳಪತ್ರಮಂ ಕೊಟ್ಟಿದು ಸಕಲಸಿದ್ಧಿಕರಮೆಂದದರ ಮಂತ್ರಮಂ || ಬೆಸಸಿಕರುಣಂಗೆಯ್ದು ಕಳಿಪೆಯಾತಂಬಂದು | ಮಸಕದಿಂ ದಿಗ್ವಿಜಯಿಯಾಗಿ ನಿಜನಾಮ ಧ್ಯ | ಪೆಸೆಯಲದನಾಳ್ವನಾಕತದಿನಂದಿಂದೆ ಪೊಯ್ಸಳ ದೇಶಮೆನಿಸಿಮೆರೆಗುಂ || 17 ||

ಪಲವೇಂ ಸಕಲಜನಾನಂದನಂ ನಂದನಂ | ಜಲಜಸೌಗಂಧಿಕಕುಮುದಸಂಕುಳಂಕೊಳಂ | ವಿಲಸಿತಚರದ್ಯೋಗಿಪಾವನಂ ವನವಂಚೆವಿಂಡುಗಳಬಿನದಂನದಂ || ಸಲೆಸಿರಿಯುಮೊಯ್ಕಯ್ದಲಂಕೆಯ್ದಲಂ ರತ್ನ | ಕಲಿತಲುಲಿತಸಗೋಪುರಂ ಪುರಮನಾಕುಲೋ | ಜ್ಜ್ವಲಭಾಗ್ಯಸಂಗ್ರಹಂಗ್ರಹಮಖಿಲಸುಖಭಾಜನಂ ಜನಂತದ್ದೇಶದಾ || 18 ||

ಆರುಮರಿಯದತೆರದಿನೆಚ್ಚುನೋಯಿಪಮಾರ | ಘೋರನಟ್ಟುಳಿಯಲ್ಲದಟ್ಟುಳಿಗಳಿಲ್ಲಘ | ದೊಳೋರಂತೆ ಭೀತಿಯಲ್ಲದೆ ಭೀತಿಯಿಲ್ಲ ತಟನೀಮಹಾಪೂರದಲ್ಲೀ || ಮೇರೆದಪ್ಪುವುದದಲ್ಲದೆ ಮೇರೆದಪ್ಪುವಾ | ಚಾರವಿಲ್ಲ ಬಲೆಯುರಮಧ್ಯದೋಳ್ಮಿಥ್ಯಾವಿ| ಪಾರವಲ್ಲದೆವಲಂ ಮಿಥ್ಯಾವಿಪಾರಮಿಲ್ಲೆನಲದ್ಧರಪೆಂಪೆಂತುಟೋ || 19 ||

ಆದೇಶ ಮಧ್ಯಪ್ರದೇಶದೊಳ್ಸಾವಿಪೊಡೆ | ಭೂದೇವತೆಯ ಶಿರೋರತ್ನ ಮೋಬ್ರಹ್ಮ ನೀ | ಮೇದಿನಿಯೊಳಖಿಳಪುರಮೆಸಗೆ ದಿವದಿಂತಂದವರಮಾತೃಕಾ ನಗರವೋ || ಶ್ರೀದಿವ್ಯಲಕ್ಷ್ಮೀವಿಲಾಸಲೀಲಾಭವನ | ವೋ ದಿಟಕೆ ಜೆಲ್ವಿನಕ ರಂಡವೋ ಎನೆಸುಪ್ರ | ವೋದದಿನೆಸೆವುದುದೋರೆಸಮುದ್ರವೆಂಬುರುಪುರಂಪ್ರೊ ರ್ದದರ ಕಡವರಂ ||20||

ಎತ್ತುಗಳ್ಪಿರಿಯಡೆಂಕಣಿ ಸೂಸುಡೆಂಕಣಿಸ | ಮುತ್ತುಂಗಲಸಿತ ವಿಕಟಾ ಟ್ಟಾಲವಮರ್ದಕ್ಕೈ | ಗತ್ತರಿಯು ರುಳ್ಗಣ್ಣಿಬಲ್ಗುಂಡು ಪೇರ್ದೊಲೆಕೊರಡುಕಾ ಯ್ದು ಪಣಲರಾಶಿ || ಮತ್ತೆಬಂಡಿಯ ಗಾಲಿಪೆಟಲುಪ್ಪು ಗುಂಡುದಪಿ | ಜಿತ್ತ ರಿಸಲೇಂ ಮರುಳಕಯ್ಕವಣೆಯಿಡುಗಲ್ಲ | ಪೊತ್ತಸಾಪುರದೊಳಿಲ್ಲೀ ನುಡಿಯೆ ಪೇಳದೇತನ್ನೃಪನ ಸಾಮರ್ಥ್ಯಮಂ ||21||

ಕವಿಗಳ ಮಹಾಗಮಕಿಗಳವಾದಿಗಳವಾಗ್ಮಿ | ಸಿವಪದಕಲಾವಿದರ ಸಚಿವರವಿವೇಕಿಗಳ | ಸವಿನಯುಸ್ಥರಪುರೋಹಿತರ ತಾಂತ್ರಿಕರಮಾಂತ್ರಿಕರ ಬಹುಶಾಸ್ತ್ರಜ್ಞರ|| ತವೆದಂಡನಾಥಮಂಡಳಿಕ ಸಾಮಂತರಾ|ಜವಣಿಗ್ವರಾವಿಲಸಿ ಜೋಗಾಶ್ವಗಜವಾಹ | ಕವಿಶಿಷ್ಟಧನಿಕ ಭಟಗಣಿಕಾದಿಗಳ ಗೃಹಂಗಳಿನದೇಂ ಪುರಮೆಸೆದುದೋ||22||

ಆಪುರಸ್ತ್ರೀಯ ಮುಖಕಿಟ್ಟಬಟ್ಟೋಪಸಿಸಿ | ಭೂಪಾಲಗೇ ಹಂವಿರಾಜಿ ಸುವುದದರೊಳರಿ|ಭೂಪಾಲದರ್ಪ್ಪಶೂರ್ಪಕದರ್ಪ ಕಂದರ್ಪಕೋಪಮಾ ಪೂರ್ಪ್ಪ ರೂಪಂ|| ರೂಪಿಸುಪೊಡರಿದೆನಿಸುವ ಮಲತರಕೀರ್ತಿಕೀ | ರ್ತ್ಯಾಪಗಾಪೂರ್ಣ ಜಲವಿಲಸದಾಂದೋಲಕೇ ಲೀಪರಮರಾಜ ಹಂಸಂರಾಜ ಹಂಸಂನೃಸಿಂಹಬಲ್ಲಾ ಳರಾಯಂ ||23||

ಶ್ರೀವಿಪುಳನರಸಿಂಹಬಲ್ಲಾಳ ಭೂಮಿಪಂ | ಕೋವಿದಂಯುವರಾಜ ಪ ಟ್ಟಾನ್ವಿತಂಪಿಟ್ಟಿ | ದೇವರಾಯನೆನಿಪ್ಪ ಪುತ್ರಸಹಿತಂಯಾದ ವಾನ್ವಯೋದ್ಧರಣ ಸಾದ || ಆವೀರಸಳನೃಪರಂಪರಾಸಿಂಹಾಸ | ಸಾವಲಂಬಂಚತುಶ್ಶರಧಿಮು ದ್ರಾಮುದ್ರಿ | ತಾವನಿತಳಾವೃತ ಪ್ರಬಲಪ್ರತಾಪ ಪ್ರಭಾವಿಭವದಿಂದೊಪ್ಪಿ ದಂ ||24||

ಆನರಾಧಿಪಶೇಖರಂಗೆ ದಕ್ಷಿಣಭುಜ| ಸ್ಥಾನನೆನೆ ನೆಗಳ್ದ ಗೌರಪದಣಾಯಕನೆಂಬ | ನೂನಮಂತ್ರೀಶ್ವರಂ ಕಂಮೆಕುಲವಲ್ಲಭಂ ಶಿವಭಕ್ತಿಪಾರಂಗತಂ || ನಾನಾಕಲಾವಿದಂ ನರಸಿಂಹಬಲ್ಲಾಳ | ಭೂನಾಯಕನ ರಾಜ್ಯಭಾರವೆಲ್ಲವ ನಾಂತು | ತಾನಿಳಾತಳವನುದ್ಧರಿಸುತುಂ ನಿಷ್ಕಂಟಕತ್ವದಿಂಸುಖಮಿರುತಿರೆ || 25 ||

ಅಂತೆಸೆವ ಪರಮಶಿವಭಕ್ತನು ದರದೊಳುಮಾ | ಕಾಂತನನಿರೂಪದಿಂದಂ ಬಿಕಾಸಾಮರ್ಥ್ಯರ್ | ಸಂತಾನವಂಗನಾರೂಪದಿಂದೊಗೆದು ಮಾದೇವಿಯರೆನಿಪ್ಪ ಪೆಸರಂ || ಅಂತುಬಾಲ್ಯಾವಸ್ಥೆಯುಂ ಕಳೆದುಪೊಸಜವ್ವ | ನಂತನಗೆಸಾರೆನಳನಳಿಸಿಬೆಳೆವುತ್ತಿರ್ದ್ದರ್ | ಳಂತವಳ ರೂಪಲಾವಣ್ಯಾತಿಶಯಮನಾನಿಂತೆಂದದೆಂತುಪೊಗಳ್ವೆಂ ||26||

ಅಡಿದಳದ ಬಲ್ಪೊಂಪು ಕೆಂದಳಿರಪೆಂಪನವ | ಗಡಿಸಿಮರನೇರಿಸೆ ಪೊದಳ್ದುಗುರ್ ಶುಕ್ತಿಜದ | ಬೆಡಗಿಂಗೆಭಂಗಮಂಸಂಗಳಿಸೆ ಪಾದಾಗ್ರವಾಮೆಚಲ್ವಿಂದಾಮೆಯುಂ || ಜಡಿದುನೀರೊಳ್ನೆರಪೆ ಜಂಘೆಯಲರ್ಗಣೆಯುಮರ್ | ಸಿಡುಗೊಣೆಯನೆಯ್ದುಮುಯ್ಗಟ್ಟವನ ಬೆಂಬಳಿಗೆಕೆಡಪೆ ನು | ಣ್ದೊಡೆಬಾಳೆಯೋಳಿಯುಂ ತಲೆವಾಗಿಸಲ್ ಸೊಗಸನೇವಣ್ಣಿಪೆಂ ||27||

ಬೆಟ್ಟಂಗೆಬೆಟ್ಟತ್ತನೆಸಗೆ ಪೃಥುಲಶ್ರೋಣಿ | ತೊಟ್ಟನೆಕೊಳಲ್ವಂತೆ ಮಾಚಿಪೊಕ್ಕುಳ್ಸುಳಿಯ | ನಟ್ಟಪಾಸಂಗೆಯ್ದುಕಿರುದೆರೆಯ ಮುರುಕಮಂತ್ರಿವಳಿ ಸಂದೇಹಮುಖ್ಯಂ || ನೆಟ್ಟನೊಪ್ಪಿರ್ಡಿಯೆಂಬನುಡಿಗೆ ಪಿಡಿವಗೆಯಾಗೆ |ದಿಟ್ಟಿತಾಗುಗುಮೆಂದು ಕತ್ತುರಿಯಗೆರೆಯನರೆ | ಯಟ್ಟಿಪೊಸಬಾಸೆ ಪೊಂಗಳಸಕ್ಕೆ ವಿಳಸಮಂ ಬರೆಯೆನೆಲೆಮೊಲೆಗಳಂದಂ ||28||

ಲಲಿತಕರತಲವೊಂದಿಮೆರೆವನಳಿತೋಳರುಣ | ಜಲಜವಾಂತೆಸೆವ ಬಿಸವಲ್ಲಿಯಂನೀರ್ವೊಗಿಸೆ | ಸಲೆಕೊರಲ್ಜಲಜಾತಶಂಖಮಂ ಘೂಂಕಿಸೆ ಸುವಿದ್ರುಮವನಮೃತಾಧರಂ || ತಲೆಯೆತ್ತದಂತೆಸಗೆ ಶತಕೋಟಿತಾನೆನು | ತ್ತಲೆಯೆಸುಲಿಪಲ್ವಿಭ್ರಮಂ ಕದಪುಕೈವಿಡಿಯ ನೆಲೆನೀರಸಂಗೆಯ್ಗೆ ನಾಸಿಕಂ ಚಂಪಕಮನಾಶ್ರಿತಧ್ವಂಸಿಯೆನಿಸೆ ||29||

ಚಂಚಲಾಕ್ಷಿಗಳಡಾಳಂ ಬಳ್ಳಿಮಿಂಚಂಪ |ಳಂಚಲೆಯೆ ಕಿವಿಗಳಾಶ್ರೀಕಾರದಾಕಾರ | ಮಂಚುನ್ನವಾಡೆ ಕುಚುವುರ್ವ್ವರ್ಕರ್ವ್ವರನಬಿಲ್ಲಬಿಂಕಮಂಕೊಂಕೆಗೆಯ್ದೆ || ಮಿಂಚುವನೊಸಲ್ತೊಳಗುವೆಳೆವೆರೆಯ ಮೋಹನಕೆ | ಪಂಚತ್ವಮಂ ಸಾರ್ಚ್ಚ ನಗೆಮೊಗಂಪೂರ್ಣೇಂದು | ವಿಂಚೆಲ್ವುದೋರೆ ಕಾರ್ಮುಗಿಲಪೇರ್ಮೆಗೆ ನೂರ್ಮಡಿಸೆಮುಡಿಯದೇಂಮೆರೆದಳೋ ||30||

ಬಗಸೆಗಣ್ಕುಡಿನೋಟವಮುವು ಪೊಸಗಾಡಿಯುಂ | ತೆಗೆಯೆ ಲಾವಣ್ಯರಸಮಂ ಬೀರೆಮುದ್ದುಮೊಗ | ಮುಗುಳೆಹೊಗರಂತೋಳ ಮೊದಲಪ್ಪುಗೆಯ್ದೆ ಲಲ್ಲೆಯುಚಲ್ಲಮಂಸವಿನುಡಿ || ಝುಗಝುಗಿಪವ್ಯೊಂಬಂಣದಿಂ ತಿಣ್ಣಮಾಗಿಕಡು | ಸೊಗಸೆತನುಕಾಂತಿ ನಡೆನಟಣೆಯುಂಸೆರೆಗೆಯ್ದೆ|ಮಗಮಗಿಪಮೃಗಂಪ್ರಪರಮೆವಿಂಡಂ ಸಾಲಿಡಿಸೆ ದಿಟ್ಟಿಗೇನೆಸೆದಳೋ ||31||

ಅರಗಿಳಿಕರ್ದುಂಕದಿಂಮಾವಿನೊಳ್ವಂಣೊ ಮಧು | ಕರನಝುಂಕಾರಕೊಲಾಹಲಕ್ಕಿಂಬಾಗಿ | ಪರಿಮಳಂದೆರದೆವಿಳಸಲ್ಪೆಗೆದ ಕಂಮಲರೊ ಗಂಡುಗೋಗಿಲೆಯುಕೊರಲಾ || ಸರಮನೊಯ್ಯಾರಿಸದಹಂದಳಿರೊ ಗರಿಯೊಂದ|ದರಲಸರಲವನುಸೆದಮುಂಮೊನೆಯ ಜೋಳೆಯೋ | ಪರಿಕಿಪೊಡೆನಾಭಿಗಳೆಯುದ ಪೊಚ್ಚಪೊಸನುತ್ತೊವನಿಸಿಕಣ್ಗೆಡ್ತಮಾಗೆ ||32||

ಬಂತುಫಳಫಳಿಸುವೇರುಂಜವ್ವನೆಯುನಪಳ | ಕಾಂತಾಧಿದೇವತೆಯುನೀಕ್ಷಿಪರಕಣ್ಣಪು | ಶ್ಯಾಂತಾನೆನಿಪಳನಮಲಾಂಗಿಯುಂ ಮೋಹನಾಪಾಂಗಿಯುಂ ತನ್ನಮಗಳಂ || ಸಂತಸದೆನೋಡಿ ಹರಹರಮಹಾದೇವಯೆನು|ತಂತೆಮನದೋಳ್ತೊಪಿರದು ಸಚಿವವರನೀಲ| ತಾಂತಗಂಧಿಗೆವರನದಾರೆಂದೆಣಿಸಿ ಕೂಡೆನೆನೆದನೇಂಸುಕೃತಫಲಮೋ ||33||

ಅಮ್ಮಮ್ಮ ಸಾಕ್ಷಾನ್ಮಹೇಶಾಪರಾವ ತಾ | ರ ಮ್ಮಲ್ಲಿಕಾರ್ಜುನಾಚಾರ್ಯನಾತನ ತನೂ | ಜಮ್ಮ ಪಿಮ ಸಕಲೇಶಮಾದರಸರಾತನಣುಗಂ ಮಾಯಿದೇವ್ರೋತ್ತಮಂ || ಎಮ್ಮಕ್ಕನಾತನರ್ಧಾಂಗಿಯುವರಂ ಪೊಗಳೆ | ಬೊಮ್ಮಂಗಳುವೆ ಯುದಂತಿರ್ಕೆಯೂಮಾಯಿ ದೇ | ವಂಮೊನ್ನೆ ಶಿವನ ಗರ್ಭಂಬೊಕ್ಕನೆಂದ ಕೇಳ್ದೇಂತಚ್ಚಿವಾನ್ವಯಸ್ಥಂ || 34 ||

ಪರಮ ಕಾರುಣಿಕನಾಚಾರ್ಯ ಕುಲಶೇಖರಂ | ಶರಣನಿಧಿ ಸಜ್ಜರಿತನಖಿಲಾಗಮಜ್ಞ ನುರು | ತರ ಪದ್ಮಣಾರ್ಯನಂಬಾನಗರಿಯಲ್ಲಿರ್ಪನೆಂದು ಕೇಳ್ದರಿವೆಪಾತಂ || ಪರನಲ್ಲವೆಮಗೆ ಸೋದರರದಳಿಯನಾ ಮಹಾ | ಪುರುಷನೇತಕ್ಕವರ ನೀತನ್ನಿಗೆನುತೆ ಸ | ಭ್ಯರನಿರದೆಬರಿಸಿತಾಂ ನೆನೆದಕಜ್ಜಂಬೇಳ್ದುತದನುಮತಮಂಧರಿಸುತೇ || 35 ||

ತ್ವರಿತದಿಂದವನನಿಲ್ಲಿಗೆ ತರ್ಪೆನಾನೆನುತೆ | ಪರಮವೈಭವದಿಂದೆ ಪೊರಮಟ್ಟು ಪದ್ಮರಸ | ಗುರುವಿರ್ಪಪುರಕೆಬರುತಿರೆ ತದಾಗಮನವಂ ಕೇಳ್ದಾನಗರಿಯನಾಳ್ವ|| ದೊರೆಸಕಲಸಂಭ್ರಮದಿ ನಿರಿಗೊಂಡುಕಾಣ್ಕೆ| ಗೊಟ್ಟಿರದೋಲಗಿಸಿ ಬರುತ್ತಿರೆಪುರಂಬೊಕ್ಕು ಶಂ | ಕರ ಪದ್ಮಕ್ಷನ ನುರುಕೃಪಾಕಟಾಕ್ಷನ ನೀಕ್ಷಿಪ ಕ್ಕರಿಂ ಗೃಹಮನೆಯ್ದಿ || 36 ||

ನಿರುಪಮಮಹಾಭಕ್ತ ಜನಸಭಾಮಧ್ಯ ದೋಳ್ | ಪರಮಶಿವತತ್ವಗೋಷ್ಠ್ಯಾನುಭವ ಗೋಷ್ಠಿಯಿಂ | ದೆರಹನೆಯುತರುಣೇಂದುಧರನಂ ತೆರೆಳೊಳಗೊಳಗುತಿರ್ಪ ಪದ್ಮರಸಾರ್ಯರಂ || ಹರಿಸದಿಂಕಂಡುಮೆಯ್ಯಿಕ್ಕಿ ಶರಣಾವಳಿಗೆ | ಭರವಸದಿ ಪೆರಗಿ ತಮ್ಮಗ್ರಜೆಯಪಾದ ಪಂ | ಕರುಹಕಭಿನಮಿಸಿ ಕಾಲೋಚಿತೋಕ್ತಿಗಳನನ್ಯೋನ್ಯೋಪಚಾರವಾಂತು || 37 ||

ಮೇಲೆಮಂತ್ರೀಶ್ವರಂ ಸದ್ವಿನಯಭಯಭಕ್ತಿ | ಕೀಲಿತವಚೋವಿಲಾಸಂಗಳಿಂದೆಲೆ ಭಕ್ತ | ಲೋಲ ಸುಗುಣಗಣಾಲವಾಲ ಮತ್ಪುತ್ರಿಯಂ ಪಂಕೇಜದಳನೇತ್ರೆಯಂ || ಬಾಲೇಂದುಧರಕೃಪಾಪಾತ್ರೆಯಂ ಕೈಕೊಂಡು | ಪಾಲಿಸೆನ್ನನೆನುತ್ತೆ ಪೊರಮಟ್ಟುಶರಣಾನು|ಕೂಲದಿಂ ಬಿನ್ನವಿಸೆಶಿವತಂತ್ರಮೆನುತದಂ ಗುರುವರಂಮನದೆಗೊಂಡು || 38 ||

ಅಂಗೀಕರಿಸಿದೆವಂತೆನಗೆನೆ ಮುದಂಬೆತ್ತು | ನೀಂಗಮಕದಿಂದೀ ಗುರೂತ್ತಮನನಿರದೆ ಬಿಜ | ಯಂಗೆಯ್ಸಿ ತರ್ಪುದೆಂದೋರ್ವ ಸಜ್ಜನನಖಿಲವಿನಿಯೋಗಸಹಿತಮಿರಿಸಿ|| ಸಾಂಗದಿಂತಾಂತಿರಿಗಿ ಬಂದುದೋರಸಮುದ್ರ| ಮಂಗಾಡಿಯಿಂ ಪೊಕ್ಕುಗೌರಪದಣಾಯಕಂ | ಮಂಗಲಾರ್ಥಂಪುರಮನಂತೆ ಚಪ್ಪರಮನುರೆಸಿಂಗರಿಸಿ ಮೆಸೆಚಾರರಂ || 39 ||

ಸಾರಣೆಗಳಿಂರಂಗವಲ್ಲಿಯಿಂ ಕುಸುಕದಿಂ | ದೋರಂತೆಸೆವಕುರುಜೆ
ನಿಂ ಪತಾಕಾಳಿಯಿಂ | ತೋರಣಗಣಂಗಳಿಂ ಗುಡಿಗಳಿಂ ಚಿತ್ರಪತ್ರಾದಿಕೌಶ
ಲ್ಯಂಗಳಿಂ || ಭೋರನಮುದರ್ಪ್ಪ ಶೋಭಾಭರಿತಮಾಗೆ ಪರಿ | ಚಾರರ್ಪುರಮ
ನಿರದೆ ಸಿಂಗರಿಸಿ ಚಪ್ಪರ ಮ | ಸಾರಂತುಟಿಂತುಟೆಂದು ಪಮಿಸಲ್ಕೆರೆವರೆಸಿಪಂ
ದರಿಂರಚಿಸಿತೋರೇ || 40 ||

ನೋಡಿಮೆಚ್ಚಿಂಮನದೆ ಸೂಡಿಯುವರಿಷ್ಟಮಂ | ನೀಡಿ ಹರ್ಷಾಬ್ಧಿಯೋ
ಳ್ಮೂಡಿ ಮುಳುಗುತ್ತೆ ಶಶಿ | ಚೂಡಭಕ್ತನಿಕಾಯಮಂ ಸಕಲಪುಣ್ಯಪಣ್ಯಾಂಗನೆ
ಯರಂ ಬರಿಸುತೇ || ಕೂಡೆಗಣಪರ್ವಮಂ ಮಾಡಿಭಯಭಕ್ತಿಯಿಂ ಪಾಪರಿದುಭ
ಜಿಸಿಸಚಿವಂ ನಿಜಕುಮಾರಿಯುಂ | ಗಾಡಿಕಾರ್ತಿಯರನೀಕ್ಷಿಸಿ ಸಿಂಗರಿಪ್ಪುದೆನಲು
ತಾಂಗಿಯರ್ನುಡಿದರಿಂತು || 41 ||

ಸಿಂಗರದಸೀಮೆಗೆಳೆವೆಣ್ಗಳರಸಿಗೆ ಮೋಹ | ನಾಂಗಿಗೀಸಿಂಗರದ ಪಂ
ಗುಂಟೆಮಂಗಲದ | ಸಾಂಗಕ್ಕೆ ಸಿಂಗರಿಪೆನನುತೆ ಬಹುವಾದ್ಯಮುಲಿಯುತ್ತಶೋ
ಭನಮನುಸಿರುತೆ || ಪೊಂಗುತುಂಕಮ್ಮೆಣ್ಣೆಯಂ ತಂದುಸತಿಯರ್ಚ | ದಂಗಿಂ
ಬಳ್ಮುಡಿಸಡಿಲೆ ಕಣ್ಣೆಳಗುಪೊಳೆಯೆ | ತುಂಗಸ್ತನಂಕದಕ್ಕರಿಸೆ ಬಪನಪುಬ್ಕೆ
ಗಾಡಿಯಿಂದೊತ್ತಿಪಲ್ಲಿ || 42 ||

ಕೆಂದಾವರೆಗಳಿರದೆಬಂದು ಮಧುಕರವೃಂದ | ಮುಂದಿಟ್ಟಂ ಮುಟ್ಟಿಪಂ
ತೊತ್ತುವಳಪಸ್ತಾರ | ಸಿಂದಂಪಿರಾಜಿಸಲ್ಕೂಡೆ ಕಾರ್ಮುಗಿಲೊಳಗೆ ತೊಳಗುವ
ಳಿಮಿಂಚಿನಂತೆ || ಕುಂದದಗುರಿಸಿಯುಗುರ್ವೆಳಗು ಸೊಗಸಿಂದೆಣ್ಣೆ | ಯುಂದೇ
ಪಿಗೊತ್ತಿಕಟ್ಟಾಣಿಮುತ್ತಂ ತೊಳೆವ | ಚಂಪದಂತಮುಮುಮಂಗಳಮುಜ್ಜಸಂ
ಗಿಪ್ಪಿ ಪೊಚ್ಚಪೊಸದುಗುಲಮುಡಿಸಿ || 43 ||

ಬಳಿಕೆಕಬ್ಬುರಲ ಬಣ್ಣಮನೇಳಿಸುವ ಕಚಾ | ವಳಿಗಳಂಬಗಿಬಗಿದು
ಪುಡಿಗತ್ತುರಿಯನೆಪ್ಪು | ತಳಿದೋರಣಂಗೊಳಿಸಿ ಕಪ್ಪುಬರ್ಗಳಂ ಮುಡಿಸಿ ಬಲ್ಲು
ರುಂಬಂಸಿಮಿಚಿರ್ || ತಿಳಕಮಂಭಾಳ ಕಿಡೆಕಾರ್ಮುಗಿಲಸುರೆ ನೆಪ್ಪು | ತೊಳಗ್ಗು
ವ ಸುಧಾಸೂತಿಬಿಂಬವೋ ಎಂಬಂತಿ | ರಳವಡೆವೊಗಂಯಕ್ಷಕರ್ದಮಾವಿಗ
ಳನರೆಪಾವನಿತೆಗನು ಲೇಪಿಸಿ || 44 ||

ವೀರಮುದ್ರಿಕೆಯ ಸಿರದು ಲಿವಕಾಲುಂಗುರವ | ನಾರಯ್ಯ ಪಿಲ್ಲಿಮಂ ಟೆಗೆ ಕಿರಿಯಪಿಲ್ಲಿಗಳ | ನಾರಮಣಿ ಗೊಲ್ಲಲಂಕರಿಸಿ ನೇವುರಪಾಯವಟ್ಟಂಗಳಂ ವಿರಚಿಸಿ || ಚಾರುಪಂಸಕ ಮುಂಪಮಂತಿಕ್ಕಿ ಝಣಝಣ | ತ್ಕಾರಮಂ ಮಾಳ್ಪಕಿಂಕಿಣಿಗಳಂಘಂಟೆಗಳ | ನೋರಂತೆ ತಾತಿ ಮೊದಲಾದವಂಕಟ್ಟಿ ಚಂಚತ್ಕಾಂಚಿಯಂಬಂಧಿಸಿ || 15 ||

ಮಿಸುನಿಯೊಳ್ಪಳಿಗಳಂ ಮಿಸುಪ ಭುಜಕೀರ್ತಿಯಂ | ಮಿಸುಪಕೇಯೂರಮಂತೋಳರಕ್ಕೆಯ ಮಣಿಯ | ಸೆಸೆವ ಕಂಕಣಮನಾಪಾರಿ ಹಾರ್ಯಂಗಳಂ ಬೆರಲರತ್ನೋರ್ಮಿಕೆಗಳಂ || ಕುಸುರಿಗೆಲಸದ ಮಣಿಪದಕಮ ನೊಪ್ಪುವಮುತ್ತಿ | ನಸಮಹಾರಾವಳಿಯ ಸುಜ್ವಲಿಪಲೇವಣಮ | ನುಸುರಲೇಂನಕ್ಷತ್ರಮಾಲೆಯಂ ಕಂಠಾಭರಣಮನಳ ವಡಲಮುಚ್ಚಿರ್ || 16 ||

ನಿಳಿರ್ವಕೆಂಬರಲೋಲೆಯುಂ ಕಿವಿಗೆಸಾರ್ಚ್ಚಿತಳ | ತಳಿಪ ಪೊಸಕಟ್ಟಾಣಿ ಮುತ್ತೆಸೆವ ಮೂಕುತಿಯ | ನಳವಡಿಸಿ ನಾಸಿಕಕೆ ಬೊಟ್ಟಂ ನೊಸಲ್ಗಿಟ್ಟು ಜೈತಲೆಯ ಸೊಡನಮುಚಿರೇ || ಪೊಳೆವ ಸೂಸಕಮನೊಪ್ಪಂಗೊಳಿಸಿಕೋಮಲೆಯ | ರಳಿಕುಳಾಳಕಿಗೆ ಸೀಮಂತಮಣಿಯಂಧರಿಸಿ | ಬಳಿಕೆಕರ್ಪೂರ ತಾಂಬೂಲ ಮಿತ್ತುಪ್ಸ್ವಾರತಿಯನೆತ್ತಿ ಕಡುಗಾಡಿಯಿಂ || 17 ||

ತಂದು ಸಚಿವಾಗ್ರಣಿಗೆ ತೋರೆಪುಳಕಂಬೆತ್ತು | ಮಂದಹಾಸಂಸೂಸೆಮಗಳನುಪಲಾಲಿಸುತೆ | ಪೆಂದದಾನಂದದಿಂದಿರಲಿತ್ತಲಪಿಲ ಮಾಹೇಶ್ವರರಜರಣಾಂಬುವಿಂ || ಒಂದಿದಮಲಾಂಬುವಂಮಿಂದು ಸಿತಭಸಿತದಿಂ | ದಂದಮಾಗಲ್ ತ್ರಿರೇಖೆಯನಿಟ್ಟುರುದ್ರಾಕ್ಷ | ಮಂದೋಷದೂರಂಧರಿಸಿ ಶಿವಾರ್ಪ್ಪಿತಕುಸುಮ ಮಂಸಿರಿಮುಡಿಗೆ ತುರುಂಬಿ || 18 ||

ಅಸಮ ದಿವ್ಯಾಂಬರಾಲಂಕಾರಿಯಾಗಿರಪ | ಮೊಸರ್ವ ಶಿವಶೇಷಕರ್ಪೂರತಾಂಬೂಲಮಂ | ಪೊಸಗಾಡಿಯಿಂಪರಿಗ್ರಹಿಸಿ ಶರಣಶ್ರೇಣಿಯಂ ಸತ್ಕರಿಸಿಹರ್ಷದಿಂ || ಒಸೆದುಗಿರಿಜಾವರನ ಭಕ್ತಿಪ್ರವರ್ಧನ | ವ್ಯಸನಕ್ಕೆ ಸಂಚಕಾರಮಿದೆಂದು ಮನದೊಳಂ | ಕಿಸುತೆ ನಿಜಮಾತೃಸಹಿತಂ ಭಕ್ತತತಿವೆರಸು ಪೊರಮಟ್ಟು ತನ್ನಗರಿಯಂ || 19 ||

ಹರಿಸದಿಂಪೊನ್ನಂದಣವನೇರಿ ತಾಂದೋರ | ಶರಧಿಯುದೆಯಿದೆಯೆಂಬ ವೊಲ್ನಡೆಯೆಕೇಳ್ದುಭ | ಕ್ತರದೇವನಾದ ಗೌರಪದಣಾಯಕನಖಿಲವೈಭವಂ ಶೋಭಿಸುತಿರೇ || ಹರಿದಂತದಂತಿಗಳ ಗೋಣಿಂದುಕುಸಿಯುದೇ | ಸಿರಲಾಪ್ಪ್ವೇ ಎಂದು ನೋಟಕಮೂರ್ಗಿಂಗೆ| ಬಿರಳಿಟ್ಟು ಸೋಜಿಗಂಬಡುತಿರೆ ಸಮಸ್ತಜನಮಂ ನೆರಪಿಮನದಗೆಲವಿಂ || 50 ||

ಸಕಲ ಸಂಭ್ರಮಸಹಿತನಾಗಿ ಬಂದಿದಿರ್ಗೊಂಡು | ಸುಕೃತಾತ್ಮನಂ ಭದ್ರಗಜವನೇರಿಸಿ ವಿಲಾ | ಸಕೆತಿಟ್ಟನೆಪುರಂಬೊಕ್ಕು ಬಪ್ಪಾಗಳಿಕ್ಕೆಲದಸೀಗುರಿಯ ಸಿರಿಗಳಿಂ || ಚಕಚಕಿತಮಾಗಿಡಾಳಿಪ ಚಾಮರಂಗಳಿಂ | ಪ್ರಕಟಪ್ರಭಾನ್ವಿತಸಿತ ಛತ್ರತತಿಯಿಂನ | ಭಕೆನೆಗಪ ಪೊಳೆವ ಗುಡಿಯಿಂ ಪತಾಕಾಳಿಯಿಂ ಶೋಭಿಸುತಿತದ್ಗುರುವರಂ || 51 ||

ತರದಿಂವಿಪಂಚಿವಲ್ಲಕಿ ಚಿತ್ರೆಯಾಜ್ಯೇಷ್ಠೆ | ವರಘೋಷವತಿ ವಿಜಯೆನಕುಲೋಷ್ಠಿ ಕೂರ್ಮಿತುಂ | ಬುರಿವಿಕುಬ್ಜಿಕೆ ಹಸ್ತಿಕಾಷ್ಠಿಶತತಂತ್ರಿ ಕಿನ್ನರಿಲಸತ್ಪರಿವಾದಿನೀ || ಕರಮೆಸಾರಂಗಿತತ್ರಿಸರಿಯಾಲಾಪಿನಿವಿ | ಚರಿತರಾವಣ ಹಸ್ತಿ ಢಕ್ಕುಲಿಪ್ರಮುಖಮಂ | ಘುರತತಮುಸಂತೆಪಟಹಂ ಹುಡುಕ್ಕೆಕುಡುಕ್ಕೆ ಢಕ್ಕೆಪಟಹಂಮೃದಂಗಂ || 52 ||

ಕರಡೆಡಕ್ಕುಲಿಮಂಡಿಡಕ್ಕೆಶಲ್ಲುಕೆಕುಡುವೆ | ಯುರುರುಂಜೆಪತ್ರಿವಳಿಡವಸೆಸಿಸ್ಸಾಣಂಡೆ | ಮರುಕಭೇರೀಸ್ತಂಬಕೀಮುಖಾನದ್ಧಮಂ ತಾಳಂ ಸುಕಾಂಸ್ಯತಾಳಂ || ಮೊರೆವಜಯಘಂಟೆ ಪಟ್ಟೆಪಟ್ಟ ಶುಕ್ತಿಭಾ | ಸುರಕುಡುಕಕಮಾದಿ ಘನಮನಾಪಾಲಿಕೆಮು | ಹುರಿಶೃಂಗವಂಶಕಹಳಾ ಶಂಖಪಾವಪ್ರಭೃತಿ ಸುಷಿರವಾದ್ಯಚಯಮಂ || 53 ||

ತಳಸಂಚು ಮಧ್ಯಸಂಚುಪ್ಪರದ ಸಂಚುಗಳ | ನಳವಡಿಸಿ ಸಂಯೋಗ ವಿಪ್ರಯೋಗಾಕ್ರಮೋ | ಜ್ವಳಸಕ್ರಮದಿ ನಸ್ವರಸ್ವರ ಜನಿತಮಾದ ವಿವಿಧವಿಧಪಾತಂಗಳಂ || ತಳಪಾಟಹಸ್ತಪಾಟ ದ್ವಯದಿನಮರ್ದುಪಸ್ತಹಸ್ತದ್ವಯಾಂ | ಗುಲಿಕೋಣಜಿಪ್ಪಿಕೋಪಾಧಿಯಿಂಸ್ಫುರಿಸಿ ಕವಳೋದ್ಘಳಿಯ ದೆಂಪ್ಪೊಂಗಳಂ || 54 ||

ತಿಳಿದು ತತ್ಪಂಚವಿಂಶತಿ ವಿಧಮನಾರಯ್ದು | ಬಳಿಕಮೆಂಭತ್ತೆಂಟು ಪಾತಭೇದಂಗಳಿಂ | ಮಿಳಿರ್ವಜಪುವಾದ್ಯವರ್ಗ ಪ್ರಭೇದದ ಶುದ್ಧಕೂಟ ಪಿಂಡ ವ್ಯಾಪಕ || ಲಲಿತತರ ಕೋಮಲಾತ್ಯಂತ ಕೋಮಲಪಾಟ | ಕುಳವೊಂದಿತತ್ತ್ರ ಬಂಧಂಜ್ವಳಿಸೆ ತದ್ವರ್ಣ | ಮಿಳಿತ ವಿಧಿಯೊದವೆತಾಳಾನುಗತಮಾಗಿ ಬಾಜಿಸುತೆ ತತ್ಕುಶಲಗತಿಯಿಂ || 55 ||

ಕಂದಾಪ್ರುಜಕೆ ವಿಜಯಮತ್ತಂಡಮರುಗಕ್ಕೆ | ಸಂದಸಾಳಗಮತ್ತಮಂತೆ ಹಸ್ತಾಪ್ರುಜಕ | ಮುಂದಪ್ರಥಮ ಮತ್ತಮಾರುಂಜೆಗೊಪ್ಪುವ ವಿಶಾಲತರಕೀಲ ಮತ್ತಂ || ಬಂದಿಚಾಡಿಕೆ ಗುರುಸರಸ ಮತ್ತಮುರೆಕುಡು | ಕ್ಕಂದಲೆಸಿಸುವ ವಾದ್ಯಕಸಮುಪಟುಮತ್ತಮತಿ | ಛಂದದಪ್ಪಾಪ್ರುಜಕೆರವಿಮತ್ತವಾಭಾರಿವಾದ್ಯಕ್ಕೆ ಚಕ್ರಮತ್ತಂ || 56 ||

ವರಕುಂಭವಾದ್ಯಕೆ ವಿರಾಮಮತ್ತಂ ವಿಮಲ | ಕರತವಣೆಗಾಥನಂಜಯ ಮತ್ತಮತಿಶುಭಂ | ಕರಪಂಚಮುಖಕೆ ಸಟ್ಪ್ರೇಮತ್ತಮಂತೆತಪ್ಪಟೆಗಹೋರಂಗ ಮತ್ತಂ || ಸ್ಥಿರಮಲಪಂಗೆ ಜಯಪ್ರಿಯಮತ್ತಮಾತುದ್ಧ | ಕರರೆಯೊಡ್ಡಿಯಮ ತ್ತಮೋವ್ರೊಕುಡುಪಾಪ್ರುಜಕೆ | ಪರಮನಿರ್ವಾಣಮತ್ತಂ ಡಕ್ಕುಲಿಗೆ ಸಲೆವಿಚಾರ ಮತ್ತಂಕಮ್ರುಗೆ || 57 ||

ಮೂಲಕಲ್ಯಾಣಮತ್ತಂಮುಂಡಿಡಕ್ಕೆಗೆ ಕ| ರಾಳಮತ್ತಂಕರಟೆಗೆ ವಿಲಾಸ ಮತ್ತಮಾ | ಲೋಲಕರ್ಪರಡಕ್ಕೆಗತುಳವಲ್ಲಭಮತ್ತಮಾಪಟ್ಟವಾದ್ಯಕೆಯ್ದೆ || ಶೀಲಘನಮತ್ತಂ ಕಲಾಪಮತ್ತಂ ಶಂಖ | ಕಾಲಲಿತಚಿತ್ರಮತ್ತಂ ವೀರ ಕಾಹಳೆಗೆ | ಮೇಲೆಮುದ್ರಿತಮತ್ತಮಾ ಕಾಹಳೆಗೆ ವೀರಣಕ್ಕೆ ಯಾಲಾಪಮ ತ್ತಂ || 58 ||

ಶೃಂಗಕ್ಕೆತಾರಾಪ್ರತಿಮಮತ್ತ ಮಾತ್ರಿವಳಿ | ಗಂಗಮನೆ ವರ್ಣಮತ್ತಂ ಸುನಿಃಸಾಣಕ್ಕೆ | ಮಂಗಲಗಭೀರಮತ್ತಂ ವ್ರೊಳೆವಕೌಸಾಳಕಮಲತರವಾಮ ಮತ್ತಂ || ಸಾಂಗದಿಂಗಿಡಿಬಿಡಿಗೆಭಿನ್ನಮತ್ತಂ ಮೇಣ್ಕ | ಳಿಂಗಮತ್ತಂ ಭೇರಿಗ ಮಮರಣ ಭೇರಿಗು | ತ್ತುಂಗ ಸಂಕೀರ್ಣಮತ್ತಂ ಪೊಣ್ಮೆ ಕೇಳಿಸುವವಾದ್ಯಧರ ರಂಮೆಚ್ಚುತುಂ || 59 ||

ಮೇಳಾಪಕಮನೊಡನೆ ದೇಶಾಖ್ಯಪದ್ಧತಿಯ | ನಾಳಾಪಚಾರಿಣಿಯ ನಾಕುರನ ವೈಖರಿಯ | ಲೀಲೆಯಂ ಬಳಿಕೆವಹಣಿಯಂ ಶ್ರಮವೈಖರಿಯ ನಾತೆರದೊಳೊಪ್ಪುವ || ಲೋಲಕುರಚಾಲಿಕ ಸುಚಾಲಿಕಂಗಳನ ಮರ್ದ|ಲಾಲಿ ತವ್ಯಾಪ್ತಿಯಂ ಕೂಟಮಾನಮನೆಸೆವ|ಚಾಲಿಯುಂಬೈಸಿಗೆಯು ನೆತ್ತಿಬಾಜಿಸುವಮ ದ್ದಳಿಗನಂ ಮಂನಿಸುತ್ತುಂ || 60 ||

ಕಾಲಂದಿಳಿದುಮಾರ್ಗಮಂಸಿರಿಸಿ ತತ್ಕ್ರಿಯಾ | ಜಾಲಮಂ ಸ್ಫುರಿಸಿ ಯುಚಿತಾಂಗಮಂ ಸಂಗಳಿಸಿ | ಲೋಲಗ್ರಹದ ನೆಲೆಯನರಿದು ಜಾತಿಯಸಂ ಪ್ರಯೋಗಿಸಿ ಕಳೆಯಪತ್ತಿಸಿ || ಮೇಲೆಲಯಮಂನಿಯತಿಗೆಯ್ದು ಯತಿಯನಮ ರ್ಚಿ| ಲಾಲಿತಪ್ರಸ್ತಾರಜ ಪ್ರಯೋಗಜಮಾದ | ತಾಳಮಂ ಲಕ್ಷ್ಯಲಕ್ಷಣವಮ ರಲೆತ್ತಿ ಶಬ್ದಾದಿಗಳರಚಿಸಿಕೂಡೇ || 61 ||

ಕ್ರಮದಿಂದ ವಾಯತವಿಚಿತ್ರಮಾಲಾಪ ಚಾ | ರಿ ಮನೋಜ್ಞಬಂಧನ ವ್ಯಾಪ್ತಿವಾದ್ಯಾಂಗ ಮು| ತ್ತಮಸುಪ್ರಬಂಧ ಮುರುಮಾರ್ಗ ಬಂಧಂತದಂತರ ಬಂದಮನುವೃತ್ತಿಯಾ || ಸುಮುಪದಿಚ್ಛಾಬಂಧಮಂತೆ ಸೂಡಾದಿ ಸ| ದ್ರಮ ಣೀಯಮಾದತಿ ಚಮತ್ಕೃತಿಗಳಂ ತಜ್ಞ | ಸಮಿತಿಗತಿ ಕೌತೂಹಲಂದೋರಿ ಯುಪ್ಪಡಿಪತಾಳಧರನಂ ಪೊಗಳುತುಂ || 62 ||

ಸ್ಥಾಯಿಯಂಮಾಡಿ ಸಂಚಾರಿಸಿಯಥಾ ಸ್ವರ | ನ್ಯಾಯದಿಂ ಮಂದ್ರ ಮಧ್ಯಸುತಾರಶುದ್ಧಿ ಯಿಂ| ದಾಯತಮೆನಲ್ ಸ್ತ್ರೀಪುರುಷರಾಗ ಯೋಗಮನ ಮರ್ಚಿ ಮೋಹನಮುದಯಿಸೆ || ಠಾಯಸಿಯಮವ್ಯಾಪ್ತಿಗೆಯ್ದು ತಿರುಪಂಸ್ಫು ರಿತ | ವಾಯತ್ತಕಂಪಿತಂ ಲೀನವಾಂದೋಲಿತಂ | ಶ್ರೀಯುತವಲಿತ್ರಿಭಿನ್ನಂ ಕುರುಳಮಾಹತಂ ಪ್ರೋಲ್ಲಾಸಿತಂ ಪ್ಲಾವಿತಂ || 63 ||

ವರಹುಂಪಿತಂ ಮುದ್ರಿತಂ ನಾಮಿತಂ ಸಮು | ತ್ತರ ಮಿಶ್ರಿತಮೆನಿಪ್ಪ ಗಮಕವಮರಲ್ಕೆ ಪ | ಸ್ವರ ಶಿರಃಕಂಪಾಲ್ಪಕಂಠಮುಖ ವಿಕೃತಿನಾಸಾಸ್ವರ ಪ್ರಭೃತಿದೋಷ || ಸರಣಿಯನಳೆದು ಶುದ್ಧಸಂಕೀರ್ಣ ಸಾಳಗ | ಸ್ಫುರಣವೆ ಸುತಾನಮಂ ಬೀರಿರಸಲಹರಿಗಳ | ಪರಿಗಳಂಪರಿರಚಿಸಿ ಮೂರ್ಛನೆಯನೆಸಗಿ ಪಾಡುವಜಾಣಗಾಣನಂ ಲಾಲಿಸುತ್ತುಂ || 64 ||

ಚಾರುರೇಖಾಸ್ಥಾಪನೀಸು ಸೌಷ್ಠವಧಾಳ | ಸಾರತರತಾಳ ಸಂಧಿಜ್ಞ ತಾನಿಜವಣೋ | ದಾರ ಲಳಿಕರ್ಮುರ್ಝುಂಕಾಂಕ ಕೋಮಲಿಕಾಂಕರಸನೃತ್ತಿ ಹಂಸಗಮನಾ || ಆರಾಜದೋಯಾರ ವೈಷಿಕಾಡಿಳ್ಳಾಯಿ|ಕಾರತಕಳಾಸಮುಖ ನೃತ್ತಾಂಗವಮುರೆ ಶೃಂ | ಗಾರಾದಿರಸವುನಭಿನಯಿಸಿ ಮೋಹಿಪನರ್ತಕಿಯು ನೊಲ್ಟು ನೋಡುತೊಡನೆ|| 65 ||

ಉಲಿವಪಡಿಯರರ ಗಡಬಡಿಪಕೈವಾರಿಗಳ | ಸಲೆಪೊಗಳ್ವವಂದಿ ಮಾಗಧರವೈತಾಳಿಕರ | ನೆಲೆಯುರಿದುಮೇಳಮನ ಮರ್ಚನರ್ತಿಸನರ್ತಕರ ಶೋಭನದಸತಿಯರ || ನಲಿನಲಿದುಗತಿಗತಿಗೆ ಕುಣಿಕುಣಿದು ಕುಕಿಲಿರಿವ | ಸುಲಭರದಿಗಂತಮಂ ವ್ಯಾಪಿಸಿವೊರೆವ ವಾದ್ಯ | ಕುಲದಬಹುರಭಸದಿಂ ದವನಿಶಬ್ದಬ್ರಹ್ಮಮಯವಾಗೆ ಗಮಿಸುವಲ್ಲಿ || 66 ||

ಸಕ್ಕರೆಸವಿಯು ತೊಂಡೆವಾಯ್ದೆರೆಯು ಸೊಗಸನುಗು | ಳ್ವಕ್ಕಜದ ಮುದ್ದುವಾತಿನನಾಡೆ ಕಡುಚಲ್ವು | ಮಿಕ್ಕುಪೊಗರುಗುವ ಹೊಂಬಣ್ಣವೊಳೆಯಾಯತದ ಸೆಕ್ಕಂದುರುಂಬಿನಸುಖಂ || ಜಕ್ಕುಲಿಪಮನಸದನನೆಗಣೆಯನರಸಿಗೆನೋಪೆ | ಸಕ್ಕಸಮನೆನಿಪ ರೂಪಿನ ಪೋಹನಂಜನಿಪ | ಚಿಕ್ಕಹರೆಯದಬೆಚ್ಚಿದೆರಳೆಗಣ್ಮರಲ ಪೆಣ್ಮಕ್ಕಳೆಯ್ತಂದರೊಸೆದು || 67 ||

ಬಾಣಾಸನಂಬಾಧೆಗೊಳಗಾಗಿಯೂರರ್ಗೆ | ಗಾಣದಲ್ಲಿಕ್ಕಿಯರೆಯಿಸಿಕೊಳುತ್ತಿದೆ ತನ್ನ | ಬಾಣಂಗಳಾ ಕಾಕಪುಷ್ಟಮಧು ಪಾವಲಿಗ್ರಸ್ತಂಗಳಾದುವಕಟಾ || ಜಾಣಮರ್ದತಿರುವದಾರಡಿಗೊಂಡು ತಿರುಗುತಿದೆ | ಮೇಣಾಧನುರ್ಧರಂಮೆಯ್ಗರೆದನೆಂದು ತ | ತ್ಪ್ರಾಣಕಾಂತರ ಸಹಾಯದಿನತನುವಂಜರೆವ ಚದುರೆಯರ್ನೆರೆದರೊಡನೆ || 68 ||

ಕುಂದದುರುಭೋಗಾಭಿ ಮುಖಿಯಾಗುಸಜ್ಜನಾ | ಮಂದ ಗುಣದೋಳ್ಪೆರಸು ನಿಷ್ಕಪಟಮುಂಪಿಡದೆ | ಚಂದದಿಂ ವ್ಯವಹರಿಸು ಕೂರ್ತು ಕೂಡಿದವರಂ ವಿಜಯಾಭಿರಾಮರೆನಿಸೂ || ಮಂದರಾಗವೆರೂಪುವಪೆದುದೆನೆ ಸಂಪ್ರೀತಿ | ಯಿಂದೊಂದಿಚಲಿಸದಿರು ಸನ್ಮಾರ್ಗವೃತ್ತಿಯೊಳಿ | ರೆಂದು ಚದುರಿಂಬುದ್ಧಿವೇಳ್ವ ತಾಯ್ಗಳ್ವೆರಸುಗಣಿಕೆಯರ್ಬಂದರೊಲವಿಂ || 69 ||

ಪರೆದಮುರಿದುಂಪಿಗುರುಳಿನಿಸಿನಿಸಳಿದ ತಿಲಕ | ವಿರದೆ ಕೆಂಪಡರ್ದ ಕಪೆ ಗಣ್ಣಿಗೆದ ಬೆಮರ್ವನಿಗ | ಳರರೆ ಕೊನೆವಲ್ಲಗಾಯಂಗೂಡಿ ತೊರೆದತುಟಿಬೇರೊಂದುರಸವನಾಂತಾ || ಸಿರಿವೊಗಂಕೂರುಗುರ ಹೊಯ್ಲ ತೋಳ್ಗಿಗುಪಳಿದ | ಗುರುಕುಚಂಪದುಳಿಸದ ತನುಪುದಿದ ಪುಳಕಾಳಿವೆರಸಿಗುರುವಂ ನೋಳ್ಪ ತ್ರವಕದಿಂ ಸುರತಾಂತಕಾಂತೆಯುರದೇಂಬಂದರೋ || 70 ||

ಬಾಡಿದೆಳೆವಳ್ಳಿ ಮೆಯ್ಬೆತ್ತಿದಕದಂಪು ರಸ | ವೋಡಿದಿಂದುಟಿ ಕೂರಗಿಪಿಂದುವದನಂ ಕೂಪೆ | ಕೂಡೊಗೆವ ಬಿಸುಸುಯ್ಬಳಲ್ಕೆ ಕಣ್ತಾಳ್ಕಂಕಿಸೆರ್ದ ದೃಷ್ಟ ವಚನವಿುನಿತುಂ|| ಕೂಡಿಬೇರೊಂದು ಸೊಗಸಂಸೂಸೆ ಪೂಸರ|ಲ್ಲಿ ದಾಗಿಶಿಶಿರೋಪಚಾರಕ್ಕೊಡಲ್ಲೆತ್ತು | ಪಾಡಳಿವವಿರಹಿಣಿಯರೇಂಬಂದರೋ ಶಾಂತಿಮುಯಿಸನೀಕ್ಷಿಸುವಾಸಯಿಂ || 71 ||

ಇಂತುನಡೆತಂದು ವೋಪನದೇಪನಂ ನೋಳ್ಪ | ಸಂತೋಷದಿಂದಾಪ್ರರಾಂಗನೆಯರುಪ್ಪರಿಗೆ | ಯಂ ತೊಳಪಭಿತ್ತಿಯಂ ಚಪ್ಪರವನೆಸೆವಮಾಳಿಗೆಗಳಂ ವೇದಿಕೆಗಳಂ || ಕಂತುವಂಕಣ್ಣಸ್ನೆಯಿಂ ಪುಟ್ಟಿಸುತ್ತಡರ್ದ | ತಂತವ್ಮೊಳೋರ್ವರೋರ್ವರ್ಗೆ ತೋರುತೆಬಾಯ | ತಿಂತೆಪರೆವಂತೆ ಪೊಗಳುತೆನೇಹದಿಂ ನೊಡುತಿಪ್ಪಾಗಳೇಂವರ್ಣಿಪೆಂ || 72 ||

ಅವರೊಳೋರ್ವಳ್ವನ್ನ ಸುತೆಗೆನುಪಮನಶೋಕೆ | ಶಿವಶಿವಾಜುಪೆಂಪಿಡದೆ ನೋಳ್ಪನರಯುವತಿ ಸುರ | ಯುವತಿಯು ಪೊಲಾಗೆವುತ್ತೋರ್ವಳಾತ್ಮಜೆಗೆತೋರಿಸೆ ಸುಸಂಗತಿಕಾಮನಂ || ನವಭಕ್ತಿರತಿಯುಂತುಟಾಗೆ ನಾನಾಸತೀ | ಸಿವಹವೀತೆರದೊಳೀಕ್ಷಿಸಬಂದು ಗಜವನಿಳಿ | ದು ವಿಲಾಸದಿಂ ಚಪ್ಪರಂಬೊಕ್ಕು ಸಕಲಶರಣರ್ಗೆರಗಿ ಕುಳ್ಳಿರಲೊಡಂ || 73 ||

ವಾರಮದುಸೋಮವಾರಂ ತಿಥಿಯುತಿಥಿಪೂಜೆ | ಚಾರುನಕ್ಷತ್ರ ವಾಸತಘನಕ್ಷತ್ರವಂ | ತಾರಮ್ಯ ಯೋಗವಿಾಶ್ವರ ಯೋಗಮುಜ್ವಲಿಪಕರಣಂ ಶಿವೋಪಕರಣಂ|| ಸಾರಲಗ್ನಂ ಶರಣ ಚರಣಲಗ್ನಂ ಚಂದ್ರ | ತಾರಾಬಲಂ ದೃಕ್ಕ್ರಿಯಾಬಲಮೆಸಿಸುವಸಮ | ವೀರ ಶೈವಾರ್ಯ್ಯರ್ಗೆ ಕಾಲಮೆಲ್ಲಂ ಶುಭದಕಾಲಮೆನುತಾಮಂತ್ರಿಪಂ || 74 ||

ಕನ್ಯೆಯುಂ ದುಷ್ಟಜನಕನ್ಯೆಯುಂ ಲೋಕೈಕ | ಮಾನ್ಯೆಯುಂ ಹೃತಪಿನತ್ತ ದೈನ್ಯೆಯುಂ ದುರಿತೌಘ | ಶೂನ್ಯೆಯುಂ ಗತಶಮನಸ್ಯನ್ಯೆಯುಂ ವರ್ಜಿತಪುನರ್ಜ್ಮಾ ತೃಕಾಸ್ತನ್ಯೆಯುಂ || ಅನ್ಯಾಯಮಂದದಂ ತಾಜರಿಪಪರಮ ಸಾ | ಜನ್ಯೆಯುಂ ತನ್ನ ಸುತೆಯಂತಂದು ಶರಣತತಿ | ಗನ್ಯೂನಭಕ್ತಿಯಿಂದೆರಗಿಸಿ ಶಿವಾಗಮವಿಧಾನ ಮುಜ್ವಲಿಸೆತಂದು || 75 ||

ಎನ್ನ ಭಕ್ತಿಪ್ರಾರ್ಥನೆಗಳ ಸುದ್ಧರಿವುದೆಲೆ | ಜನ್ನಿದಾನಾಸ್ಪದಮಹಾ ಪುರುಷಯೆನುತೆಸೆವ|ಕನ್ನೆಯನು ಮಾವರಾಭಂಗಿಕಲ್ಪೋಡಿಸಲೊಡಂ ನಮಸ್ಕೃ ತಿಪೂರ್ವಕಂ || ಚನ್ನೆಯರ್ತಂದಾರತಿಯನೆತ್ತಿಪರಸೆ ಪಾ | ದ್ಯೋನ್ನತ ಧ್ವನಿ ಯುಣ್ಮೆ ದಂಪತಿಗಳೇಳ್ಬ ಭಯ | ಬಿನ್ನಣೆಭಕ್ತರ್ಗೆ ನಮಿಸಿಯುವರಾಶೀರ್ವ ಚನಮಂ ಧರಿಸಿಸೋದಮಿಂ || 76 ||

ಮತ್ತೆಯುಂ ಭಕ್ತಾವಳಿಯ ಚರಣದೊಳೆಳ್ | ಮತ್ತಾತರಿರಸಿಮ್ಮ ಯಾಜ್ಞೆಯಂ ಸೆತ್ತಿಯೊಳ್ | ಕೊತ್ತಾಚರಿಸುವ ಭೃತ್ಯನನೆನ್ನ ನಾರಯ್ಯುತಿರಿಮೆಂ ದು ಬಿನ್ನವಿಸುತೆ || ಚಿತ್ರಾಭರಣವಸ್ತ್ರಮಾಲ್ಯಾನು ಲೇಪನಮ | ನಿತ್ತು ಪೊಡ ಮಟ್ಟು ಬೀಳ್ಕೊಂಡುಳಿದ ಜನರನುಚಿ | ತೋತ್ತುಂಗವೃತ್ತಿಯಿಂ ಮನ್ನಿಸಿಕಳಿಸಿ ಯುಂತಪುರಕೆಯ್ದಿ ಕಡುಗಾಡಿಯಿಂ || 77 ||

ಶ್ರೀಮಹಾದೇವಿಸಹಿತಂ ಶಿವಾವಸರಮಂ | ಕ್ಷೇಮದಿಂರಚಿಸಿ ಪರಮ ಪ್ರಸಾದಾಮೃತಮ | ನಾಮೋದದಿಂಸವಿದು ತಕ್ಷೇಪಕರ್ಪೂರತಾಂಬೂಲಮಂ ಗ್ರಹಿಸುತೇ|| ವಿಮಾತೊಗೌರಪದದಾಯಕರ ಭಕ್ತಿಯಿಂ | ದಾಮನೆಯೊಳಗ ಮನೆವಡೆದುಶರಣತತಿ ಯೊಳು | ದ್ದಾಮನೆನೆರಾಜಿಸುತೆ ನಿಜಮಾತ್ಯವೆರಸು ಶಿವ ಸೌಖ್ಯದಿಂದೊಪ್ಪುತ್ತಿರೆ || 78 ||

ರತಿಗೆರತಿಯಂಪುಟ್ಟಿಸುವರೂಪು ವಾಣಿಗು | ನ್ನತವಾಣಿಯಂ ಶಿಕ್ಷಿಸುವ ವಾಗ್ವಿಲಾಸ ವಿನ| ಸತಿಗೆತೇಜಮನೋಜೆಗೆಯ್ವತನುರುಚಿ ಸಿರಿಗೆ ಸಿರಿಯನಾಗಿಪ ಮೆಯ್ಸಿರಿ || ಕ್ಷಿತಿಗೆಧೃತಿಯಂತೋರ್ಪ್ಪ ಶಮತೆ ಗಂಗೆಗೆ | ಪವಿತ್ರತೆಯೊಳಿಸ ಮಿಗಿಲರುಂಧತಿಗೆ ಹೊಯ್ಕಯ್ಪತಿ | ವ್ರತದೊಳೆಂದುತ್ತಮರ್ನುತಿಪರೆರಡನೆಯ ಮಾದೇವಿಯಂ ಮಾದೇವಿಯುಂ || 79 ||

ಅಡಿಯೊಳತಿರಾಗಂ ನಡುವಿನೊಳ್ಕೃಶಾತ್ವವಾ | ಮುಡಿಯೊಳಗೆ ಕುಟಿಲಮಲರ್ಗಂಗಳೊಳ್ಚಂಚಲತೆ | ಕಡುಮೆರೆವಪೀವರ ಕುಚಂಗಳೊಳ್ಕರ್ಕಶತೆ ಪೊಡೆಯೊಳಪಗತಗೌರವಂ || ನಡೆಯೊಳಗೆಮಂದವೃತ್ತಿಯಿವಿರ್ದುವೃಂ ಮತ್ತೆ | ಮಡದಿಯರತಲೆವಣಿಯೆನಿಸಿದಳ್ಮಹಾದೇವಿ | ನುಡಿಯಲೇಂಜಗದನುಗ್ರಹಶೀಲರಲ್ಲಿರ್ದವೆಲ್ಲವುಂಸ್ತುತ್ಯಮಲ್ತೆ || 80 ||

ಇಂತುಸಚ್ಚರಿತಕ್ಕೆಮಾತೃಕೆಯೆನಿಸಿ ಮೆರೆವ | ಕಾಂತಾಶಿರೋಮಣಿ ಮಹಾದೇವಿಯರ್ ಸಹಿತ | ಮಂತಕಾರಿಯಪದಾಂಭೋಜಮಂ ಪರಮಾನುರಾಗದಿಂದರ್ಚಿಸುತ್ತೆ || ಸಂತತಂಶರಣಸಂತತಿಯ ನಾರಾಧಿಸು | ತ್ತಂ ತವರವಿನ್ಯಾನುಭವಲಪರಿಯಿಂ ನಿಜ | ಸ್ವಾಂತ ವಲರಲ್ವರಮುಹರ್ಷದಿಂದೊಪ್ಪುತಿರ್ದಂ ಪದ್ಮಣಾರ್ಯವರ್ಯಂ || 81 ||

ಮುದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದಭ್ರಮುಕರಂದಲೀಲಾ ಪ್ರ | ಮುದ ಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರಣೀತವಾಗೀ || ಸದಮಳಾಖಿಲಶಾಸ್ತ್ರ ಸಾರನೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣಕಥೆಯೊಳಿಂ | ತಿದು ಗುರುಪಿತೃವಿನೈಕ್ಯಮಂ ಗುರುವಿವಾಹಮಂ ಮೆರೆವಮೂರನೆಯಸಂಧೀ || 82 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶಕ ಕೆರೆಯಪದ್ಮಣಾರ್ಯನ ಲಸ|ಚ್ಛ್ರೀಶಿವಾದ್ವೈತ ಸಾಕಾರಸಿದ್ಧಾಂತ ಪ್ರತಿಷ್ಠಾಪನಾಚಾರ್ಯನಾ|| ಈಶುದ್ಧಚರಿತಮಂ ತಿಳಿಪಿದ ಗೋಪಿದ | ಗಾರ್ಶೆಯಿಂ ಕೇಳ್ದರ್ಗೆ ಭುಕ್ತಿಮುಕ್ತಿಗಳಂ ಮ | ಹಾ ಶುಭಂಗಳ ನಾಯುವಂಕೊಟ್ಟು ಗುರುರೂಪವಿಶ್ವನಾಥಂರಕ್ಷಿಪಂ || 83 ||

ಅಂತು ಸಂಧಿ 3 ಕ್ಕಂ ಪದ 213 ಕ್ಕಂ ಮಂಗಳಮಹಾ || ಶ್ರೀ ||

———:o:———

## 4 ನೆಯ ಸಂಧಿ.

### ಶ್ರೀ ಗುರುರೂಪ ವಿಶ್ವನಾಥಾಯನಮಃ.

ಪಲ್ಲ || ಧರಣೀಶನಿಂ ದಂಡನಾಥಪಟ್ಟಂಬಡೆದು | ಶರಣಪೂಜಾದಿಗಳಿ
ನಮರ್ದು ಸುತಲಾಭದಿಂ | ಪರಿತುಷ್ಟನಾಗಿ ಚರಮಂಪಳಿಯೆ ದೃಷ್ಟಮಂತ್ರೋಲಿ
ಪದ್ಮರಸನೆಸೆದಂ ||

ಪದಂ || ಮತ್ಸರರಹಿತ ಭಕ್ತವಾತ್ಸಲ್ಯವಿಭವ ಸಂ | ವಿತ್ಸಂಯಮೀಂದ್ರ
ಚಿತ್ತೋತ್ಸವೋದ್ಯೋಗ ವಿಚಿ | ಕಿತ್ಸಾಹೃದವಶ ವಿಲಸತ್ಸಟಾಮಂಡಲೋದ್ಯ
ತ್ಸಾಮಗಾನಪ್ರಿಯಾ || ಉತ್ಸೇಕಸಂಹರ ವಿಯತ್ಸರಿನ್ಮಸ್ತಕ ವಿ | ಪತ್ಸಮುದ್ರ
ವಹಿತ್ರ ವತ್ಸಂಸ್ಕೃತೀಂಧನ ವ | ರುತ್ಸಖ ಭವಾಮಯಚಿಕಿತ್ಸಕೋಪಮ
ಜಯಜಗತ್ಸೇವ್ಯ ವಿಶ್ವನಾಥಾ || 1 ||

ಈಪರಿಯೊಳತಿಭಕ್ತಿಯಿಂ ನಿಜತನೂಜೆಯ ಸು | ರೂಪರೂಪಂಗೆ ಕೊ
ಟ್ಟವರನೀಕ್ಷಿಸಿ ನಲಿವು | ತಾಪರಮಭಕ್ತಗಾರವ ದಣ್ಣಾಯಕನಿರುತೆ ಹರಿಸದಿಂ
ಕೆಲವುಬರಿಸಂ || ಓಪಮುಗಳಂ ನಿಮ್ಮವಂಗಿತ್ತೆನೆಂ ದಿಕ್ಸು | ಚಾಪನ್ನೈರಿಪ್ರಗು
ಹಿಗಣಕುಲಕೆ ಪೇಳ್ದ ಭಾ | ಪೋಪಚಯದಿಂದೆಯ್ದಿದನೊ ಪಂಬಬಗೆಯೊ
ಳಾಮಂತ್ರಿಶಿವಪುರಮನೆಯ್ದೀ || 2 ||

ಬಲ್ಲಾಳರಾಯನಾಸುಬ್ಬಿಯಂಕೇಳ್ದು ಮನ | ದಲ್ಲಿ ಚಿಂತಾಂಗನೆಯನಾ
ಲಿಂಗಿಸುತ್ತಾತ | ನೆಲ್ಲ ಬಂಧುಗಳನಾಪ್ತರನುಳ್ಳ ಜಗಮಂ ಬಿರಿಸಿಯುವ
ನನುಜತನುಜ || ಸಲ್ಲಲಿತಜಾಪಮಾತ್ಯ ಮುಖ್ಯರೊಳಗೋರ್ವನಂ | ಮುಲ್ಲಸಿತ
ರಾಜ್ಯಭಾರವನಾಂತು ನಡೆಯಿಸ | ಲ್ಸಲ್ಲ ಬಲ್ಲಾಳುಂಟೆಯೆನೆ ನೃಪತಿಯುಂ
ಟುಂಟು ಪೊಗಳ್ದನಾರವನಪೆಂಪಂ || 3 ||

ಆಗಾರಪಾವಮಾತ್ಯನಾತ್ಮಜಾಧವನಿಳಾ | ಭಾಗಪೇಳ್ದನಿಸಿದೆರಡನೆಯ
ಶಿವನವಿಳ ವೇ | ದಾಗಮಪುರಾಣಾದಿಗಳ ರಹಸ್ಯಾರ್ಥಮರಿದವನೀಶನೋಳ್
ಗಳ್ಗವಂ || ಶ್ರೀಗುರುಪರಂಪರಾಸಂಭವಂ ಸಕಲಸುಕ | ಲಾಗಾರನಮಲದಾಕ್ಷಿ
ಣ್ಯಲಲಿತಾಸ್ಯ ನೆ | ಲ್ಲಾ ಗುಣದೊಳೂಣೆಯುಂ ಬುಗದೆಸೆವನಾತನ ಪೆಸರ್ಪದ್ಮ
ರಸನೆಂಪೆಸೆ || 4 ||

ಕೇಳ್ದು ನೃಪನಾಗಳೊದವಿದ ಮಹಾಚಿಂತೆಯಂ | ತೂಳ್ದು ತನ್ನಾಪ್ತರಂ
ಕರೆದು ಹರ್ಷಾಂಬುಧಿಯೊಳ್ | ಕಾಳ್ದು ನೀವೀಮಿಸುನಿಯಂದಣಂಗೊಂಡೆಯ್ದಿ
ಪದ್ಮರಸಮಂತ್ರಿಪಂಗೆ || ಪೇಳ್ದು ಕಾರ್ಯಾಂತರಮನೊಡಗೊಂಡು ಬರ್ಪುದೆನೆ |
ತಾಳ್ದು ಶಿರದಿಂದಾನೃಪೋಕ್ತಿಗಳುಂ ಧೀಯುತ | ರ್ಬಾಳ್ವೆವಾವೆನುತ ವರಗೃಹಕೆ
ಯ್ದಿ ಪದ್ಮರಸರಂ ಕಂಡು ಚರಣಕೆರಗಿ || 5 ||

ಭಯಭಕ್ತಿಪೂರ್ವಕಂ ಬಿನ್ನಪಂಗೆಯ್ದರೆಲೆ | ನಯವಿದ ಮಹಾಪುರುಷ
ಚಿತ್ತವಿಸು ನಿನಗಿ ಹೋ | ದಯಭೋಗಮುಂ ಸ್ವರ್ಗಮುಂ ಮೋಕ್ಷಮುಂ
ಲಕ್ಷ್ಯಮೋ ಚಿತ್ಸುಖಾಸ್ವಾದಿಗೆ || ಪ್ರಿಯಮೆಮಾಯಿಯಾಯಸುಖ ವಿನಿದುನೀಂ
ಶೋಕರ | ಕ್ಷೆಯನಾಂತು ಜನಿಸಿದಕೃಪಾಳುವಂ ವಂಶದರೊಳ್ | ವ್ಮ್ರಯೆರಾಜ
ನೇಂಪ್ರೊರಗೆತನ್ನಿಮಿತ್ತಂ ಭೂಪನಿಷ್ಟಮಂ ಸಲಿಸೆನುತ್ತೆ || 6 ||

ಪರಮಪ್ರಧಾನಪಟ್ಟಕ್ಕೆ ಭಂಡಾರಕ್ಕೆ | ಪರಿವಾರಕಾಪ್ತವರ್ಗಕ್ಕಶ್ವಗಜ
ರಥೋ | ತ್ಕರದೊಡೆತನಕ್ಕೆ ಸರ್ವೋರ್ವರೆಯ ರಕ್ಷೆಗಾಲಿಕ್ಷೆ ಗುಳಿದೆಲ್ಲವಕ್ಕೆ ||
ಪರಿಕಿಸಲ್ಕೀವಲ್ಲದಾರುಂಟು ಚಿತ್ತವಿಸಿ | ಪರಿರಕ್ಷಣಂಗೆಯ್ವುದವನಿಪನನೆಂಬ
ಸ | ಭ್ಯರನುಡಿಯ ಸಾಲಿಸುತ್ತಿದು ಸುದ್ಗುರು ವಿನಾಜ್ಞೆಯಸುತದಂ ಮನ
ದೆಗೊಂಡೂ || 7 ||

ಅಂತೆಗೆಯ್ವೆನುತ್ತೆ ಸರ್ವಮಾಹೇಶ್ವರರ | ತಿಂತಿಣಿಗೆ ಮೆಯ್ಯಿಕ್ಕಿ ಬೀಳ್ಕೊಂ
ಡುಬಂದು ಬಹು | ಕಾಂತಿಮಯವಾಗಿ ತಳತಳಿಪಪೊನ್ನಂದಣಮನೇರಿ ತದ್ಬಲ
ಸಮೂಹಂ || ಸಂತೋಷದಿಂದೋಲಗಿಸಿಬರೆ ಸಕಲವಿಭವ | ದಿಂ ತನ್ನೃಪಾ
ಸ್ಥಾನಕೆಯ್ತಿರೆ ತದ್ಧರಾ | ಕಾಂತನೀವಾರ್ತೆಯಂ ಕೇಳ್ದು ಮೆಯ್ಯುರ್ವ್ವತಿ
ವಿರ್ವಂದುಪರಮಾನಂದದಿಂ || 8 ||

ಅನ್ಯೋನ್ಯಸಮುಚಿತವಿಧಾನದಿಂ ವೀಕ್ಷಿಸುತೆ | ಮಾನ್ಯನಂ ಬಳಿಕೆಭೂ
ಪೋತ್ತಮಂ ಪರಮಸೌ | ಜನ್ಯದಿಂದುಪಚರಿಸುತಾ ಸಭಾಮಧ್ಯಕ್ಕೆಕೊಂಡೊ
ಯ್ದುತನ್ನಬಲದಾ || ಅನ್ಯೂನಪೀಠದೊಳ್ಕುಳ್ಳಿರಿಸಿ ಸಕಲಧನ | ಧಾನ್ಯ ವಸ್ತ್ರಾ
ಭರಣ ರಾಜ್ಯಾಶ್ವಹಸ್ತಿರಥ | ಸೈನ್ಯಾದಿಮದ್ವಿಭವಮೆಲ್ಲವಂ ನಿನ್ನವಶವಾಂ
ನಿನ್ನನುರೆನಂಬಿದೆಂ || 9 ||

ಇಂತಿನೆಲ್ಲವನೆಯ್ದೆ ಪಾಲಿಸುತೆ ಮತ್ಕಾರ್ಯ | ಮಂ ತಡೆಯದುನ್ನತಂ
ಗೆಯ್ಯುತೆ ಚತುಸ್ಸಮು|ದ್ರಾಂತವಾಗೆನಗೆ ಕೀರ್ತಿಪ್ರತಾಪಂಗಳಂ ನೆಗಳುತೀಘ
ನಘಾರವಮಂ || ಅಂತೆಮ್ಮನುಂಟುಮಾಡೆಂದು ವಿನಯೋಕ್ತಿಯಿಂ | ದಂ ತಾಮ
ಪಾತ್ಮಂಗೆ ಬಲ್ಲಾಳಭೂವಿಪನ | ನಂತ ವಿಧ್ಯುಕ್ತವಿಭವಂಗಳಿಂ ದಂಡೇಶಪಟ್ಟ
ಮಂ ಕಟ್ಟಿಮುದದಿಂ || 10 ||

ಚಾರುವಸ್ತ್ರಾಭರಣಲೇಪನಾದಿಗಳ ನೊ | ಲ್ವಾರಾಧನಂಗೆಯ್ದು ಸಂಪ್ರೀ
ತಿಕಯ್ಮೆರೆ | ಗೌರಪದಣಾಯಕರ ಸಕಲಸಂಪತ್ಸಂತತಿಯನಂತಿರೊಪ್ಪುಗೊ
ಟ್ಟೊ || ಘೋರನವರಿವರೆನ್ನದೆಲ್ಲರಂ ಕಾಣ್ಕೆಗೆ | ಯ್ವಾರೀತಿಯಂ ನೆಗಳ್ದು
ಬಳಿಕೆಶಿವನಮಯೋಪ | ಕಾರಿಯಂ ಪದ್ಮರಸರಂ ನೃಪತಿಗೃಹಕೆಬೀಳ್ಕೊಡು
ವಲ್ಲಿ ನುಡಿದರೊಂದಂ || 11 ||

ಕೇಳೆಲೆನೃಪಾಗ್ರಣಿಯೆ ನೀನಾಗಳೆಮ್ಮ ನೊ | ಲ್ದಾಳೋಕನಂಗೆಯ್ದು
ಬಿನ್ನಂಬದೆನೆನು | ತ್ತಾಳಾಪಿಸಿದೆ ಚತುರ್ದಶಭುವನಮಂ ರಕ್ಷಿಸುವಭಕ್ತನಾದ
ಚಂದ್ರ || ಮೌಳಿಗಾಹಾನಿನ್ನ ನೋಪುದಿಂದೊಂದರಿದೆ | ಪೇಳಲೇನೀಶಭಕ್ತರ
ಪೆಶೆಗಕೃತ್ಯಮಂ | ತಾಳದಿರುಸಪ್ತಾರ್ಣವಂಬರಂ ನಿನ್ನಜಸವೆಣ್ಣೆನೇಂತಡೆವರೊ
ಳರೇ || 12 ||

ಎಂದುಸಿರ್ದದಂಡಾಧಿನಾಥನುಚಿತೋಕ್ತಿಗೆ ಮ | ನಂದಣೆದು ಸಂತಸಂ
ಬಟ್ಟು ಭದ್ರೇಭಮಂ | ತಂದು ಪಿಡಿಯಲ್ಕೇರಿಸುತ್ತವಿಲವೈಭವಂ ಬೆರಸುಭೂ
ಷಂಕಳುಹಿಸೆ || ಹೆಂದವಾನಂದದಿಂಬಂದು ತಮ್ಮರಮನೆಯ | ಮುಂದೆ ತದ್ಗಂಧ
ಸಿಂಧುರವನಿಳಿದೊಡವಂದ | ಮಂದಿಯಂಬೀಳ್ಕೊಟ್ಟು ತನ್ನಂತವುರವನೆಯ್ದಿದ
ನವನಿಪುಳಕಿಸುತಿರೆ || 13 ||

ಮೇಲವನಭಕ್ತ್ಯತಿಶಯಂ ಬೇಳ್ಪೊಡೊಂದೊಂದು | ಸಾಲಗುಳ್ಳೆಮ್ಮಂದಿ
ಗರಸವಣೆಬಳಿಕೆ ಬ | ಹ್ವಾಲಾಪಮೇಂ ನಾಲಗಿಶ್ಛಾಸಿರಮನುಳ್ಳ ಬಾಸುಗಿಗ
ಳವೆ ಶಿವಶಿವಾ || ಕಾಲಕಂಠನೆಬಲ್ಲನನಿತರೋಳ್ವಿವಭಕ್ತ | ಜಾಲಮಂ ಮುದದೆ
ಬಿಜಯಂಗೆಯ್ಸಿಮೆಯ್ಯಿಕ್ಕಿ | ಲೀಲೆಯಿಂದಡಿದೊಳೆದು ಪಾದಾಂಬುವಂತಳೆದ್ರು
ನಿಜಗೃಹಾಂತರಕೆತಂದು || 14 ||

ಮಂಜುಳವೆನಿಸುವುನ್ನತಾಸನದಮೇಲೆ ಮೃ | ತ್ಯುಂಜಯನಶರಣರಂ ಮೂರ್ತಿಗೊಳಿಸುತ್ತೆ ಸಾ | ಮಂಜಸ್ಯಮೆನೆ ಶಿವಾವಸರಮಂ ಸಲಿಸಿನವಘೃತಮುತ್ತಮಭಕ್ಷ್ಯಮಂ || ರಂಜಿಸುವಶಾಕಪಾಕಾದಿ ದಿವ್ಯಾನ್ನಂಗ | ಳಂ ಜಯಜಯಸ್ವಾಮಿಯವಧಾರೆನುತೆ ಭಕ್ತಿ | ಯಿಂ ಜಂಗಮುಪ್ರಾಣಿಬಡಿಸಿ ಸಾಷ್ಟಾಂಗದಿಂನಮಿಸೆ ತದ್ಭಕ್ತನಿಕರಂ || 15 |

ಪರಸಿಪರಮೇಶಾರ್ಪಿತಮನೆಸಗಿಷಡ್ರಸಾ | ದ್ಯುರುತರಾನ್ನವನರ್ಪಿತಾವಧಾನಂತಪ್ಪ | ದಿರವಿನಿಂಲಿಂಗಭೋಗೋಪಭೋಗಂಗೆಯ್ದುಕರ್ಪೂರತಾಂಬೂಲಮಂ || ಧರಿಸಿಶೈವಾಂಬುಧಿಯತೆರೆಯಂತೆಸಂದಣಿಪ | ಹರಗಣಂಗಳ ತಿಂತಿಣಿಯನೀಕ್ಷಿಸುತ್ತೆಪ | ದ್ಮರಸರಾನಂದಿತಾಂತಃಕರಣರಾಗಿರೋಮಾಂಚಕಂಚುಕಿತಾಂಗದಿಂ || 16 ||

ಕಾಮುನಿಯರಂ ಹೇಮನಿವಹಮಂ ಭೂಮಿಗಳ | ನೇಮಾತ್ಕೊದಿವ್ಯಾಂಬರಂಗಳಂ ಭೂಷಣ | ಸ್ತೋಮಮುಮನಾಮೋದ ಕುಲಮನುದ್ಯದ್ವಾಹನಾದ್ಯಖಿಳ ವಸ್ತುಚಯಮಂ || ಆಮಲಹರನಭಕ್ತ ತತಿಗಿತ್ತುನುತಿಸುತು | ದ್ದಾಮರಿರನಿಮ್ಮ ಬಾಗಿಲ್ಗಾಪಿನಾಕ್ಷಿಮ್ಮ | ಕೋಮಲಾಂಘ್ರಿಯ ಕೆಪ್ಪದಳೆವವಂನಿಮ್ಮ ಭೃತ್ಯರಭೃತ್ಯ ತತಿಯಭೃತ್ಯಂ || 17 ||

ಎನ್ನನೀಮಾಳ್ಕೆಯಿಂನಿಚ್ಚಮುಂ ಪೊರೆವುದೆಲೆ|ಮನ್ನಾಥರಿರನಿಮ್ಮ ಸಮಯಮಂ ಪಡೆಯಲ್ಕೆ | ದೇಂ ನಾಡೆಶಕ್ತರೇಪರ್ಯಜೇಂದ್ರಾದ್ಯ ರಾನೇಂಸಭಾಗ್ಯನೊಯೆನುತ್ತೆ || ಸನ್ನುತಿಗಳಿಂತುಷ್ಟಿವಡಿಸಿಯಾಭಕ್ತರ್ಗೆ | ತನ್ನ ಭಾಷೆಯನುಸಿದ್ದನೆಂತೆನಲ್ ಶಿವಸಮಯ | ಮಂಸಿಲಿಸುವುದು ಭಾಷೆಶರಣರಿಚ್ಛೆಯಿಸಿದುದನಿಲ್ಲೆನ್ನದೀವಭಾಷೆ || 18 ||

ಪರವಾದಿಗಳನೆರಗಿಸುವಭಾಷೆಶಿವತಂತ್ರ | ದೊರೆಯನೂರ್ಜಿತಮನಾಗಿಪಭಾಷೆಶಿವಭಕ್ತ | ವರರನಾರಾಧಿಸುವ ಭಾಷೆಶಿವಪೂಜೆಯಂ ಸಾಂಗದಿಂ ರಚಿಪಭಾಷೆ || ಪರನಾರಿಗುರುನಾರಿಯೆಂದು ಚರಿಸುವಭಾಷೆ | ಯಿರದಾರ್ತರಂಪೋಷಿಸುವ ಭಾಷೆಮಾಹೇಶ್ವ | ರರಕುಲಮನಾರಯ್ವುದದು ಭಾಷೆಶಿವನಿಂದೆಯಂಕೇಳದಚಲಭಾಷೆ || 19 ||

ಪಲವೇಂಶಿವಾನಪ್ಪಿರ್ತಂ ಗೊಳ್ಳದದುಭಾಷೆ | ಯೊಲವಿನಿಂ ಭವಿಪಾಕ ಮಂ ಬೆರಸದತಿಭಾಷೆ | ಗೆಲವನಿತರಗ್ಗಿರ್ಯದೆಸೆವಸಮಭಾಷೆಭಕ್ತರ್ಗ್ಗೆರ್ಗೆಲವೀವಭಾಷೆ || ಛಲದಿಂವ್ರತಭ್ರಷ್ಟರುಮ ನೀಕ್ಷಿಸದಭಾಷೆ | ನಲಿದುಶಿವಭಕ್ತರ್ಥಂ ಶಿವನೆಂದರಿವಭಾಷೆ | ಸಲೆಶಿವಾದ್ವೈತಸಾಕಾರಸಿದ್ಧಾಂತ ಪ್ರತಿಷ್ಠೆಯಂನೆಗಳ್ವ ಭಾಷೆ ||20||

ನರರನಾಶ್ರೈಸದುತ್ಕಟಭಾಷೆ ಯನ್ಯತಮಂ | ವಿರಚಿಸದಘನಭಾಷೆ ಕರಣೇಂದ್ರಿಯಾದಿಗಳ | ಪರಿದಾಟಮಂ ಬಿಡಿಸಿಲಿಂಗಾಂಗಸಂಯೋಗ ದೋಳ್ನಲಿಸುವಸಮಭಾಷೆ || ಪರಿಕಿಸಲ್ಕೀಭಾಷೆಯೆಲ್ಲವಂ ನಿಮ್ಮಂಘ್ರಿ | ಸರಸಿಜಸಹಾಯದಿಂ ಪೊತ್ತುನಡೆಸುವೆನೆಂದು| ಶರಣಸಭೆಯೋಳ್ಧರಿಸಿ ತದ್ಗಣಶ್ರೇಣಿಗವ್ಯಾಂಗದಿಂ ನಮಿಸಿಕಳಿಪಿ ||21||

ಕಾಲಾನುಕೂಲವಾದೀಶ ಪೂಜೆಯನೆಸಗಿ | ಯಾಲೋಕಪಾಲನಾಂಗೀಕೃತಾಂಗಂಪ್ರಸಾ | ದಾಲೋಲನಾಗಿಮೇಣ್ ತನ್ನರಮನೆಯನಿರದೆ ಪೊರಮಟ್ಟುಸದ್ವಿಭವದಿಂ || ಭೂಲೋಲನೋಲಗಕ್ಕೆಯ್ದಿ ಬಲ್ಲಾಳನು | ತ್ತಾಳದಕ್ಷಿಣಪೀಠದೊಳ್ಮೂರ್ತಿಗೊಂಡುಪೇ | ರೋಲಗಂಗೊಟ್ಟುಬಳಿಕೆಲ್ಲರಂ ಬೀಳ್ಕೊಳಿಸಿ ಪರಿಮಿತಂಗೆಯ್ದುಮೇಲೆ ||22||

ನರಪನಿಂಬೀಳ್ಕೊಂಡು ಬಂದುಮುಂದೊಪ್ಪಿಪ್ಪರ್ | ಕರಣಶಾಲೆಯನೆಯ್ದಿ ಕರಣಿಕಾಕೃತಿಯಪರಿ | ಹರದೇವನಾದಿಯಾಗೆಸೆವ ಪದಿನಾಱುಕರಣದವರಂ ಬರಿಸಿನಯದಿಂ || ನಿರುತವಾದಾಯಮೇಂ ವೆಚ್ಚಮೇಂಸಂದುದೇಂ | ಪರಿಕಿಸಲ್ನಿಂದುದೇಂ ಸಂವರಣಮೇಂದಿನಕೆ|ಱರಿಪುದೇನೆಂದಿಂತೊಳಗುಮುಟ್ಟಿಕೇಳ್ದು ಪಿಂದಾದಲೆಕ್ಕದವಿವರಮಂ ||23||

ಅಂತವರವೋಗಾಗುಗಳ ನೊರೆದೊರೆದು ಸುಸೂ | ತ್ರಂ ತಪ್ಪದಂತೆಸೇಱುವೆ ಗಿಕ್ಕಿಬರೆಯಿಸಿ ಸ | ಮಂತು ಭಂಡಾರಮಂ ಬೊಕ್ಕಸಮನುಗ್ರಾಣಮಂ ಕಣಜಕಾಮವಟ್ಟಾ || ಮುಂತಾದವಂದಂತಿವಾಜಿಗಳ ಭೋಗಮಂ | ಸಂತತನಿಯೋಗಮಂ ಪೊರವೆಚ್ಚಮೊಳವೆಚ್ಚ | ಮಂತೆ ಸುಂಕಂತಳಾಱಿಕೆ ಚರಾದಾಯಮೆಂಬಿಂತೆಲ್ಲವಂಪರಿಕಿಸೀ || 24 ||

ಅಲ್ಲಿಗಲ್ಲಿಗೆತಕ್ಕತಕ್ಕಬಗೆಬಗೆಗಳೊಳ|ವೆಲ್ಲರ್ಕೆ ಕಟ್ಟುಮೆಟ್ಟಂಮಾಡಿ ರಾಣುವೆಯೊ | ಳುಲ್ಲಸಿತಜನಪದದೊಳೆಲ್ಲಿಯುಂ ತನ್ನಾಣೆಘೋಷಣೆಮೆರೆಯೆ ವರ್ತಿಸೀ || ಬಲ್ಲಾಳನೃಪತಿಗೆ ಬಹುದ್ರವ್ಯಮಂ ಯಶಮ | ನುಲ್ಲಾಸಮಂ ಪ್ರತಿಪಮನೊಂದಿಸುತ್ತವನ | ಬುಲ್ಲವಿಪಬಲದ ಭಾಗದದೇವರೆನಿಸಿ ಬಲ್ಪಸವೆತ್ತುಘನಶಕ್ತಿಯಿಂ || 25 ||

ಅನ್ನೆಯಮಿನಿಸುಪುಗದವೋಲ್ಭೂಪವೃತ್ತಿಯಿಂ | ತಾನ್ನಡಸುತುಂ ಗತಚ್ಛದ್ಮಂಸುಗುಣ ಸದ್ಮ | ನುನ್ನತೋತ್ಫುಲ್ಲಹೃತ್ಪದ್ಮಂ ಸಕಲಶರಣಮುಖಪದ್ಮಪದ್ಮಮಿತ್ರಂ || ಸನ್ನುತಾಖಿಳಸಚಿವ ಮಸ್ತಕಪರಿನ್ಯಸ್ತ | ಪನ್ನಳಿನ ಪದ್ಮಣಾಮಾತ್ಯಶೇಖರನಿಂತ | ದೇಂ ನಟಿಸಿದನೊ ಶಿವನಿಮಿತ್ತಮೊಂದಧಿಕಾರಮಂ ಬುಧರ್ಭಾಪೆಂದೆನೇ || 26 ||

ಒರೆಯಲೇನೀಸರಿಯೊಳಾರಾಜ ಕಾರ್ಯಮಂ | ಪರಿಪೂರ್ತಿಗೆಯ್ಯುತೆ ಸಮಸ್ತಮಾಹೇಶ್ವರರ | ಚರಣಾಬ್ಜಮಂ ಭಾವಶುದ್ಧಿಯಿಂಸೇವಿಸುತೆ ವೇದೋಕ್ತವೀರಶೈವ || ಸರಣಿಯಂದುಷ್ಕೃತ್ಯ ಮೆಂಬಗಿಡುಬಳ್ಳಿ ಪು | ಲ್ಮರಪೊದರು ಕಲ್ಮುಳ್ಳಿದಡುಗಳೊಂದದ ವೋಲ್ ಸು | ಸರಮನಾಗಿಸುತೆ ಶರಣಾನುಭವಸೌಖ್ಯದಿಂದೊಪ್ಪುತಿರಲೇಂವಣ್ಣಿಪೆಂ || 27 ||

ಮೃಡಭಕ್ತರಾನಂದವಂ ಕುರಿಸುವಂತೆ ಗಡ | ಬಡಿಪಪರವಾದಿಗಳಸಂಭ್ರಮಾಟವಿಗುಣ್ಮ | ವಡವಗಿಚ್ಚಿನಬೀಜದಂತೆ ಶಿವಶಿವಮಹಾದೇವಿಯರ ಗರ್ಭದಲ್ಲೀ || ಬಿಡುಬಿಡಂತಿಂತೆಂದು ಪೊಡರ್ವನುಡಿಗಡಣಗಳ | ನೆಡೆವಾತದೇಂಷಟ್ಸ್ಥಲಸ್ಥಾಪನಾರ್ಥ ಮಾಕಡುಮೆಯ್ಮೆವಡೆದ ಷಣ್ಮುಖನ | ಖಿಳಶಕ್ತಿಬಂದೊಳಪೊಕ್ಕು ಶೋಭಿಸುತಿರೆ ||28||

ನಡೆಮೆಲ್ಲನಾದುದು ವಳಿಯುಡಂಗಿದುವು ಬಾಸೆ | ಕಡುಪಾಯ್ತುಸಡು ಪೆರ್ಚಿದುದು ನಾಭಿಗುಣ್ಪಾಯ್ತು | ಪೊಡೆಪೊಣ್ಮಿದುದು ಕುಚಾಗ್ರಂನೀಲಮಾದುದೆಳೆವಳ್ಳಿಮೆಯ್ಬೆಳ್ಪಡರ್ದುದೂ ||ಕುಡಿತೆಗಣ್ಬೆಳಲಕಲ್ತುವುಕವಲ್ತು ವುಬಳ | ಲ್ಕುಡಿಯಸವಿರಾಗುಳಿಕೆ ನಿದ್ರೆಯಬಸಿಕೆಯಶನ| ದೆಡೆಯೊಳಪ್ರಿಯ ಮೊದವಿಮವುಗರ್ಭಚಿಹ್ನಮೆಸೆದುದು ಲತಾತನ್ವಿಗಂದೂ || 29 ||

ಇಂತೆಸೆವ ಕೋಮಲೆಯ ಗರ್ಭದೊಳ್ನವಮಾಸ | ಮಂತಿಸುಳಿಜೋಗಸೊಗದಿಂಕಳಿದು ಮೇಲೆಗುರು | ವಂತಡೆಯದೀಕ್ಷಿಸುವೆನೆಂಬಳ್ಕರಿಂ ದೊಗೆದನೋ ಯೆಂಬವಾಳ್ಕೆಯಿಂದೇ || ಎಂತೆಂಬೆನಮೃತಲತೆಯೊಳ್ ದಿವ್ಯಫಲ ಮುದಯಿ | ಪಂತೆ ಪಾಳ್ಗಡಲೊಳಗೆ ಕಲ್ಪಭೂಜಂಪುಟ್ಟುವಂತೆ ಮಾದೇವಿಯುದರದೊಳೊಗೆದನಮ್ಮಮ್ಮ ಸುಕುಮಾರ ಕುಲಶೇಖರಂ|| 30||

ಉದಯಸಮಯ ದೊಳಸಮಶಿಶುಗನಘಲಿಂಗಮಂ | ಸದಮಲಾತ್ಮಂ ಧರಿಸಿಸಕಲ ಮಾಹೇಶ್ವರರ | ಪದಸರೋಜಕ್ಷಾಲನೋದಕದೆ ಮೆಯ್ದೊಳೆದುಳಿವಮಂತ್ರಮಂ ಸ್ಮರಿಸುತೇ || ಪದೆದುಭಸಿತವನಿಟ್ಟುಪಣೆಗೆ ಸರ್ವಾಂಗಕ್ಕೆ | ಪದುಳದಿಂತಳಿದು ಸುಕುಮಾರಪದ್ಮರಸರೆಂ | ಬಿದುಪೂರ್ವಮಂ ಸೂಚಿಸುತಪರಮಂಪೇಳ್ವುದೆಂದು ತನ್ನಾಮವಿಟ್ಟೋ || 31 ||

ಸಕಲವಾದ್ಯಂಗಳಾಘೋಷಿಸಲ್ ಶಿವಭಕ್ತ | ನಿಕರಮಂತಣೆವೊಲಾರಾಧನಂಗೆಯ್ದುಸ | ರ್ವಕುಮಾರತಿಲಕ ಸುಕುಮಾರಪದ್ಮರಸರಂ ತದ್ಭಕ್ತಸಂದೋಹಕೆ || ಪ್ರಕಟಿತ ಪರಮಭಕ್ತಿಯಿಂದೆ ತಂದೆರಗಿಸಿಬ | ಳಿಕಮವರ ಪರಕೆಯಂ ಕೊಡಿಸಿಶಿವಶೇಷವಿ | ತ್ರಕುಟಿಲಾತ್ಮರ್ದಂಪತಿಗಳೋವುತಿರೆ ಬಳೆವುತಿರ್ದ್ದನದನೇವಣ್ಣಿಪೆಂ || 32 ||

ಮೃಡದೂಷಕರ ಬಾಯ್ಗಳಂ ಮುದ್ರಿಸುವತಳ್ಪ | ನುಡಿಯೊಡನೆ ನುಡಿಗಲ್ತುಮಾಯಾಪ್ರಪಂಚಮಂ | ಕೆಡೆಮೆಟ್ಟಿನಡೆವನಡೆಯೊಡನೆ ನಡೆಗಲ್ತು ಶಶಿಧರಯೋಗಸೌಖ್ಯಸುಧೆಯಂ || ತಡೆಯದುಣ್ಬುದರೊಡನುಣಲ್ಕಲ್ತು ಶಿವಭಕ್ತ | ರಡಿಯನರ್ಚಿಪಬುದ್ಧಿಯೊಡನ ಮಮಬುದ್ಧಿಗ | ಲ್ತೆಡಚಜವಕಾವರಂ ಕೆಡಿಪಾಟದೊಡನಾಟಮಂಕಲ್ತುದೇಂಮೆರೆದನೋ || 33 ||

ಒದವಿದಚತುಷ್ಷಷ್ಟಿಕಲೆಗಳೊಳಗಣತಿಳಿವು | ಪದಿನೆಂಟುತೆರದ ವಿದ್ಯೆಗಳ ಕಣ್ದೆರವು ಸ | ಕ್ಕದ ಮಮರ್ದಕನ್ನಡಂಪಾಗದಂ ಮಾಗಧೀಯಂ ಸೌರಸೇನಿದೇಶೀ || ವಿದಿತಪೈಶಾಚಿಕವಪಭ್ರಂಶಚೂಳಿಕಾ | ಭ್ಯುದಿತಾಷ್ಟಭಾಷಾಕವಿತ್ವಮುಂ ಶಿವರಹ | ಸ್ಯದಹೃದಯಮುಂ ಮಹಾಸ್ಫುಟವಾದವಾಶಿವ ಕುಮಾರಂಗದೇಂಜೊದ್ಯಮೇ || 34 ||

ವರಪುಣ್ಯಜನವಿರುದ್ಧಂಸುರಾಂಗೀಕೃತಾ | ಚರಣಂಬೃಹಸ್ಪತಿರಜೋಗು ಣವಿಕಾರಿಯುರು | ತರಜಡಜಜನ್ಮನಾಬ್ರಹ್ಮಂ ವಿಷ್ಣಾನ್ವಿತಮುಖಿಂ ಜಗತ್ಪ್ರಾ ಣಾಶನಂ || ಉರಗಪತಿಯಂದಿವರನುಳಿದು ಸುಕುಮಾರಪದ್ಮರಸರಾಸ್ಯಾಬ್ಜ ಮಂವಾಣಿಭಯಭಕ್ತಿಯಿಂ | ಪರಿದೊಂದಿಶಿವಮಂತ್ರಮುಜ್ವಲಿಸುವೆಡೆ ಯೆಂದು ಬಿಡಳದೇಂಕೃತಕೃತ್ಯೆಯೋ || 35 ||

ಶಾಂತಿಯೇಸಾಕಾರಮಾದುದೋ ಶೈವತೇ | ಜಂತಾನೆನಪೆಗಲ್ತುದೋ ಶಿವಶಿವಾ ಪೊಗಳ್ವೆ | ನೆಂತೊ ಮೂಲಪ್ರಣವವೇ ಸೊಗಸುವಾತಸಾಡಲ್ತೊಡಗಿ ತ್ತೋ ರುದ್ರನಾ || ಅಂತಃಕರಣಶಕ್ತಿಮೆಯ್ವೆತ್ತುಬಹುಶಾಸ್ತ್ರ | ಮಂತಿಳಿಯಲು ದ್ಯೋಗಿಸಿತೊ ಶರಣರಾನಂದ | ಸಂತತಿಯ ಬಾಳ್ಕೆಮೊದಲೊ ಎನಿಸಿಸುಕುಮಾರ ಪದ್ಮರಸಾಂಕನೊಪ್ಪುತ್ತಿರೆ || 36 ||

ಈ ಪರಿಯೊಳೆಸೆವ ಸುಕುಮಾರಕನ ವಿಮಲಚಿ | ದ್ವ್ಯಾಪಾರಮಂಭ ಕ್ತಿಕಾಂತಾವಶೀಕೃತಕ | ಲಾಪರಿಮಿಲಚ್ಛಿವಾಪ್ತಿರ್ತಯೌವನೋದಯಮನಾ ಜ್ವಲ್ಯಮಹಿತಾಂಗಮಂ || ಆಪದ್ಮರಾಜನೀಕ್ಷಿಸಿ ಮುದಂಬೆತ್ತುಸಮ | ರೂಪ ಸಮವಿಭವಸಮಶೀಲ ಸಮಗುಣಗಣೋ | ದ್ದೀಪಿತಾಂಗಿಯನೊರ್ವಳಂ ಸುತಂ ಗುದ್ವಾಹಮಂಮಾಡಿಸುಖಮಿರುತ್ತೇ || 37 ||

ದಂಡನಾಯಕ ತಿಲಕನೊಂದು ದಿನದೊಳ್ಮಹೀ | ಮಂಡಲೇಶನ ಸಭೆ ಯನೆಯ್ದಿಕುಳ್ಳಿರ್ದುಮುಂ | ಕೊಂಡಖಿಲಕಾರ್ಯಮಂ ಸಾಗಿಸುತೆ ಕೆಲವು ಪೊತ್ತಿ ರ್ದುಮೇಲರಸುವೆರಸು || ಚಂಡಮತಿರಾಜವೀಧಿಗೆಬಂದು ಪೊಸತೇಜ | ವಿಂಡ ನೀಕ್ಷಿಸುವಲ್ಲಿ ತಮ್ಮರಮನೆಗೆ ನಾಗ | ಕುಂಡಲನಭಕ್ತರ್ವಿಲಾಸದಿಂದಾ ರೋ ಗಣೆಗೆ ಗಮಿಸುತಿರೆ ಕಾಣುತೆ || 38 ||

ಪರಿದೆಯ್ದಿಸಾಷ್ಟಾಂಗದಿಂನಮಿಸಿಪದ್ಮರಸ | ರಿರದವರೊಡನೆ ಪೋಗು ತಿರಲಿತ್ತಭೂಪತಿಗೆ | ಪರವಾದಿಗಳ್ನುಡಿದರೀಕ್ಷಿಸಿದಿರೇ ದೇವನಿಂಮಮಂತ್ರಿಯ ಚರಿತಮಂ|| ಒರೆಯುಲೇಂಕಟ್ಟೊಡೆಯನಾದ ನಿನ್ನುಮನಿನಿಸು|ಪರಿಕಿಸದೆ ನಿರ್ಭೀತಿ ಯಿಂಪೋಗಿ ಕಾಲ್ಗೆರಗಿ | ವಿರಚಿಸುತ್ತಿರ್ದಪನದಂತಿರ್ಕೆ ಮೇಣ್ಪೋಗುವೀಜಂ ಗಮಾಳಿಯಲ್ಲೀ || 39 ||

ಕುಲಹೀನನೋರ್ವನಂಮೆಯ್ಕೆಟ್ಟುಕೊಳ್ಪಟ್ಟ | ದಲೆವೆತ್ತುಬಗುತಿಕೆಯ ನಾಂತಿರ್ಪನಾತನಂ | ನಿಲಯಕ್ಕೆತಂದು ಕಾಲ್ದೊಳೆದು ತಜ್ಜಲವೀಂಟಿಯುಣಲಿಕ್ಕಿ ಮಿಕ್ಕುದುಂಡು || ಪೊಲೆಗಲಸಿದಂ ಬ್ರಹ್ಮವಿನ್ನೆಲ್ಲಿತೆನೆನೃಪಂ | ಕಲುಷಾತ್ಮನಾಗಿಪದ್ಮರಸರಂಕರೆಯಿಸು | ತ್ತೆಲೆಲೆನೀವಿಂತಂತ್ಯಜನುಮಾದಮೆಯ್ಕೆಟ್ಟನೋಳ್ಪಿರೆವುದುಚಿತವೆಯೆಸೇ || 40 ||

ಶಿವಶಿವಾಯೆನುತೆರಡುಕಯ್ಗಳಂ ನಿಜಕರ್ಣ | ವಿವರಕೊಂದಿಸುತೀಮಹಾಪಾತಕರ ಘೋರ | ಭವಜಲಧಿಮಗ್ನರ ವಿವೇಕನಗ್ನರಧರ್ಮಭಗ್ನರನರಕಲಗ್ನರ || ಕುವಚೋರಚನೆಗಿಂತು ನೀಂಭ್ರಾಂತನಪ್ಪರೇ | ಅವನೀಶಭಾವಿಸುವೊಡೆಸೆವ ವೇದಾಂತ್ಯಜಂ | ಸುವಿವೇಕಿಗಳ ನಿಶ್ಚಲಮನೋಂತ್ಯಜಂಸಂವಿದಂತ್ಯಜಂತಾನಲ್ಲದೆ || 41 ||

ತಿಳಿವೊಡಾಯಯ್ಯನಂತ್ಯಜನಲ್ತದೆಂತೆನೆ | ಲ್ಕುಳನಗಗ್ರಾಮಾದಿಗಳಿನಿರದೆಬಂದನೀ | ರ್ಗಳವೆಯ್ದೆಗಂಗೆಯಂಪೊಕ್ಕು ತೀರ್ಥಾಂಬುವೆನಿಸವೆಕಾಗೆಗಳ್ಮೇರುವಂ || ಬಳಿಕೊಂದಿಪೊಸಮಿಸುನಿವಣ್ಣದಿಂದೆಸೆಯವೆ ಸ | ಕಲವಿಧದಕಾಷ್ಠಂಗಳಗ್ನಿಯಂ ಸೋಂಕಿಯು | ಜ್ವಳಭಸ್ಮವಾಗವೇ ಆ ೯ನ ರಕ್ಕೆಗುರುವಂ ಮುಟ್ಟಿಗುರುವಾಗರೇ || 42 ||

ಉದ್ಧತಕುಲಜರಿವರಧಮಕುಲಜರಿವರೆಂಬ | ಬುದ್ಧಿಯಂಬಿಡದೆಂತೆನಲ್ತಾಮ್ರಮೆಯ್ದೆರಸ | ಸಿದ್ಧಿಯಿಂಹೇಮವಾದುದು ಮತ್ತೆ ತಾಮ್ರವೇನಪ್ಪುದೇ ಕಾಯ್ದುಬೆಣ್ಣೆ || ಶುದ್ಧಘೃತಮಾಗಿ ಮೇಣದು ಬೆಣ್ಣೆಯಪ್ಪುದೆಸ | ಮೃದ್ಧಶುಕ್ತಿಯನೆಯ್ದಿಮುತ್ತಾದನೀರ್ಮಗುಳೆ | ಬದ್ಧಜಲವಪ್ಪುದೇ ಅಂತೆಶಿವದೀಕ್ಷಿತಂ ಬಳಿಕೆ ಪೂರ್ವದೊಳಿರ್ಪನೇ || 43 ||

ಇಂತೆಂದು ವೇದವೇದಶಿರಃ ಪುರಾಣಾಗ | ಮಾಂತರಂಗಳ್ಪಲವು ತೆರದಿನುಲಿವುತಿರೆ ಭೂ | ಕಾಂತನೀನಜ್ಞಾನಿಗಳ ಮಾತಕೇಳ್ವರೇ ತಮಗೆಗುರುವೆನಿಸಿಮೆರೆವಾ || ಶಾಂತಿರೂಪಂವ್ಯಾಸನಾವ್ಯಾಧಕನ್ಯೆಗೋ | ರಂತೊಗೆದಯೋಗ್ಯನಾದನೆ ಮತ್ತೆಮಾತಂಗಿ | ಗಂತೊಗೆದ ತನ್ಮತಂಗನಮಾನ್ಯನೇ ಶುನಕಿಗೊಗೆದಶಾನಕನಧಮನೇ || 44 ||

ಊರ್ವಶಿಗೊಗೆದವಶಿಷ್ಠಂ ಹೀನನೇ ಇವರ | ಪೂರ್ವಶಾಂಭವದೀಕ್ಷೆ
ಯಿಂದೀತ್ರಿಲೋಕಕ್ಕ | ಸರ್ವಪೂಜ್ಯತೆಯಿಂದೆಮೆರೆದುದಿಲ್ಲಾ ಕೀಟನಕಟ ಮ
ಧುಪಾಲಂಬದಿಂ || ಉರ್ವರ್ತೇಂಮಧುಪನಾಗದೆ ಮಲಿನಚೀವರಾಂ | ತರ್ಪತ್ರಿ
ಯಾದರತ್ನಂನಿಂದ್ಯಮೇಶಿಲಾ |ಪೂರ್ವಮಳಿಸೆಸೆವ ಲಿಂಗಂ ಶಿಲೆಯೆ ತದ್ವಿಧಿಯೊ
ಳೀಶಾರ್ಚಕಂಮೆರೆಯನೇ || 45 ||

ಅರರೆದುರ್ಜಾತಿಸಂಭವನಾಗಿಯುಂಭಕ್ತ | ನುರುಪೂತನೆಂತೆನಲ್ಪಾಷಾ
ಣದಲ್ಲಿಶುಭ | ಕರಹೇಮಪಾಕಾಷ್ಠದಲ್ಲಗ್ನಿ ಪಂಕದಲ್ಲುದ್ಭಪದ್ಮಂ ಜನಿಸಿ
ಯುಂ || ಪರಮಸೇವ್ಯತೆಯಿಂದೆ ರಾರಾಜಿಪಂತೆಭೂ | ವರ ಮತ್ತೆ ಕೇಳ್ ಶರಣ
ರೇಕುಲಜರಲ್ತೆಂಬವರಬಾಯನೆಡದ ಕಾಲ್ಗೆರ್ಪ್ಪಿಸಿಂಮುಚ್ಚುತಿದೆ ವೇದಾಂತತತಿ
ಯೆಂತೆನೆ || 46 ||

ಒತ್ತ್ರಿಯಪಿವಾಯೋಯೆನುತ್ತೆ ಚಂಡಾಲೋಯೆ | ನುತ್ತದುಶಿವೇತಿವಾ
ಚಂವದೇತ್ತೇನಯೆನು | ತೆತ್ತಿಸಹಸಂವದೇತ್ತೇನ ಸಹಸಂವಿಶೇತ್ತೇನಸಹಸಂಯೆ
ನುತ್ತೇ || ಮತ್ತಂವಸೇತ್ತೇನಸಹಭುಂಜತೇ ಯೆಂಬ | ಸಿತ್ತುಕ್ತಿಯಿಂಶ್ವಪಚನಾ
ದೊಡಂ ಶಿವಯೆಂಬ | ನುತ್ತಮನವನಕೂಡೆ ನುಡಿವು ದೊಡನೆಯೆ ನಡೆವುದೊಡ
ನಿರ್ಪ್ಪುದೊಡನುಣ್ಬುದು * || 47 ||

ಎಂದುಜಾಬಾಲೋಪನಿಷದುಕ್ತಿಸಾರುತಿರೆ | ಮಂದಮತಿಗಳ ನುಡಿಗೆ
ಕಿವಿಗುಡುವರೇನೃಪಾ | ಚಂದದಿಂಶ್ವಪಚೋಪಿಯೆನುತೆತಚ್ಛ್ರುತಿ ಮುನಿಶ್ರೇ
ಷ್ಠೋ ಯೆನುತೆ ಸತ್ಯಕೆ || ನಿಂದುಶಿವಭಕ್ತ್ಯಾದ್ವಿಜಾಧಿಕೋಯೆನುತೆನಲ | ವಿಂದೆ
ಶಿವಭಕ್ತಿಯೆನುತುಂವಿಹೀನಸ್ತುಯೆನು | ತೆಂದುಂದ್ವಿಜೋಪಿಯೆನುತದುವೆ ದಲ್
ಶ್ವಪಚಾಧಮೋಯೆನುತೆ ವಿವಿಧವಿಧದಿಂ § || 48 ||

---

* ಅಪಿವಾಯಶ್ಚಂಡಾಲಶ್ಶಿವೇತಿ 'ವಾಚಂವದೇತ್ತೇನ ಸಹ ಸಂವದೇತ್ತೇ| ನಸಹಸಂ ವಿಶೇತ್ತೇ
ನಸಹಸಂವಸೇತ್ತೇನಸಹಭುಂಜತೇ || ಜಾಬಾಲೋಪನಿಷತ್.

§ ಶ್ವಪಚೋಪಿಮುನಿಶ್ರೇಷ್ಠಶ್ಶಿವಭಕ್ತ್ಯಾದ್ವಿಜಾಧಿಕಃ | ಶಿವಭಕ್ತಿವಿಹೀನಸ್ತುದ್ವಿಜೋಪಿ
ಶ್ವಪಚಾಧಮಃ || ಶಿವರಹಸ್ಯ.

ಶಿವಭಕ್ತಿಯುಳ್ಳ ಚಂಡಾಲನೇ ಬ್ರಾಹ್ಮಣ | ಪ್ರವರ ನಾಭಕ್ತಿಯಿಲ್ಲದ ಭೂಸುರಂಶ್ವಪಚ | ನಿವಹಕ್ಕಧಮನೆಂದುಶಿವರಹಸ್ಯಾದ್ಯಖಿಳ ಶಾಸ್ತ್ರಂಗಳುಲಿವುತ್ತಿರೇ||ಇವುಸೇವ್ಯಮೋ ಮೂಢನರರುಕ್ತಿಸೇವ್ಯಮೋ|ಅವನೀಶ ಮತ್ತೆಯುಂ ಬ್ರಹ್ಮಾಶಿವೋಯೆಂದು | ವಿವರಿಸಲ್ ಶ್ರುತಿವಲಂಬ್ರಹ್ಮಚಾರೀಯೆನುತ್ತುಂಬ್ರಾಹ್ಮಣೋಯೆನುತಿರೆ || 49 ||

ಪರಮನೇ ಪರಬ್ರಹ್ಮನಾಮಾರ್ಹನೆನಿಪನಾ | ಪರಮನದ್ಬ್ರಹ್ಮಾಚರಣಮುಳ್ಳರೇಬ್ರಾಹ್ಮ | ಣರೆನಿಪ್ಪರಿದುತದಾಮ್ನಾಯಾರ್ಥಮದರಿನಾಬ್ರಹ್ಮಾಚರಣಮಿಲ್ಲದಾ || ನರಕಿಗಳ್ಗೆಂಟಿಕೇಳಾಬ್ರಹ್ಮಪೆಮ್ಮಶಂ | ಕರನ ಶರಣರ್ಗಲ್ಲದಿದನುಳಿದು ಜಾತಿಯೇ | ಪರಮೆಂಬೊಡಂ ಜಾತಿಗೀತಿತಾಂಗಹನಮೇಭಕ್ತರ್ಗೆದೆಂತೆಂದೆನೇ || 50 ||

ಪರಮಶಿವನಿಷ್ಠಂ ವಶಿಷ್ಠನತಿಕರುಣದಿಂ | ದರರೆ ವಿಶ್ವಾಮಿತ್ರಭೂಪನಂಬ್ರಹ್ಮರ್ಷಿ | ವರನೆನಲ್ಕೆಗಳ್ದದಿಲ್ಲಾ ಒಳಿಕೆಹರಿಯುಂಬನಂ ಹತ್ತುಸೂಳ್ಬವಕ್ಕೇ || ಬರಿಸಿದೀಶಾರ್ಜಕಂ ಭೃಗುಪಿತ್ತಹವ್ಯಾಕ್ಷ | ನರಪತಿಗೆ ಕೂರ್ತುಭೂಸುರವರ್ಯಪಟ್ಟಮಂ | ವಿರಚಿಸಿ ಪುನಃ ಪ್ರತಿಷ್ಠೆಯನೆಸಗನೇ ಇಂತುಭಾರತಮುಲಿವುದಂತರಿಂ || 51 ||

ಶರಣರೊಲ್ದೊಡೆಫಲಿಸದಿರ್ಪ್ಪಕಜ್ಜಗಳುಂಟೆ | ಧರಣೀಧವಾಚಿಡಾಮಾತದಂತಿರ್ಕೆಸೀ | ನೊರೆದೆಮೆಯ್ಕಿಟ್ಟವನೆನುತ್ತಾಗಳಕ್ಕಕ್ಕಮದು ಪುಸಿಯೆಚವನಗದೆಯು || ಪಿರಿಯಲಜ್ಜಣದ ಮೆಯ್ಕಿಟ್ಟವಂ ಪರಿಭವಕೆ|ತಿರಿತಿರಿಗಿ ಬರ್ಪಮೆಯ್ಕಿಟ್ಟವಂ ಮೆಯ್ಯಿರ್ದು|ಮರರೆ ಭಾವಿಪೊಡೆಮೆಯ್ಕಿಟ್ಟವಂತಾನಲ್ಲದೀಕುಷ್ಠರೋಗದಿಂದೇ || 52 ||

ಒಳಿಕೆಮೆಯ್ಕಿಟ್ಟವನೆನಲ್ ಸಲ್ಪುದೇವಿಪ್ರ | ಕುಲಕೆದೇವರೆನಿಪ್ಪತತ್ಸವಿತೃವಾರ್ಧರಾ | ವಳಯಪತಿಮಾರ್ತಾಂಡ ಭಾನೋರೆನುತ್ತೆಕುಷ್ಠಂಚಯೆನಲಾಪುರಾಣಂ|| ಒಳವೆ ಮಾತುಗಳರ್ಕನೇಕುಷ್ಠನಲ್ತೆತ | ಮ್ಮೊಳಗನರಿಯದಮೂಢರುಕ್ತಿಗಳವೇಂ ಬಿಡುವಿ | ಮುಳಚಿದಂಬುಧಿಮಗ್ನರೇನಾನು ಮಿಾತನುಸ್ಥಿತಿಯನೂಹಿಸಬಲ್ಲರೇ || 53 ||

ತೊರೆಯನಡುವೀಶಪೂಜಾಲೀಲೆಯಿಂದಿರ್ದು |ತೊರೆಬಂದೊಡರಿಯದೇ ಳ್ವಗಲಭತಸುಖದನಿ | ಬ್ಬೆರಗಿಂಗಜೇಶಮಸಣಯ್ಯನಿರನೇ ಭೂಸುರಾಧಮ ಶ್ರೀವದೇವನಾ || ಮಿರುಗುವಶಿವಧ್ಯಾನಮಂಕೆಡಿಪೆನೆಂದು ಬಗೆ | ದರುವುಳ್ಳೆವೊತ್ತವನಮೇಲಡಕಿಕಿಚ್ಚಿಡ |ಲ್ಕರಿದನೇ ಗುರುಭಕ್ತನಂನದೀಮಧ್ಯದೊಳ್ ಪೋಪಲ್ಲಿ ತದ್ಗುರುವರಂ || 54 ||

ನೀನಿಲ್ಲಿರಾಂಪೋಪೆನೆಂದು ದೇಶೀಯದಿನ | ನೂನಗುಣೆನುಡಿದೆಯ್ದೆಗುರ್ವಾಜ್ಞೆಯಲ್ಲಿಜೀ | ತೋನಿಷ್ಠನಾಗಿರ್ದು ತನುವೆಲ್ಲವುಂ ಜೀರ್ಣಮಾಗಸ್ಥಿಮಾತ್ರಮುಳಿಯೇ || ತಾನದಂಬಗೆದನೆ ಶರೀರಮೆಂತಿದೊರ್ಡೇ|ನಾನಿರ್ಮಲನ್ನೊರ್ಳ್ವರೇ ಒಂದುನೆವದೆಸುವಿ | ಧಾನಮುಂಮಾಳ್ಪೆವೆಂದೀಕ್ಷಿಸಿ ದೊಡಾಕ್ಷಣ ದೊಳಾಗದೇಪೃಥ್ವೀಶ್ವರಾ || 55 ||

ಓವೊಗುಡ್ಡವ್ವೆಯೆಂಬವಿಚಲಿತಭಕ್ತೆಶಿವ | ಭಾವಪ್ರಯುಕ್ತೆಯೊರ್ಪ್ಪರ್ಗಲೋಳ್ವಿಲಾಸದಿಂ | ನಾವಂದಿಯೆಂಬಗ್ರಹಾರಮಂಪೊಕ್ಕು ನಡೆವೆಡೆಯೊಳಾವಿಪ್ರವಿಸರಂ ||ತಾವೆಯ್ದೆ ಕಾಣುತಂತ್ಯಜೆ ಮೇಲೆಕುಷ್ಠರೋ|ಗಾವೃತಶರೀರೆಯೆಮ್ಮೊಗ್ಗೆರ್ಂತುಬರಲಕ್ಕು| ಮೋ ವಿಚಾರಿಸದೆ ಪೊರಮಡಿಸಿ ಮೆನೆಕೇಳ್ದುನಸುನಗುತನಘೆನುಡಿದಳೊಂದಂ || 56 ||

ಆಂಪೋಗಿಕರ್ಮಚಂಡಾಲರಿರಮೇಣ್ಣಿಮ್ಮ |ಪೆಂಪನರಿದಪೆನೆನುತೆಸೌರಾಷ್ಟ್ರಪುರದತ್ತ | ಲಂಪಿಂದೆನೊಂದುನಡೆದಾಸೋಮನಾಥನಿಂ ಪ್ರತ್ಯಕ್ಷಮಂಪಡೆವುತೇ || ತಾಂಪರಮದಿವ್ಯಾಂಗಿಯಾಗಿ ಭೂಸುರಪುರದೊ|ಳಿಂಪಮರ್ವೋಲ್ ಭರ್ಗನಂನಿಲಿಸಿತದ್ವಿಪ್ರ | ರಂಪೇಳಲೇಂಕುಷ್ಠರಂಮಾಡಿ ಬಳಿಕೆಶರಣೆನೆಕಾಯಳೇನೃಪಾಲಾ || 57 ||

ತರಣಿಯಿಂಪೋಗದಾಶ್ವಿತ್ರರುಜೆಯಂಶಿವ | ಸ್ಮರಣದಿಂದೇನಳಿಯನೇ ಮಯೂರಂವಿಷ್ಣು | ಪರಿಹರಿಸಲಾರದುತ್ಕೃಷ್ಟ ಕುಷ್ಠಮನಹೋದಂಡಿಹರನಂ ಲಕ್ಷ್ಕಿಸಿ || ಇರದನಾಮಯನುತಿಯನುಸಿರ್ದುಕಳೆಯನೆಭಕ್ತಿ | ಭರದಿನರ್ಧೇಂದುಮೌಳಿಯನತಿವಿಶುದ್ಧನಂ|ಕರಮೆ ಬಣ್ಣಿಸಿ ಗುಂಮಟಯ್ಯನಾರಿಂಕೆಡದುರುವರ್ಣಮಂಕೆಡಿಸನೇ || 58 ||

ಇವರೀಶನಿಂದೆಪಡೆದವರೆಲೆ ನೃಪತಿಯೆಮ್ಮ | ಶಿವಭಕ್ತರಳವನೇನೆಂದು ಪೇಳ್ವೆಂ ಕೃಪಾ|ರ್ಣವಮನೋಹರ ಗಣೇಶನ ಪದಾಂಬುವನೀಂಟೆರವಿ ತನ್ನದು ಷ್ಕುಷ್ಟಮಂ || ತವಿಸನೇ ಮತ್ತೆ ಮಾದರದೂಡಿದೇವನೆಂ | ಬವಿಚಲಿತಭಕ್ತನಿಧಿ ಮಿಂದನೀರ್ಬಜ್ಜಲೋಳ್ | ತವೆಕೆಸರ್ಮಸಗಿ ತುಂಬಿರೆ ವಿಪ್ರನೋರ್ವನತಿಕುಷ್ಠ ನಾವೀಧಿಯಲ್ಲಿ || 59 ||

ಪುದಿದಕಳ್ತಲೆಯೋಳ್ಪಶುವನರಸಿಕೊಂಡೆಯ್ದು | ತೊದವಿದಾಬಜ್ಜಲೋ ಳ್ಕಾಲಿಟ್ಟುಪೇಸುತುಂ | ಸದನಕ್ಕೆಬಂದಡಿದೊಳೆದುಮಲಗಿಬೆಳಗಾಗಲಾಕೆಸರೊ ಳೊಂದಿದನಿತು || ಪದಮುತ್ತಮಸ್ವರ್ಣವರ್ಣದಿನೆಸೆಯೆಕಂಡು | ಮುದದಿನ ಲ್ಲಿಗೆಬಂದುತನ್ನಜ್ಜನಾಂಬುವ್ರೋ | ಳ್ಪದಪಿಂಮುಳುಂಗಿಕುಷ್ಠಂನೀಗಿದೂಡಯಂ ಗೆರಗಿಕರುಣಂಬಡೆಯನೇ || 60 ||

ಆವಾರ್ತೆಗೇಳ್ದುಬಂದಾಜಲದೊಳೊಂದಿಭೂ | ದೇವರೇಳ್ನೂರ್ತಂಮ್ಮ ಮೆಯ್ಯಕುಷ್ಠಂಗಳೆಯ | ರೇವಷುಮತ್ತೀಶಯೆನೆತನ್ನೃಪತಿಯೆಂದನೀಗಾದೆಯಂ ಗಂಟನಿಕ್ಕೀ || ಕೋವಿದನೆನಿಪೆನೆಂದೊಡಕ್ಕಮೇ ಕಥೆಗಿಥೆಗ | ಳೀವಾಳ್ತೆ ತೆಗೆ ಯುವಂನನ್ನಿವಾಳ್ವೊಡೆನಿಮ್ಮ | ಶೈವನಂಗದಕುಷ್ಠಮಪಹರಿಸಿವಿಪ್ರರೋಳ್ತೋ ರ್ಪುದುಳ್ಳೊಡೆನುಡಿಯೆನೇ || 61 ||

ಮೂದಲಿಸಿದುಪರಿಯೊಳ್ತೋರದಿರ್ಪುದುಶಂಭು | ಪಾದಭಕ್ತರಚಾಳಿ ಯಲ್ತೆನುತೆಪದ್ಮರಸ | ರಾದರದೊಳದನೊಡಂಬಟ್ಟು ಪೊನ್ನಂದಣಂಗಳಿಪಿಯಾ ಯಯ್ಯಂಗಳಂ || ಮೇದಿನೀಶನಸಭೆಗೆಬರಿಸಿಪೇಗ್ಗರ್ದುಗೆಯೊ | ಳಾದಿರುದ್ರ ಪ್ರತಿಮ ನಂಮೂರ್ತಿಗೊಳಿಸಿಪರ | ವಾದಿಗಳ್ನೋಡುತಿರೆತಜ್ಜಂಗಮಂತೊಟ್ಟಕೂ ರ್ಪಾಸಮಂಪಿಡಿವುತೆ || 62 ||

ದೇವಯೆನಗೀಪೀಳುಡೆಯನೀವುದೆಂದೆನು | ತ್ತಾವಿಮಲಮತಿಪದ್ಮರಸ ರದಂತೆಗೆಯಲೊಡ|ನೇ ವಣ್ಣಿಪೆಂತರಣಿಯಂಮುಸುಂಕಿರ್ದರ್ ಬೆಳ್ಮಗಿಲನಾಮಂ ದಮರುತಂ || ಓವ್ರೊಶೊಲಗಿಸೆತೊಳತೊಳಗುವಂತೆಪರಮತೇ | ಜೋವಿಲಾಸ ದೆಭಕ್ತನಮರ್ದುಜ್ವಲಿಸೆದೂಷ | ಕಾವನಿಸುರರದೇಹಮಂಕುಷ್ಠರುಜೆಯಡರ್ದು ಹೇಸಿಕೆಯನೇಂಸೂಸಿತೋ || 63 ||

ಮುಂತೆಥಳಥಳಿಪಭಕ್ತನ ನವನವೂರೆಯೊಳ್ಸ| ಮಂತುರಂಜಿಸುವಪದ್ಮ ರಸರಂಮೆಯ್ಯೊಳೋ| ರಂತಮರ್ದಕುಷ್ಠಾಮಯುದತಿಂತಿಯಂತುರಿಸುತೆರಗಿದ ತಲೆಯವಿಪ್ರರಂ|| ತಾಂತವೆನಿರೀಕ್ಷಿಸುತ್ತರಸನತ್ಯದ್ಭುತ | ಸ್ವಾಂತನಾಗುತೆ ಬಂದುಮೆಯ್ಯಿಕ್ಕಿನುತಿಸಲ್ಕ | ನಂತರಗೊಳಾಪಾದಿಗಳ್ಬಂದುಚರಣದೋಳ್ಬೀಳ್ದು ದೈನ್ಯಂದೋರುತೇ ||64 ||

ಕಾಯಯ್ಯಕರುಣಾಂಬುರಾಶಿಪದ್ಮರಸಾಂಕ | ಮಾಯಾಂಧರಾದೆಮ್ಮೊ ಳೇಕೆನಿನ್ನಯಬಿಂಕವೀ | ಯಧಮರುಜೆಯನಪಹರಿಸಿ ಸಲಹೆಂದೊರಲುತಿರೆನೋ ಡಿನಸುನಗುತ್ತೇ || ಆಯತೀಂದ್ರನಕರದಭಸಿತಮಂತದ್ದಿವ್ವ ಜರ | ಕಾಯದೋ ಳ್ತಳಿದುಸೌಮ್ಯಾಂಗರಂಮಾಡಿಜಯ | ಜೇಯದ್ವಿತೀಯಶಂಭೂಯೆಂದುಪೊಗಳ್ವ ಸಭ್ಯರಕೀರ್ತನದೊಳೆಸೆದಿರೆ || 65 ||

ಅನಿತರಿಂಮೇಲೆಬಲ್ಲಾಳರಾಯಂಕನ | ತ್ಕನಕರತ್ನಾಭರಣಜೇಲಾನು ಲೇಪನಾ | ದ್ಯನುಪಮ ಸುವಸ್ತುಗಳನಿತ್ತುಮತ್ತಂಪ್ರಾರ್ಥನಾಪೂರ್ವಕಂವಂ ದಿಸೀ || ವಿನಯದಿಂಬೀಳ್ಕೊಡೆಮದೇಭಮಸ್ತಕದೊಳ | ತ್ಯನಘಸಾದಾಯ ಯ್ಯನಂಮೆರೆಯಿಸುತೆಬಂದು | ಘನನಿಜಗೃಹಂಬೊಕ್ಕುಪದ್ಮರಸನೀಶಭಕ್ತಾರ್ಚ ನದೊಳೊಪ್ಪುತಿರ್ದ್ದಂ || 66 ||

ಮದಕುಧರಪಿದಳನಭಿದುರಪರಮಶಿವಭಕ್ತ | ಪದಶತದಳಾದಭ್ರನುಕ ರಂದಲೀಲಾಪ್ರ | ಮದಪರವಶೀಭೂತಮಧುಕರೋಪಮಪದ್ಮಣಾಂಕಪ್ರಣೀತ ಮಾಗಿ || ಸದಮಳಾಖಿಳಶಾಸ್ತ್ರಸಾರನೆಂದೆನಿಸುವ | ಭ್ಯುದಯಕರಪದ್ಮರಾಜ ಪುರಾಣಕಥೆಯೊಳಿಂ | ತಿದುಸಚಿವಪಟ್ಟಸುತವಿಭವಶಿವಮಹಿಮೆಗಳ್ಮೆರೆವನಾ ಲ್ಕನೆಯಸಂಧೀ || 67 ||

ಈಶಾಪರಾವತಾರನ ವಿಬುಧನುತನ ಭವ|ಪಾಶನಾಶಕಕೆರೆಯಪದ್ಮಣಾ ರ್ಯನಲಸ | ಚ್ಛ್ರೀಶಿವಾದ್ವೈತಸಾಕಾರಸಿದ್ಧಾಂತಪ್ರತಿಷ್ಠಾಪನಾಚಾರ್ಯನಾ || ಈಶುದ್ಧಚರಿತಮಂತಿಳಿಪಿದಗೋರ್ಬಿದ | ಗ್ರಾರ್ಶಿಯಿಂಕೇಳ್ದಗ್ಗೆರ್ಭುಕ್ತಿಮುಕ್ತಿಗ ಳಂಮ | ಹಾಶುಭಂಗಳನಾಯುಮಂಕೊಟ್ಟುಗುರುರೂಪವಿಶ್ವನಾಥಂರಕ್ಷಿ ಪಂ ||68||

ಅಂತು ಸಂಧಿ 4ಕ್ಕಂ ಪದ 279ಕ್ಕಂ ಮಂಗಳಮಹ || ಶ್ರೀ ||

——:o:——

## 5 ನೆಯ ಸಂಧಿ.

### ಶ್ರೀ ಗುರುರೂಪ ವಿಶ್ವನಾಥಾಯನಮಃ.

---

ಪಲ್ಲವಿ || ಪಂಪೆಸೆಯುಲೊಂದುಕತದಿಂ ಹರೀಶ್ವರನಿರದೆ | ಪಂಪೆಗೆಯ್ದು ಲ್ಬಳಿಕೆನೃಪತಿಕೆರೆಗಿತ್ತರ್ಥ | ಮಂಪದ್ಮರಸರಸಮಜರಕಿತ್ತುಭಕ್ತಸೇವಾಜೀವನಾ ಗೊಪ್ಪಿದಂ ||

ಪದ || ಹೇಳಾಜನಿತವರ ಕರಾಲಾಲಸತ್ಕಲಪ | ಜಾಲಾಲಲಿತಕುಮು ದಶೀಲಾಯಮಾನನಯ | ನಾಲಾಲಸಾಮುಕುಲಸೀಲಾಭ್ರಸೀಲಿಮಾಗಾಲಾಲ ಕಾಲೊಕಿನೀಂ || ಕೈಲಾತ್ಮಜಾಂವಿಶ್ವಪೋಲಾಲಯಿತ್ವಾತ | ಕೋಲಾಲಸಾಲ ಸೋಜಾಲಾರ್ಜುನಾಂಪುರುಚಿ |ಮಾಲಾಂಕೃತೋನ್ನಿಯುಲೋಲಾಯಿತೇಕ್ಷಣಾ ಮಾಲಾತುಮೇಮಸೀಷಾಂ || 1 ||

ಮತ್ತೊಂದುದಿವಸದೋಳ್ಪದ್ಮರಸದಂಡನಾ | ಥೋತ್ತಮಂನೃಪನೋಲಗ ಕ್ಕೆಯ್ದಿಯವನಬಲ | ದುತ್ತುಂಗಪೀಠದೊಳ್ಕುಳ್ಳಿರ್ದುದಂಡನಾಥರಮಂಡಳಿಕವ ರ್ಗದಾ || ಬಿತ್ತರದಮಕುಟವರ್ಧನರ ಮಂತ್ರಿಗಳನು | ದ್ವೃತ್ತಸಾಮಂತರ ರ ವೀಂದುವಂಶಜರ ಸಮು | ದಾತ್ತಪದವಾಕ್ಯಪ್ರಮಾಣಪ್ರವೀಣರ ಕವೀಂದ್ರರ ಕಲಾಭಿಜ್ಞರಾ || 2 ||

ನಾಯಕರಗಾಯಕರನರ್ತಕರಕೀರ್ತನಾ | ಜೇಯರಚತುರ್ವಿಧದಸಬರ ನಾನಾವಿಧದ | ನಾಯಿಕಾಜನದರಸಿಕರ ರಂಜಿಪಕ್ತಿಕಾರರ ಮಹಾಹಾಸ್ಯಾಸ್ಪರ|| ರಾಯರಾವುತರಲಟಕಟಿಪತುಳಪಟುಭಟನಿ | ಕಾಯಾದಿಯಾಗೆಸೆವ ವಿನಿಯೋ ಗವಿತತಿಯುವಿ | ಡಾಯದವಿಳಾಸದವಿನೋದದ ವಿಭವದವಿಭ್ರಮುದಪೆಂಪಿಂಪ ನೀಯೇ || 3 ||

ಗೌಳಕೆಲಕಾಗು ಬಾತುರಕಮೆಯ್ಸಿಕ್ಕುಮಲೆ | ಯಾಳಕೂಗದಿರುಕೊಂ ಕಣ ಕಳಕಳವನುಡುಗು | ಲಾಳ ಹೋಹೋನಗದಿರಾಂಧ್ರ ಜಿನ್ನವಿಸುಜೋಳಾದಿ ಗಳ್ನಿಲ್ಲಿಮೆನುತೇ || ಪಾಳಿಗೆಡದಿಂತುಚಪ್ಪನ್ನದೇಶದ ಮಹೀ | ಪಾಳರಂಕಾಣಿಸು ವಕಳುಹಿಸುವ ಪಡಿಯರರ | ಕೋಳಾಹಳಂ ಪೊಣ್ಮೆಮೆರೆವಮುಹಚಾಸ್ಥಾನಮ ಧ್ಯದೊಳತುಳತೇಜದಿಂ || 4 ||

ಪರಿಕಿಸಲಿ ರಾಜೇಂದ್ರರಯ್ಯದೊಡವಿವುಕರಿನಿ | ಕರಮಿವುತುರಂಗಮಿವುವಸ್ತ್ರಮಿವುತರುಣಿಯರಿವರನರ್ಘ್ಯರತ್ನಮಿವು ಪರಿಮಳಮಿದರ್ಥಮಿದುಳಿದವಸ್ತುತತಿಯಿದೆನುತೇ || ನರಪತಿಗೆಕಾಣ್ಕೆಕಪ್ಪಂಮೊದಲೆನಿಪಪಲವು | ಪರಿಯಿಂದೆ ಬಂದವಸ್ತಾವಳಿಯಂತೋರಿಸು | ತ್ತಿರದೆತೆಗೆಯಿಸುತೆ ಪದ್ಮರಸರೊಪ್ಪಿದರಿಂತೆಸೆವಸಭಾಮಧ್ಯದಲ್ಲಿ || ೫ ||

ಷೋಡಶಪ್ರತಿಯಕರಣಿಕರೊಳಗ್ರಣಿಯೆನಿಪ | ಗಾಡಿಕಾರಂವಿರೂಪಾಕ್ಷನಿರವಂಮನ | ಕ್ಷೊಡಿಕಾಪಟದೊಳಂಕಿಸಿಬಳಿಕುಳಿದ ಬಾಹ್ಯವೃತ್ತಿಯಂಬಳಸುವಚಲಂ || ಆಡಲೇಂವಿಷಮಸಂಸಾರವಾರ್ಧಿಪ್ರಬಲ | ಬಾಡಬಂಗುರುಲಿಂಗಜಂಗಮಸಪರ್ಯೆಯಂ | ಮಾಡತಣಿಯದ ತವಕದಿಂದುರ್ವಿಕೊರ್ವಿನಲಿದಾಡುವನುಪಮಚರಿತ್ರಂ || ೬ ||

ಅರರೆಹಂಪೆಯಮಹಾದೇವರ ಜಠರಸುಧಾ | ಶರಧಿಸಂಭವಸುಧಾಕರನಖಿಲಶಿವಭಕ್ತ | ಕರುಣಾಕಟಾಕ್ಷಪ್ರಭಾಪುಂಜರಂಜಿತಾಂಗಂ ದೇಹಗುಣವಿಭಂಗಂ || ಸ್ಮರಕಾಲಮಾಯಾದಿಗಳ್ಗೆಡದಪದದೋಳ್ತೊ | ಡರನಿಕ್ಕಿಡಂಗುರಂಬೊಯ್ಸಿವರ್ತಿಸುವವಂ | ಹರಮಂತ್ರಸಿದ್ಧಂ ಚಿದನುಬದ್ಧನಧಿಕಶುದ್ಧಂ ಸತ್ಕಲಾಪ್ರವೃದ್ಧಂ || 7 ||

ಮಾತೇನೊಮೋಕ್ಷಲಕ್ಷ್ಮೀಧವನ ತುಂಗಭ| ದ್ರಾತಟೀಧಾಮನ ವಿರೂಪಾಕ್ಷನಂಘ್ರಿಕಂ | ಜಾತಸಂಜಾತ ಗಂಧಾಸ್ವಾದನಾನಂದ ಮದಮಧುಕರಾಯಮಾಣಂ|| ಓತುಬಣ್ಣಿಪೊಡಹೀಶಂಗರಿದೆನಿಪಸದ್ವಿ | ನೀತಂ ಕಲುಷಜಲದವಾತಂ ಪ್ರಣತಪಾರಿ | ಜಾತಂಲಸದ್ಗುಣೋಪೇತಂಶರಣಜನಪ್ರಿ ತಂಕೃಪಾಭಿಜಾತಂ || || 8 ||

ಚದುರಿಂಪುಸೊಂಪಲಂಕೃತಿಜಮತ್ಕೃತಿರೀತಿ | ಮೃದುಮಧುರಸರಸೋಪಮಾದ್ಯಖಿಲಲಕ್ಷಣಾ | ಭ್ಯುದಿತವಸ್ತುಕವರ್ಣಕಂಗಳಿಂಶಿವನಂಶಿವೈಕ್ಯರಂನುತಿಸುತಿರ್ಪ್ಪ || ಸದಮಲಿನಶಿವಕವೀಂದ್ರಂಲೆಕ್ಕಮೆಲ್ಲಮಂ | ಮದನಹರಪಂಪಾವಿರೂಪಾಕ್ಷಯೆಂದು ಬರೆ|ದದನವನಿಪಂಪರೀಕ್ಷಿಸಲೊಡಂನಿಷ್ಪ್ರಯಾಸದೆನಿರ್ವಹಿಸಿದಮಹಿಮಂ || 9 ||

ಪದೆದುಗೋವಿಂದಪ್ರತಿಷ್ಠೆಯಂನೃಪತಿರಾ | ಗದೊಳೆಸಗಿಯುದರಗೃಹ ದೊಳಗಣ್ಗೆಕರೆಯೆವೋ | ಗದೆಯುವಂಕಿನಿಸುತೀಸೇರ್ಮಳೆಯೊಳಗೆ ನನೆಯದೆ ಯ್ದನೆ ನಗುತೆನನೆಘುದೆ || ಸದನಕೆಯ್ದಿದನಿಜ್ಜಟಂಸಕಲಕುಧರಮು | ಧ್ಯದೊ ಳೆಸೆವಹೇಮಾದ್ರಿಯುಂತೆಕರಣೆಕರಮು | ಧ್ಯದೊಳೆಸೆವುತೆಮ್ಮಹಂಪೆಯಹರೀ ಶ್ವರನಧಿಕತೇಜದಿಂದೋಜಿವೆತ್ತು || 10 ||

ರಯ್ಯಮಾಗೋಲೆಯಂಬರಿವು ತಿರ್ದುಳಿದೆರಡು | ಕಯ್ಯನುದ್ಧಕೆನೆಗಹಿ ದುರ್ಭವದಮುಸಕಮಂ | ಕಯ್ಯಾರೆಯೊರಸುವಂತೊರಸೆವಾದಿಗಳ ಸಂಸ್ನೆಯಿಸ ರಿದುನೃಪತಿನಗುತೆ || ಅಯ್ಯೋಯಿದೇಕೆಹರಿಯಣ್ಣಂಗೆಬಲ್ಮರು | ಕ್ಕೆಯ್ಯನಾವರಿ ಸಿತ್ತೆನೆತದ್ದೂಷಕಬ್ಬೂರ್ತು |ಗೆಯ್ಯುತ್ತುಂ ಗಹಗಹಸುತಿರೆಪದ್ಮಣಾವಮಾತ್ಯನೆಂದನು ತಿಕೋಪೋಕ್ತಿಯಿಂ || 11 ||

ಶಾಪದಗ್ಧರಶಠರಕೂಳರ ಕುತರ್ಕಿಗಳ | ಪಾಪಾತ್ಮರಾದದೂಷಕರದು ಬೋಧಕೆಲೆ | ಭೂಪಾಲಸೀಸಿಂತು ಮರುಳಪ್ಪರೇಲಿಂಗಸಂಗಸೌಖ್ಯಾವೇಶಿ ಯಾ || ಆಪರಿಯನಾಮಹೇಶನೆಬಲ್ಲನಲ್ಲದೀ | ವ್ಯಾಪಾರಿಗಳ್ಗೆಕಾಣಿಸುಗು ಮೇಮೇಣಿವಂ | ಕಾಪುರುಷನೇ ವಿಚಾರಿಸೆ ವಿರೂಪಾಕ್ಷನಸದೃಕ್ಷನೆಂಬನಿತ ರಲ್ಲೀ || 12 ||

ದರಹಸಿತವದನನಾಗುತ್ತೆಮ್ಮಹರಿದೇವ | ನೊರೆದನಿಂತೆಂದು ನೃಪಕೇಳ ಪಂಪಾಪುರೀ | ಶ್ವರನೋಲಗದೊಳಾರತಿಯು ನೆತ್ತುತಿರಲದರ ನೆಕೆಪತ್ತಿಮೇಲ್ಕ ಟ್ಟಿನಾ || ಪರಮಾಂಬರಂ ಘುಗಿಲ್ಘುಗಿಲನುರಿವುತಿರೆಕಂ | ಡೆರಡುಕಯ್ಯಿಂದೊರಸಿ ಕಳೆದೆನಂತಲ್ಲದೀ | ಶ್ವರಭಕ್ತರನಿಮಿತ್ತಮಂ ದೇಹಮುಳಿದೊಡಂನೆಗಳ್ವರೇಯೆನ ಲೊಡನದಂ ||13||

ವಾದಿಗಳ್ಕೇಳ್ದುಕಟಕಿಯೊಳೆಂದರಕ್ಕಕ್ಕ | ಮಾದಿವ್ಯಪಂಪೆಯೊಳಗುರಿ ವಮೇಲ್ಕಟ್ಟನ | ತ್ಯಾದರದೊಳಿಲ್ಲಿದೊರಸುವಸಮುಶಕ್ತಿಯಾರ್ಗುಂಟಹೋ ಭೂಪೋತ್ತಮಾ || ಈ ದುರ್ಘಟದ ಭಕ್ತಿಯಂ ನೋಡವೇಳ್ಕುಮೆನೆ | ಮೇದಿ ನೀಪತಿಚರರನಾ ಪಂಪೆಗಟ್ಟಿಸಂ | ಮೋದದಿಂದವರೆಯ್ದಿ ಗುರುವಿರೂಪಾಕ್ಷಾಲ ಯಂ ಬೊಕ್ಕುಭಯಭಕ್ತಿಯಿಂ ||14||

ಪಂದನಂಗೆಯ್ದು ಬೆಂದಿರ್ದಮೇಲ್ಕಟ್ಟುಗಂ | ಡೆಂದರರ್ಚಕನ ನೀಕ್ಷಿಸು ತಿದೇಂಕಾರಣಂ | ಬೆಂದುಸರಿಯುಳಿದುದೆನೆ ಪೋದರ ವಿಪಾರ್ಮಧ್ಯಾಪ್ನದವ ಸರದೊಳೊಲವಿಂ || ಇಂದುಜೂಟಂಗಾರತಿಯ ನೆತ್ತುತಿರೆಯದರ | ಹೆಂದದಾ ಜ್ವಾಲೆಯೂವರಿಸಿ ಬೇವಲ್ಲಿಯೋ | ವರ್ಂದಯಾರಸಭರಿತ ಲೋಚನಂದಾಕ್ಷಿಣ್ಯ ವಿಲಸಿತ ಮುಖಂಸುಶೀಲಂ ||15||

ಲಸಿತಭಸಿತತ್ರಿಪುಂಡ್ರಾವಳೀಪ್ರಯುತಾಂಗ | ನಸಮರುದ್ರಾಕ್ಷಮಾಲಾ ರಂಜಿತಗ್ರೀವ | ನೆಸೆವದೋತ್ರದಿನುಜ್ವಲಿಪ ಕಟೀದೇಶನವದಾತವ ಸ್ತ್ರೋತ್ತರೀ ಯಂ || ಉಸಿರಲೇಂಸಾತ್ವಿಕೋದಯ ಶರೀರಂತನ್ನ | ಪೆಸರಂಬೆಸಗೊಳಲ್ಕೆ ಹರಿ ಗನೆನುತುಂಕರದ | ಮಿಸುಪೋಲೆಕಂತಮಂ ಬಿಸುಟಿದನೊರಸಿಪೋದ ನೀಮೆಲ್ಲ ರೀಕ್ಷಿಪಂತೆ ||16||

ಎಂದುಸಿರೆಕೇಳ್ದು ಚರರಾವಿತಾನಾಂಬರಮ | ನಿಂದೊಯ್ದುರಾಯಂಗೆ ತೋರಿಸಲ್ವೇಳ್ಕುಮೆನು | ತಿಂದುಧರಪಂಪಾಪುರೀಶನೊಳಗದವರ್ಚಿರಸದಂ ಕೊಂಡುಬರದಿಂ || ಬಂದುಬಲ್ಲಾಳಂಗೆ ವಾದಿಗಳಿರ್ದಗಳಿಂತು | ಬೆಂದುಬೇಕರಿ ವೋಗದಿರವೆಂದು ತೋರ್ಪ್ಪಂತೆ | ತಂದಾವಿತಾನಾಂಬರಂ ದೋರಿತತ್ಕಥನವೆ ಲ್ಲವಂವಿಜ್ಞಾಪಿಸೆ ||17||

ಕಂಡುಕೇಳ್ದಾಭೂಪನಾಶ್ಚರ್ಯವಾರ್ಧಿಗೆ ತ | ರಂಪಮಂಕಾಣದೆಮುಳುಂ ಗಿಭಯವಾವರಿಸೆ | ಖಂಡೇಂದುಧರನಲ್ಲದಮವು ಪರಿಯಣ್ಣನೇಂಜಾವಳಸೆ ಎನುತೆನುತಿಸೀ || ಕೊಂಡೆಯರದುರ್ಮುಖಂಗಳ್ಕೆಪ್ಪಿನಿಂಪೊಯ್ದು | ದಂಡಿ ಯಂಧರಿಸುವೊಲ್ಮೆಯ್ಯಿಕ್ಕೆ ಪದ್ಮರಸ | ದಂಡೇಶನಾನಂದಸಿಂಧು ಮೇಲ್ಪರಿಯೆ ಮುಂಕೊಂಡಿಂತುನುತಿಸುತಿರ್ದ್ದಂ ||18||

ಭಾಪುರೆಹರೀಶಯೆಮ್ಮಾಶಸಂವಿತ್ಕೋಶ | ಭಾಪುಪರಿದೇವ ಮದ್ದೇವ ಮಧುರಾರಾವ | ಭಾಪುಹರಿಯಣ್ಣ ಯೆಮ್ಮಣ್ಣಕಲಿಯುಗದ ಮುಕ್ಕಣ್ಣಮಗುಭಾಪುಭಲರೇ || ಆಪಂಪೆಯಲ್ಲುರಿವಮೇಲ್ಕಟ್ಟನಯ್ಯಯ್ಯ | ಭೂಪಾಲನೋಲ ಗದೊಳಿರ್ದ್ದ ಕಂಡೊರಸುವಿಂ | ತೀಪೆಂಪುನಿನಗಲ್ಲದಾಗ್ದುಂಟೆನುತ್ತೆ ಬಣ್ಣಿಸೆ ಭಕ್ತರುಘೇಯುಘೇಯೆನೆ ||19||

ಅನಿತರಿಂಮೇಲೆ ಹರಿದೇವನಿಂತೆಂದನೆಲೆ | ಮನುಜೇಶಕೇಳಿಂದು ಮೊದಲಾಗಿ ಸಕಲದೇ | ವನಿಜೇಶಸೇವೆಯಲ್ಲದೆ ಮನುಜಸೇವೆ ಯಗ್ರಾಹ್ಯಮಿದುಭಾಷೆಯೆನುತೇ || ಎನಿತೊಡಂಬಡಿಸಿದೊಡ ನೊಪ್ಪದಲ್ಲಿಂತಳರ್ದು | ಮನೆಗೆಯ್ದಿ ನೃಪನೊಡವೆಯಾಗಿರ್ದುದಂಬಿಟ್ಟು | ತನಗೆ ಸಲ್ವೊಡವೆಯಂ ಭಕ್ತತತಿಗಾರಾಧನಂಗೆಯ್ದು ವೈರಾಗ್ಯದಿಂ ||20||

ವರಪದ್ಮಣಾಮಾತ್ಯ ಪುಂಗವಾದ್ಯಖಿಲಶಿವ| ಶರಣಸಂತತಿಗೆ ಭಯಭಕ್ತಿಯಿಂ ಮೆಯ್ಯಿಕ್ಕಿ | ಕರುಣಮಂಪಡೆದುಕಳಿಹಿಸಿಕೊಂಡುಪಂಪಾಪುರಾಭಿಮುಖನಾಗಿತಳರ್ದೂ || ಬರೆವರೆಗುಹಾರಣ್ಯಮೆಂಬಪುಣ್ಯಕ್ಷೇತ್ರ | ಮಿರೆಯುದಂಪೊಕ್ಕುತತ್ಕ್ಷೇತ್ರಪತಿಯಾದಹರಿ | ಹರಲಿಂಗದಾಲಯಕ್ಕೆಯ್ದಿಯಾದೇಗುಲದಪಡಿಕೆತ್ತಿರಲ್ಕೀಕ್ಷಿಸಿ ||21||

ಅಚ್ಚರಿವಡುತೆಪಗಲೊಳೀ ಶಿವಾಲಯದಪಡಿ | ಮುಚ್ಚಿರ್ಪ್ಪಕತನಮೇನೆಂದೊಡಾಸ್ಥಾನದವ | ರಚ್ಚಿಗಂಬಡುತೆಂದರೀದೇಗುಲದೊಳೊಂದುಬೊಮ್ಮರಕ್ಕಸಮಿರ್ಪ್ಪುದು || ಒಚ್ಚತಮದಾರುಮಂಪುಗಲೀಯದೆನೆಕೇಳ್ದು | ನಿಚ್ಚಟನದಂಕೋಪಿಸುತೆ ಕರೆಯೆನಡುಗುತುಂ | ಪೊಚ್ಚಪೊಸಪಾರ್ವನಾಕಾರದಿಂ ಬಂದಂಘ್ರಿಗೆರಗಿನಿಲೆನೋಡಿನಗುತೆ || 22||

ಎಲೆಲೆನೀನೀ ಮಹಾಸ್ಥಾನಕ್ಕುಪದ್ರವಮು | ನಲಸವಾಗಿಪುದುಚಿತಮೇ ಪೋಗೆನಲ್ಕದು | ಜ್ವಲಹರೀಶನದರ್ಶನದಿನಾಗ್ರಹತ್ವಮಂಪಿಂಗಿವಂದಿಸಿನುತಿಸುತೆ || ಸಲೆಸಗ್ಗದತ್ತಗಮನಿಸಿತಿತ್ತಲೆವ್ಮನಿ | ರ್ಮಲಚರಿತನೀಶಾಲಯಂಬೊಕ್ಕುಭಜಿಸಿಶಿವ | ನೊಲವಂಪಡೆದುಕೃತಾರ್ಥತೆಯನಾಂತಂ ಸರ್ವರಿದುಚೋದ್ಯಮೆಂದುಪೊಗಳೇ ||23||

ಅಲ್ಲಿಂದೆತಳರ್ದು ಪಂಪಾಪುರಕ್ಕೆಂದುಬ | ರ್ಪ್ಪಲ್ಲಿತತ್ಪಂಪಾಪುರೀಶನಾಸ್ಥಾನದವ | ರೆಲ್ಲರಕನಸಿನೊಳೆವ್ಮಯಸುತಂ ಹರಿದೇವನೆಯ್ತರುತ್ತಿರ್ಪ್ಪನವನಂ || ನಿಲ್ಲದಿದಿರ್ಗೊಂಬುದೆಂದೊರೆದು ತನ್ನಯಪೊಳೆವ | ಪಲ್ಲಕಿಯನಟ್ಟಲ್ಕದರ್ಕೆರಗಿಪೊತ್ತುಕೊಂ|ಡುಲ್ಲಾಸದಿಂಬಂದುಗುರುವಿರೂಪಾಕ್ಷನಂಕಾಣಲೊಡನೇವಣ್ಣಿಪೆಂ ||24||

ಮಿಕ್ಕೊಗೆವರೋಮಾಂಚಕಂಚುಕಿತತನುವಿಂಜ | ಲಕ್ಕನಾದಾನಂದರ ಸಭರಿತನೇತ್ರದಿಂ | ತೆಕ್ಕತೆಕ್ಕನೆನೆಗೆವುತಿರ್ಪ್ಪಬೆಮರ್ವನಿಗಳಿಂದಿರದೆಸೆರೆಬಿಗಿವ ಕೊರಲಿಂ || ಜಕ್ಕುಲಿಪನೇಮದಿಂಕರಗುವೆರ್ದೆಯಿಂದೊಕ್ಕ | ಲಿಕ್ಕಿಪೊಣ್ಮುತ್ತ ವಗದ್ಗದಾಲಾಪದಿಂದೆಮೆ | ಯ್ಯಿಕ್ಕಿದೈನ್ಯಂದೋರಿಸುತವೋಹಮಂಬೀರಿಶಿವ ಕೃಪೆಯನಿರದೆಪಡೆದು || 25 ||

ತುಂಗಭದ್ರಾಂಬುವಂಮಘಮಘಿಪನವ್ಯಕುಸು | ಮಂಗಳಂದಿವ್ಯಗಂಧ ಮನಕ್ಷತಮನುರುದ | ಶಾಂಗಧೂಪಮನಖಿಳದೀಪಮಂಲಲಿತನೈವೇದ್ಯಮಂ ತಾಂಬೂಲಮಂ || ಪೊಂಗಿಪೊರೆಯೇರುತುಂತಂದಾವಿರೂಪಾಕ್ಷ | ಲಿಂಗಮಂ ಪೂಜಿಸಿದಿನಕ್ಕಭವನಿತ್ತಪಡಿ | ಯಿಂಗಣಕುಲಾರ್ಚನಂಗೆಯ್ಯುತೆಶಿವಾನುಭವ ದಿಂಹರೀಶ್ವರನಿರುತಿರೆ || 26 ||

ಆಹರೀಶನಸುಕವಿತಾರಸಮನಲ್ಲಿರ್ಪ್ಪ | ವೋಹನಮನೊಂದಿದಕಲಾ ಪ್ರಾಢಿಯುಂಮಿನುಗು | ವೂಹೆಗಳನಾಲಿಸುತ್ತಾಂಧ್ರದೇಶದೊಳೋರ್ವಳತಿಚತುರೆ ಯುಬಲಾಮಣಿ || ಆಹಗಣಿಕಾಗ್ರಣಿಯಪೂರ್ವರೂಪಿಣಿಯತಿ | ವ್ಯಾಹರ್ದೈ ಯರ್ನೇಕಪೋರುಸ್ಪೃಣಿಘನಸುಗುಣಿ | ನೇಹವಿರ್ಮಡಿಸಿಕಿವಿವೇಟವಗ್ಗಳಿಸಿವಿ ರಹಿಣಿಯಾಗಿತಾಪಿಸುತ್ತಿ || 27 ||

ಆತನೊಡನಮರ್ದುಮನ್ಮಥಸುಖಸುಧಾಂಬುಧಿಯೊ | ಳೋತುಮುಳು ಗುವೆನೆಂದುನೆನೆದುದೇವಪ್ರಾರ್ಥ | ನಾತುರವ್ಯಾಜದಿಂತಳರ್ದಂದಣವನೇರಿಘ ನವಿಭವಸಹಿತೆಯಾಗಿ || ಮಾತೇಂಹರೀಶ್ವರಂಗತನುತಂದೊಳ್ಗಪ್ಪ | ವೋ ತಾನಿದೆನೆಬಂದುಪಂಪಾಪುರಂಬೊಕ್ಕು | ಕಾತರಂಕೈಮಿಕ್ಕುಬೀಡಾರವೊಂದಂ ಪ್ರವೇಶಿಸಲ್ಕನಿತರಲ್ಲೀ || 28 ||

ರವಿಪಶ್ಚಿಮಾಂಬುಧಿಗಿಳಿಯೆವಿವಿಧವಿಭವದಿಂ | ದವಳಾವಿರೂಪಾಕ್ಷನಾ ಲಯಕ್ಕೆಯ್ದನಿ | ನ್ನವನಿರವನೆನಗೆತೋರೆಂದೆರಗಿಬೇಡಿಕೊಳ್ವಂತೆರಗಿಕಾಣ್ಕೆಯಿ ತ್ತು || ನವಪೂಜೆಯಂರಚಿಸಿಮಗುಳೆಮನೆಗೆಯ್ತಂದು | ಯುವತಿಯಲ್ಲಿಂಮೇಲೆ ಹರಿದೇವನಂಕಾಣ್ಬ | ತವಕದಿಂಪ್ರಾಣಸಖಿಯೋರ್ವ್ವಳ್ಗೆರಸುತನ್ನಹಾತ್ಮನಿ ರ್ಪ್ಪೆಡೆಗೇಳುತೇ || 29 ||

ನೆರೆಶಿಥಿಲಕರ್ಮನಾಚಾರ್ಯನನರಸಿಬರ್ಪ್ಪ | ತೆರದಿನರಸುತೆಬಂದುಶಿವಭವನದೊತ್ತಿನೊಳ್ | ಕ್ಕಿರೆವಾಶ್ರಮದೊಳುರುವಿಭೂತಿರುದ್ರಾಕ್ಷೋಜ್ಜ್ವಲಾಂಗದಿಂನಸುಗಾವಿಯಿಂ || ಮಿರುಗುವುಷ್ಣೀಷಬೃಹತಿಕೆಗಳಿಂದೋತ್ರದಿಂ| ದುರದೆದ್ದೃಢಪದ್ಮಾಸನಂಗೆಯ್ದುಶಾಂತಿರಸ | ದೆರಕದಿಂಸಮೆದವೃತ್ತಳಿಯೆನಲ್ಬೆಳಗುವಟ್ಟಂತರ್ಮುಖಾಕ್ಷಿಯುಗದಿಂ || 30 ||

ತೊಳಗುವೆರ್ದೆದಾವರೆಯನಡುವೆಥಳಥಳಿಸಿಘುಳು | ಘುಳಿಸುವಪರಂಜ್ಯೋತಿರಾಕಾರಲಿಂಗಮಂ | ಬಳಸಿಬಿಗಿದೊಳಪೊಕ್ಕುತಾನೆಂಬುದನರಿಯದನುಪಮಸುಖಾವೇಶದಿಂ || ಮಿಳಿರ್ಪ಼ಶಿವಯೋಗಿಯಂಕಂಡುಕಾವಂಬಿಲ್ಲ | ಸಿಳುಪೆರತಿವಿರತಿಯಂಧರಿಸೆಪಸಿಮುಸಿಯಾಗೆ | ಮಲಯಪವನಂವನಂಬುಗೆವಸಂತಂಭ್ರಾಂತನಾಗೆಮೇಲೇವಣ್ಣಿಪೆಂ || 31 ||

ಕಾಂತೆಯೊಳ್ಳಿಮಿರ್ದಕಾಮಧ್ವಾಂತಮಂತವಿಸಿ |ಕಂತುಪರಭಕ್ತಿಯೊಳಹೊರಗನಾವರಿಸೆವಿ | ಶ್ರಾಂತತೆಯನೆಯ್ದೆಹರಿದೇವಂಗೆಸಾಷ್ಟಾಂಗದಿಂನಮಿಸಿನುತಿಸುತ್ತಿರೆ || ಶಾಂತಿರೂಪಂಕಣ್ದೆರೆದುನೋಡಿಯೆಮ್ಮಾಶ್ರ | ಮಾಂತರಕೆನಟ್ಟಿರುಳೊಳೇಂಕಾರಣಂಬಂದೆ | ನೀಂತಳೋದರಿಯೆನೆಯಥಾಕಥನಮಂ ಪೇಳೆಕೇಳ್ದುಹರಹರಯೆನುತ್ತೇ ||32||

ಪೆಂಡಿಗ್ಗ಼ಪೆಂಡಿರೋತೊಂದಿದವರೇನುಂಟೆ | ಪುಂಡರೀಕಾಕ್ಷಿ ಪೇಳಾಂ ನೊಸಲಕಣ್ಣಂಗೆ | ಗಂಡುದೊಳ್ತಾಗಿರ್ಪ್ಪ ನಿಂತುಬರ್ಪ್ಪರೆ ಬಳಲ್ದಾತಾಯೆಪೋಪೋಗೆನೆ || ಖಂಡಿತಸ್ಮರ ಭಕ್ತನಳವಿಂಗೆ ಮೆಚ್ಚಿಶಶಿ | ಮಂಡಲಾನನೆ ಭಕ್ತಿಯಿಂದೆರಗಿ ಪಶುಪತಿಗೆ | ಗಂಡುದೊಳ್ತಾಗಿ ನೀನಿರ್ಪೊಡಾಂ ನಿನಗೆ ಪೊರಗುಂಡನಾಗಿರ್ಪ್ಪನೆನುತೇ || 33 ||

ಕರುಣಮಂಪಡೆದು ಶಿವದೀಕ್ಷೆಯಂಕೈಕೊಂಡು | ಕರಮೆತನ್ನೊಡವಂದರೆಲ್ಲರಂ ಬೀಳ್ಕೊಟ್ಟು | ಹರವಿರೂಪಾಕ್ಷನಂ ಗುರುಹರೀಶನು ಮನಾರಾಧಿಸುತ ಮಲವಿರತಿಯಿಂ || ತರುಣಿಯಂಗೀಕರಿಸಿ ನಿಜಮೋಕ್ಷ ಲಕ್ಷ್ಮಿಯಂ | ತ್ವರಿತದಿಂ ತೊಳ್ತುಗೆಯ್ದಾಳ್ವಬಲ್ಗಾಡಿಯಿಂ | ಚರಿಸುತುಂ ಸುಖಮಿರ್ದಳೆನೆಶಿವಶಿವಾಮಹಾತ್ಮರ ಸಂಗಮೇಗೆಯ್ಯದೋ || 34 ||

ಅಂತಾಗೆ ತಮ್ಮಗ್ರಜೆಯ ಸುತಂ ಕುಕವಿಹೃ | ತ್ಕುಂತಂ ಸುಕವಿವನವ ಸಂತಂ ದಲುಭಯಕವಿ | ಸಂತಾನಶರಭಭೇರುಂಡ ರಾಘವನೊರೆದ ನರನುತಿಗೆ ಘುಳಿದುಕಳೆದು || ದಂತವೈದಂಮಗುಳೆ ಶೈವಕೃತಿಪಂಚಕವನಂತವನಿನುಸುರಿ ಸಿಯವಂ ಕೊಟ್ಟುಪರವಾದ | ಮಂತಡೆಯುದಾತನಿಂ ವಾಹಮುಖದಿಂಗೆಲಿಸಿಯ ವನ ಕವಿತಾವ್ಯಾಜದಿಂ || 35 ||

ಭಕ್ತಾಪರಾಧವಾತಂಗಾಗೆ ನೊಂದುಕೋ | ಪೋಕ್ತಿಯಿಂ ಶಪಿಸಿಯಾ ತಂನುತಿಸೆನಿನ್ನನಿಜ | ಮುಕ್ತಿಗಂಮೆಯ್ಮೆಗಂತಚ್ಛಾಪಮನುಕೂಲ ಮೆಂದೊರೆದು ಕೂರ್ತುಬಂದಾ || ಭಕ್ತೆಯತಿಶಯಭಕ್ತಿಗೊಲ್ದು ಪಂಪಾಪತಿಗೆ | ಸೂಕ್ತಿಪೂಜೆ ಯನೆಸಗಿ ಯಾಕೆಯಂ ಶಿವಪುರಕೆ | ಭಕ್ತರುಘೆಯುಘೆಯೆನೆ ಕಳಿಪಿಹರೀಶಂ ಶಿವ ಸುಖದಿನೀ ತೆರದೊಳಿರುತಿರೆ || 36 ||

ಇತ್ತಲೆಮ್ಮಯ ಪದ್ಮಣಾಮಾತ್ಯ ಶೇಖರಂ | ಮತ್ತೊಂದುದಿನದಲ್ಲಿ ಭೂ ಪಾಲಸಭೆಗೆ ಸಮು | ದಾತ್ತತೆಯಿನೆಯ್ದಿನೃಪನುಪಚಾರಪೂರ್ವಕಂ ಪಿರಿಯಗ ದ್ದುಗೆಯಮೇಲೆ || ಉತ್ತುಂಗವೃತ್ತಿಯಿಂ ಮೂರ್ತಿಗೊಂಡೋಲಗಮ | ನಿತ್ತು ಘನತೇಜಸ್ಸಿನಿಂದೊಪ್ಪುತಿರೆ ಯಾಗ | ಳುತ್ತಮಂ ವೇಲಾಪುರಕ್ಕೆ ಸಲ್ವಧಿಕಾರಿ ಯೇಳ್ದಿಂತು ಬಿನ್ನವಿಸಿದಂ || 37 ||

ಏಲೆನೃಪಶಿರೋಮಣಿಯೆ ನಿನ್ನರಾಜ್ಯಂಸಮು | ಜ್ಜ್ವಲದೇವಮಾತೃ ಕನದೀ ಮಾತೃಕಂಗಳಿಂ | ಫಲಿಸಿರ್ಕುಮೆನ್ನಪುರಮೊಂದೆ ನದ್ಯಂಬುಪಾಲಿತಮೆ ನಿಸದಾಕೃತ್ಯಕೇ || ಸ್ಥಲಮತ್ಯಪೂರ್ವಮೊಳವು ತಟಾಕಮಿಲ್ಲದ | ಕೊರ್ಲವಿನಿಂ ದೊಂದು ಕೆರೆಯಂ ರಚಿಸಿ ಕೊಟ್ಟೊಡಿಂ | ಪಲವುಮಾತಂನುಡಿದು ಫಲಮದೇಂ ಸಿರಿವೆಣ್ಗೆ ನೆಲೆವನೆಯೆನಿಪೆನೆಂದೆನೆ || 38 ||

ಆನುಡಿಗೆ ಚಿತ್ತದೊಳೊಡಂಬಟ್ಟು ಪದ್ಮರಸ | ರಾನನಾಬ್ಜಮನೀಕ್ಷಿಸ ಲ್ಕೆ ಪರಿಕಿಸುತದಂ | ಭೂನಾಥಕೇಳಿವಂ ಬಿನ್ನವಿಸಿದಂತೆ ಮಾಳ್ಪುದುದ ಕಜ್ಜ ಘುನೆ ತನ್ನೃಪಂ || ಆನಂದಿಸುತ್ತೆ ಮತ್ಸುತನ ಪೆಸರಿಂದಮುದ್ರ್ | ನೀನೊಂದು ಕೆರೆಯುಂನೆಗಳ್ಚಿಸುವುದೆಂದುಸಿರ್ದು | ತಾನಾಕ್ಷಣದೊಳೋಲಗಮನಿರದೆ ಪರೆಯ ವೇಳ್ದಂತಃಪುರಕೆ ಗಮನಿಸೆ || 39 ||

ಬಳಿಕಿ ಪದ್ಮರಸಮಂತ್ರೀಶ್ವರಂ ಸಚಿವಸಂ | ಕುಳಸಹಿತನಾಗಿ ಯಲ್ಲಿಂತ ಳದುರ್ಗ ಬಂದುಕ | ಣ್ಗೊಳಿಪ ಭಂಡಾರದ ಮನೆಯನೆಯ್ದಿತದ್ವಾರಿಕಂಗೆ ಪೇಳ್ದು || ಪೊಳೆವ ಪೊಸಪೊನ್ನನೀರಾರುಸಾವಿರಮನು | ಜ್ವಳಹರ್ಷದಿಂ ತರಿಸಿಕಡಿತಕ್ಕೆಬರೆಯಿಸುವ | ಮಳಚಿತ್ತನಾತಂಗೆ ಕೆರೆಗಟ್ಟಿಸೆಂದೀವಸಮಯದೊಳಗೇವಣ್ಣಿಪೆಂ || 40 ||

ಮಲಹರಂಪದ್ಮರಸರಂ ಮೆರೆವೆಸೆಂಬಮನ | ದೊಲವಿನಿಂ ಪುಲಿದೊವಲನಸಮಾಂಬರಂಗೆಯ್ದು | ಲಲಿತಾಂಗದೊಳ್ಪೊದೆದು ಫಣಿಗಳ ಫಣಾಮಣಿಯಕಡುಕಂತಳೆದು ಭಸಿತದಾ || ತಿಲಕದಿಂನೊಸಲಕಣ್ಣಂ ಮರಸಿಯಸ್ಥಿಯು | ಜ್ಜ್ವಳಮಾಲೆಯಂತಾರಹಾರಮಾಗಿಸಿಧರಿಸಿ | ಸಲೆಮಿನುಪಕೊರಲಕರ್ಪೂರಂತೆಗೆದಮದುರ್ಗರೆವಪ್ಪೋಲ್ಮಾಡಿ ತುಟಿಯೊಳಾಂತು || 41 ||

ಸಿರಿಮುಡಿಯೊಳಿಸೆವ ಪೆರೆಯಂತೆಗೆದು ಪಲವುಗೆ | ಯ್ದುರಕಲಂಕರಿಸಿಮೊಗವೊಂದುತೋಳೆರಡರಿಂ | ಸ್ಫುರಿಸುತೀಪರಿಯಿಂದೆ ವಿಟಜಂಗಮಾಕೃತಿಯನಾಂತುಪೊಸದೇಸಿರಚಿಸೆ || ಮೊರೆವ ಸಂಮಾವುಗೆಯ ಮುರುಕದಿಂತೆಗೆದುಟ್ಟ | ವರದುಕೂಲದಮುಂಜೆರಂಗಿನಿಂತಳಿರ್ಗಯ್ಯೊ | ಳರರೆರಂಜಿಸುವ ಪೂಜೆಂಡಿನಿಂಸಿಂಗರಕ್ಕಿಟ್ಟತಿಟ್ಟಮೊಇದೆನಿಸಿ || 42 ||

ಅರರೆಸೆಳ್ಳುಗುರ್ಗಳಿಂ ಮುಂದಲೆಯನಲೆವನು | ಣ್ಗುರುಳನೊಯ್ಯಾರಿಸುತೆಕೆಂಬಲ್ಲಧಾಳವಾ | ವರಿಸೆನಸುನಗುತೆ ಮೆಯ್ಗುಂಪನೆಣ್ದೆಸೆಗೆ ಸೂಸುತೆ ತನ್ನನಿನ್ನಿಸುಕಂಡ || ತರುಣಿಯರ ಮನವನಾಹಾಸುಂಕಮಂಕೊಳುತೆ | ಶರಣಪದ್ಮರಸರಿರ್ದ್ದೆಡೆಗೆಯ್ದೆಕಂಡವ ! ವರಸಭಯಭಕ್ತಿಭರದಿಂದೇಳ್ದುಬಂದು ವಂದಿಸಿದೇವಜೆಸನೇನೆನೆ || 43 ||

ಎಲೆಭಕ್ತಸಂಕುಲಲಲಾಮ ಕೇಳಿಮ್ಮಕಾ | ದಲೆಯೆಮ್ಮೊಳಗೆ ಮುಳಿದಳಾಮುಳಿಸುಗಳೆವೊಡು | ಜ್ವಲಿಸುವೀಯೆಲ್ಲ ಜಾಳಿಗೆಯೊಳಿನಿಸುಂಕುಂದ ದೀಗಳೀಯೆನೆ ಶಿವಶಿವಾ || ಅಲಸಿದನೆ ಕೊಂಕಿದನೆ ಕೋಡಿದನೆ ಜಾಡಿದನೆ | ಚಲಚಿತ್ತನಾದನೆ ಪೆಡಂಮೆಟ್ಟಿದನೆಸಭಾ | ಸ್ಥಲಮಿದೆಂದಳ್ಕಿದನೆ ಛಲವನುಳಿದನೆ ರಾಜಧನಮಿದೆಂದೂಹಿಸಿದನೇ || 44 ||

ಉಲಿವರೀದುರ್ಜ್ಜನರ್ಬಾಯ್ಗೆ ಬಂದಂತೆಂದು | ತಲೆಗುತ್ತಿದನೆ ವೇಷವಿ ದುವಿಕೃತಮೆಂದುನಿಜ | ಬಲವದ್ವಿಶೇಷಭಕ್ತಿಯನುಡುಗಿದನೆ ಪೊಗಳ್ವೆನೇನನಾ ತನನಿಷ್ಠೆಯಂ || ನಲಿದಿಹಪ್ಪಗೆಯೊಂಡಸಿಂಧುಬಲ್ಲಾಳರಂ | ಸಲಹಿದಪ್ರತಿವ ಮೋಹನರೂಪಗತ್ರಪಾಪ | ವಿಲಸಿತಸುಲೀಲಾಕಲಾಪತಪ್ಪೆ ವಾಸ್ತುಕಯ್ಕೊಂಡು ಕರುಣಿಸೆನುತೆ || 45 ||

ಸ್ವಾಮಿನೀವಿತ್ತೀಪರಿಯ ಸಿರಿಯನೊಲ್ಲೆನೆನು | ತೇಮಾತೊಪೊರೆಗಟ್ಟಿ ಯೊಪ್ಪಿಸಿದನೋಮುಕ್ತಿ |ಭಾಮೆಯಂಬಮಲಗಣಿಕೆಗೆ ಕುಂದದೊತ್ತೆಯಂಕಳಿಪಿ ದನೊಎಂಬಂದದಿಂ|| ಪ್ರೇಮದೆಭುಜಂಗಜಂಗಮ ವೇಷದೀಶಂಗೆ | ಹೇಮಾದ್ರಿ ವಾಸಂಗೆ ತದ್ಧನವನಿತ್ತುಭ | ಕ್ತ್ಯಾಮೋದದಿಂದೆರಗಿ ಬೀಳ್ಕೊಟ್ಟುಕುಳ್ಳಿರ್ದ ಸಮಯದೊಳಗೇವಣ್ಣಿಪೆಂ || 46 ||

ಚರನೋರ್ವನತಿಶೀಘ್ರದಿಂ ಪರಿದುಬಂದುಪ | ದ್ಮರಸಸಚಿವಾಧಿಪಂಗೆಂ ದನೆಲೆದೇವಭ | ಕ್ತರನೇಕರನುಪಮದೂರ್ರದಿಂ ಬಂದಿರ್ಪರೆನೆಕೇಳ್ದು ಸಂಭ್ರಮಿ ಸುತೆ || ಅರಸುಗೆಲಸವನೆಲ್ಲಮಂ ಮರೆದುಗಳಿಲನೇ | ಳ್ದಿರದೆಯ್ದಿಯೊಡನೊಡನೆ ಜೀಲೂರವಂಬರು | ತ್ತಿರೆ ಕಾಲವಲ್ಲವಿಂದಿಂಗೆನಡೆಯೆಂದಾತನಂ ಕಳಿಪಿಗಮಿಸ ಲಿತ್ತಾ || 47 ||

ಕರಣಿಕರನಿಕರಮೆಲ್ಲಂ ಮಂತಣಂಗೊಂಡು | ಪಿರಿದುಸೋಜಿಗದಿಂದೆ ತಂತಮ್ಮಮೂಗಿಂಗೆ | ಬೆರಲನೊಂದಿಸುತಿದೆಂದುಂ ಕಂಡುಕೇಳ್ದಂದವಲ್ತೆಂದು ಗಜಬಜಿಸುತೆ || ಅರೆಬರಿಂತೆಸಗಲಕ್ಕುಮೆಯೆಂಬರಲ್ಲಿಮ | ತ್ತರೆಬರೆಸಗಿದೊಡ ಮೆಸಗುಗೆ ಪಾತ್ರಮೇಯೆಂಬ | ರರೆಬರಾದೊಡಮದೇಂ ತನ್ನೊಡವೆಯೇಯೆಂ ಬರರೆಬರದು ತಾನಾದೊಡಂ || 48 ||

ಸೂಳೆಗಂಗವ್ವಾಂಗದಿಂ ನಮಿಸಿಕೊಡುವುದಿದು | ಪಾಳಿಯೇತನಗೆಂಬರ ರೆಬರಿತ್ತುಂಕಾರ್ಯ | ದಾಳಾಪಮಾಗೊಂದನುಸಿರ್ದು ನೀಂಕೆರೆಗಟ್ಟೆಸೆಂದು ಕಳುಪ ದೆಸುಮ್ಮನೇ || ಕಾಲಮತ್ತೆಂದಾತನಂ ತಗುಳ್ದುತಾಂಜಂಗ | ಮಾಳಿಬಂದಿರ್ಪು ದೆನೆಪರಿದು ಪೋಪುದುಮಂತ್ರಿ |ಮೌಳಿಮಣಿಗಳ ಗುಣವೆಯೆಂಬರಿಂತಜ್ಞಾನಿಗಳ್ಪ ಲತೆರದೊಳಳುಪಿಸೀ || 49 ||

ನರವರಂಗೀಹದನ ನೀಗಳರಿಪದೊಡೆಮಗೆ | ಪರಮರಾಜದ್ರೋಹಮೊಂ ದಿರದೆಂದೆಲ್ಲ | ಕರಣಿಕರ್ ಕೃತನಿಶ್ಚಯರೆನಿಪ್ಪೆಡೆಯೊಳವರೊಳೋರ್ವ್ವಂ ವಿವೇಕಿಸಚಿವಂ || ಒರೆದನಂತವರ್ಗಿದೇಂ ಬಲ್ಲತನವೇಪೇಂಪೆ | ಗರುವಿಕೆಯೆಗಂಭೀರವೃತ್ತಿಯೇನಿಪ್ಪಪ | ಚರಿತವೇ ಹರಭಕ್ತರಿರವನವರೇ ಬಲ್ಲರಲ್ಲದುಳಿದರ್ಬಲ್ಲರೇ || 50 ||

ಬಂದದೆಸೆಯಂ ಪೋದದೆಸೆಯನಾರುಂಕಾಣ | ದಂದದಿಂ ಪಲವುಬಾಗಿಲ್ಗಾಪುಗಳನುಳಿದು | ಬಂದುದಾಸೀನದಿಂ ಬೇಡಿವಿತ್ತಂಗೊಂಡುಪೋಪುದಿದು ಪರಿಭಾವಿಸೆ || ಸಂದಶ್ತಿಕಾರರೊಳಗುಂಟೆ ಮೇಣ್ದುರ್ವರ್ಣ|ಮೊಂದಿದಯ್ಯ ನಸಜ್ವಲಾಂಗನಂ ಪದ್ಮರಸ|ರಂದು ನೃಪಮುಖ್ಯರೀಕ್ಷಿಸುತಿರಲ್ಮಾಡಿದುದನೇಂಮರೆದಿಪ್ಪಳಿಕ್ಕಂ || 51 ||

ಮೊನ್ನೆ ಹರಿಯಣ್ಣನಧಿಕಾಸ್ಥಾನಮಧ್ಯದೊ | ಳ್ತನ್ನಕಯ್ಗಳನೊರಸಿಕೂಡೆ ದೃಷ್ಟಂದೋರಿ|ದಂನೀವೆಕಾಣಿರೇ ಅಂತರಿಂಹರಸಮಯದೊಳ್ಕರ್ಕಶಂಸಲ್ವುದೇ|| ಇನ್ನೊರೆವುದೇನೊ ಕಾರ್ಯಾಂತರಮನಾರಯ್ದು | ತಾಂನೋಡೆ ಪದ್ಮರಸಮಂತ್ರಿ ಸಾಮಾನ್ಯನೇ | ಮನ್ನರೇಂದ್ರನ ಭಾಗ್ಯಲಕ್ಷ್ಮಿಯಲ್ತೇ ಆತನಳವದೇಂ ಪರಿಕಿಸಿದಿರೆ || 52 ||

ಅಂತರಿಂದೀಗಳುಸಿರ್ವುದನುಳಿದು ಕತಿಪಯ | ದಿನಾಂತರಂಗಳಿದು ಕಜ್ಜಗಳನಾರಯ್ದುಭೂ | ಕಾಂತನವಿಚಾರವನರಿದು ಮೇಲೆಪೇಳ್ವುದುಸುಮಂತ್ರಮೆನೆ ಕರಣಿಕಚಯಂ || ಅಂತದನೊಡಂಬಟ್ಟು ಪರೆದರಿತ್ತಲ್ಮಂತ್ರಿ | ಪಂತಿಸುಳಿಯಿಪ್ಪುಗರೆಡೆಗೆಯ್ದಿತಾಂ ಸಾಷ್ಟಾಂಗ | ದಿಂ ತುಳಿಲ್ಗೆಯ್ದುರ್ಬುತುಂಕೊರ್ಬುತುಂ ತದ್ಗಣಾಳಿಯಂಗೃಹಕೆತಂದು || 53 ||

ಪ್ರತ್ಯೇಕಮಾಗಿಚರಣಕ್ಷಾಲನಂಗೆಯ್ಸಿ|ಯತ್ಯಂತವೋಹದಿಂಪಾದಾಂಬುವಂಧರಿಸಿ|ಮೃತ್ಯುಂಜಯನಭಕ್ತರಂ ನಿಜಗೃಹಾಂತರಕ್ಕೆಯ್ದಿಸಿಪರಮಹರ್ಷದಿಂ|| ನೃತ್ಯಮಾದುಜ್ವಲಾಸನದಲ್ಲಿಕುಳ್ಳಿರಿಸಿ | ಛೀತ್ಯಾದಿಚಿಪ್ನಂತನಗೆತೊಡಿಗೆಯಾಗೆ ಕೃತ | ಕೃತ್ಯನಾದೆನೆನುತ್ತೆ ಪೊಂಗುತುಂಪೊರೆಯೇರುತುಂನುತಿಸಿ ಶರಣತತಿಗೆ || 54 ||

ಪರಮಸಾಂಗೋಪಾಂಗ ಮುಜ್ವಲಿಸೆಲಿಂಗಾವ | ಸರಮನಾಗಿಸುಕೆ ದಿವ್ಯಾನ್ನಮಂ ಪಾಯಸಮ | ನುರುಶಾಕಮಂಪಾಕಮಂ ಭಕ್ಷ್ಯಮಂಕಲಸಿದ ಪನುಪ್ಪುಗಾಯ್ವಳಗಮಂ || ಕರಮೆಸೆವಕಮ್ಮನೆಯ ತುಪ್ಪಮಂಚಿಲುಪಾಲ | ನರರೆಕೆನೆಮೊಸರ ಕರಣೆಯನಳಿಕಡೆಯೆನಿಪ್ಪ | ವರಷಡ್ರಸಾದಿಗಳನೊಲ್ದು ಬಡಿಸಲ್ಕವರ್ ಸ್ವಚ್ಛಂದವೃತ್ತಿಯಿಂದೆ || 55 ||

ಲಿಂಗಭೋಗೋಪಭೋಗಿಗಳಾಗಿ ಸವಿಗಪ್ಪ | ರಂಗೂಡಿಮೆರೆವತಾಂ ಬೂಲಮಂಗ್ರಹಿಸಿವಿಮ | ಲಾಂಗನಂಸತ್ಕೃಪಾಪಾಂಗನಂ ಪದ್ಮರಸನಂಶರಣ ಜನಸರಸನಂ || ಮಂಗಲಾತ್ಮನೋರ್ಡಿನೋಡಿ ತಣಿಯದತವಕ | ದಿಂಗಾಡಿಯಿಂ ಪೊಗಳ್ದರೆಲೆಜಂಗಮಸ್ನೇಹಿ | ಜಂಗಮಾರಾಧನೋತ್ಸುಕಜಂ ಗಮಪ್ರಾಣಿಜಂಗ ಮಾಮರಭೂರುಹಾ || 56 ||

ಭೂಪುರೇಶರಣ ಮಾನಸಶಯ್ಯನೀಸೀಮ | ಹೀಪಾಲನಾರ್ಥ ಮೊಗೆದಭು ವನಲ್ಲದೆಜಗ | ದ್ವ್ಯಾಪಾರಿಗಳೊಳೋರ್ವನೇ ನಿನ್ನನೋಟವಘದೋಟಮತ್ತೇ ಯೆನುತ್ತೆ || ಈಪರಿಯೊಳಭಿನುತಿಸುತಿರೆ ಕೇಳ್ದುಕರ್ಣಯುಗ |ಕಾಪರಮಪುರುಷ ನೊಂದಿಸುತೆ ಹಸ್ತಮನೆಲೆಲೆ | ಪಾಪದೂರರಿರ ನಿಮ್ಮಯೆಡಿಂಗರಿಗನೊಳಿನಿತೇ ಕೆನುತೆಭಯಭಕ್ತಿಯಿಂ || 57 ||

ಬಳಿಕೆಚರಣಾಬ್ಜದೊಳ್ಬೀಳ್ದು ತದ್ಭಕ್ತಸಂ | ಕುಳದಕರುಣಂಬಡೆದು ಶಿವ ರಹಸ್ಯಾನುಭವ | ಜಳಧಿಯೋಳ್ತಾನುಮವರುಂಕೂಡಿ ಮೂಡಿಮುಳುಗಾಡಿಕಡು ಗಾಡಿವಡೆದು || ವಿಳಸದವಿಕಲ್ಪಪರಿಪೂರ್ಣಾದ್ವಿತೀಯನಿ | ರ್ಮಳಚಿದಾನಂದಾ ತ್ಮನಾಗಿಸಮ್ಯಕ್ಕ್ರಿಯೋ | ಜ್ವಳವೃತ್ತಿಯಂಪ್ರತಿಷ್ಠಿಸುತೆಪದ್ಮರಸಾರ್ಯನೀ ಪ್ರ ಕಾರದೊಳೊಪ್ಪಿರೆ || 58 ||

ಮದಕುಧರವಿದಳನಭಿದುರಪರಮ ಶಿವಭಕ್ತ|ಪದಶತದಳಾದಭ್ರಮಕರಂದ ಲೀಲಾಪ್ರ|ಮದಪರವಶೀಭೂತಮಧುಕರೋಪಮ ಪದ್ಮಣಾಂಕಪ್ರಣೀತಮಾಗಿ| ಸದಮಲಾಖಿಲ ಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರಪದ್ಮರಾಜಪುರಾಣ ಕಥೆಯೊಳಿಂ | ತಿದುಹರೀಶನಚರಿತಮುಖ ಚರಾರಾಧನಮುಮೊಪ್ಪುವೈದನೆಯ ಸಂಧೀ || 59 ||

ಈಶಾಪರಾವತಾರನ ವಿಬುಧನುತನಭವ | ಪಾಶನಾಶಕಕೆರೆಯ ಪದ್ಮಣಾರ್ಯನಲಸ | ಚ್ಛ್ರೀಶಿವಾದ್ವೈತ ಸಾಕಾರಸಿದ್ಧಾಂತ ಪ್ರತಿಷ್ಠಾಪನಾಚಾರ್ಯನ|| ಈಶುದ್ಧಚರಿತಮಂ ತಿಳಿಪಿದಗೋರ್ದಿದ | ಗಾರ್ಶೆಯಿಂಕೇಳ್ದರ್ಗ್ಗೆ ಭುಕ್ತಿಮುಕ್ತಿಗಳಂಮ | ಹಾಶುಭಂಗಳನಾಯುಮಂಕೊಟ್ಟು ಗುರುರೂಪವಿಶ್ವನಾಥಂರಕ್ಷಿಪಂ || 60 ||

ಅಂತು ಸಂಧಿ 5 ಕ್ಕಂಪದ 337 ಕ್ಕಂಮಂಗಲಮಾಹಾ || ಶ್ರೀ ||

6 ನೆಯ ಸಂಧಿ.

ಶ್ರೀ ಗುರುರೂಪ ವಿಶ್ವನಾಥಾಯನಮಃ.

---

ಕರ್ಣ್ಣೇಜಪರದುರಾಲಾಪಮಂ ಭೂಪನಾ | ಕರ್ಣಿಸಿ ಕೆರೆಯನ್ನೀಗಳೆಮಗೆತೋರೆನೆ ಭೂಜ | ನರ್ನುತಿಸಲಾಕ್ಷಣಂ ಕೆರೆದೋರಿಪದ್ಮಣಾರ್ಯಂ ಸ್ವತಂತ್ರತೆಯೊಳೆಸೆದಂ || ಪದ ||

ಚಿನ್ಮೂರ್ತಿನಿರ್ಜರಸರಿನ್ಮಸ್ತಕತನೂನೆ | ಪಾನ್ಮಿಹಿರಶಶಿನೇತ್ರ ಮನ್ಮಥಾರಿಪುಲೋಮ |ಜಿನ್ಮೇನಘನರಸಜಜನ್ಮಾದಿಸುರನುತ ವಿಯನ್ಮಣಿಸುತಸ್ಮಯಹರಾ|| ಸನ್ಮುನಿನುತಾಂಹಃಸಖಿನ್ಮಾರುತಾಪ್ತ ಬಲ| ವನ್ಮದಗಜಾಸುರ ಕುಭೃನ್ಮಹಾಶನಿಸಮುದ್ಯನ್ಮುಕ್ತಿದಾಯಕ ವಿಪನ್ಮಿತ್ರಜಯಜಯಲಸನ್ಮಹಿಮ ವಿಶ್ವನಾಥಾ ||1||

ಮಲಹರಪ್ರತಿಮ ಪದ್ಮರಸದಂಡೇಶ್ವರಂ | ಕೆಲವುಪಗಲೀತೆರದೊಳಿರ್ದೊಂದು ರಾತ್ರಿಯೊಳ | ತುಲವಿಭವದಿಂದೆ ನೃಪಸಭೆಗೆಯ್ದಿ ತತ್ಕೃತ್ಯಮಂತೀರ್ಚ್ಚಿಗೃಹಕೆಬಂದು || ವಿಲಸದೀಶಾನುಭವಯೋಗದಿಂದಿರಲಿತ್ತ | ಪಲವುಪಿಸುಣಪ್ರಾರ್ತಕರ್ನೆರೆದು ತಾಮೆಲ್ಲ| ರೊಲವಿನಿಂಮಂತಣಂಗೊಳುತೆ ಗುಜುಗುಜುಗುಟ್ಟೈಕೃತನಿಶ್ಚಯಾರ್ಥರಾಗೀ || 2 ||

ಭಂಡಾರದರ್ಥಮಂಸೂಳೆಗಂಗಿತ್ತು ಮುಂ | ಕೊಂಡದಕ್ಕೊಂದು ಬಗೆಯಂಬೇರೆನೆಗಳದು | ದ್ದಂಡವೃತ್ತಿಯೊಳಿಳಾಪತಿಯನಿನಿಸುಂ ಲೆಕ್ಕಕಿಕ್ಕದಾಪದುಮಿದೇವಂ || ಗಂಡುಗೆಲೆವುತ್ತಿರ್ಪನಂತದಂನಳಿ ಭೂ | ಮಂಡಲೇಶಂಗರಿಪಿ ತನ್ನನಾಸ್ಥಾನದೊ | ಳ್ಖಂಡಿಸಲ್ವೇಳ್ಕು ಮಿದನೆಂತುಠಕ್ಕಿಪನೆಂಮಮೂಲೆಗಹಹಾಸಿಲ್ಕಿದಂ || 3 ||

ಎಂದುಬ್ಬುರ್ತುಂಕೊರ್ಬುತುಂ ಕುಜನರಹವಿಗಿ | ಚ್ಚಂ ದಿಟಂಕೆಡಿಸ ಲೆಂದುಜ್ಜುಗಿಪ ತರಗೆಲೆಗ | ಳಂದದಂ ತಶನಿಯುಕ್ಕರ್ಗಂ ನಿಲಿಸಲೆಂದೂಹಿಸುವ ಕುಧರನಿಕರದಂತೆ || ಕುಂದದುದ್ಯದ್ಭಾಸ್ಕರಾಂಶುವಂ ನಂದಿಸ | ಲ್ಸಂದು ಬಗೆ ವಂಧಕಾರಾಳಿಯಂತೀಶ್ವರಾ| ನಂದ ವಿಕ್ರಮಪದ್ಮರಸರ ನುಡುಗಿಪೆವೆಂದುನೆನೆದರೇಂಪಾಪಾತ್ಮರೋ || 4 ||

ಇಂತುನೆನೆದಜ್ಞನಿರ್ಧಾನಮಂಪಡೆದಂತೆ | ಸಂತಸಂಗೊಳುತೆ ತಂತಮ್ಮ ಮನಗೆಯ್ದಿರ್ಪರ್ | ನಂತರದೊಳವರವಿಭವಕೆ ಮಿಳ್ತುಮೂಡಿತೋಎನೆ ಪೊಳ್ತು ಮೂಡಿಮೆರೆಯೇ || ಭ್ರಾಂತರೇ ಳ್ದೆಂದುವುಂ ಪೂಳ್ವಕರ್ಮಾಳಿಗಳ | ನಂತಂತೆನೆಗಳ್ದು ಬಳಿಕೋರ್ವರ್ೋರ್ವರಾಗಿ ಭೂ | ಕಾಂತನೋಲಗಕೆ ಗಮನಿಸಿತನ್ನೃಪಾಲನಂಕಂಡು ಕುಳ್ಳಿರ್ದುರ್ಮುದದಿಂ|| 5 ||

ಒಂದಿನಿಸುಪೊಳ್ತನಂತಿಂತು ಕಳೆದವನಿಪಂ | ಗೆಂದ ದುರ್ರಾತ್ಮರೆಲೆಭೂಪಾಲಬೇಲೂರೊ | ಳಂದು ನೀಂಕಟ್ಟಿಸಲ್ವೇಳ್ದಕೆರೆಯಾದುದೇಎನೆಭೋಂಕನರಿದುತ್ತಿರಿಗೀ || ಇಂದುವರವಾಗದಿರ್ಪುದೆ ಎಂದುತತ್ಸಚಿವ | ವೃಂದದಾಸ್ಯಂಗಳಂನೋಡಿ ಬೆಸಗೊಳಲೊಡಂ | ನಿಂದುಬಿನ್ನವಿಸಿದ ನೃಪತಿಕೇಳ್ಪದ್ಮರಸಮಂತ್ರಿ ಕೆರೆಗೆಂದು ನುಡಿದು || 6 ||

ಮೇಲೆಪನ್ನೆರಡುಸಾಸಿರಪೊಂಗಳಂತರಿಸಿ | ಬೇಲೂರವಂಗೆ ಕುಡುವವಸರದೊಳೋರ್ವ ವೇ | ಶ್ಯಾಲೋಲ ಜಂಗಮಂಬಂದುಬೇಡಲೊಡಮಾಧನವಿತ್ತುಕೂಡೆಶರಣ || ಜಾಲಮದುಬಂದುದೆನೆ ಕೇಳ್ದಲ್ಲಿಗೆಯ್ದುತೀ|ಕಾಲಕ್ಕೆ ನಡೆಯೆಂದವಂಗುಸಿರ್ದು ಕಳಿಪಿದುದ | ನಾಲೋಕಿಸುತೆ ತಮ್ಮಹಸ್ತಾಂತರವನಿಕ್ಕಿ ಬರೆದುಕೊಂಡಂತದರ್ಕೆ || 7 ||

ಮತ್ತೊಂದಬಗೆಗಾಣ್ಬನೋಯನುತ್ತಳ್ಕಿ ನಿ | ಮ್ಮತ್ತಲರಿಪಿಸಿದುದಿಲ್ಲಿನಿತರಿಂ ಮೇಲಾದ | ವೃತ್ತಾಂತವೇನೆಂದರಿಯೆವೆಂದು ಕರುಣಿಕರ್ನುಡಿಯೆ ಪಾದಿಗಳುಲಿವುತೇ || ಚಿತ್ತವಿಸುನೃಪತಿಮಂತ್ರಿಪನ ಮೆಯ್ಯೊಳಗೆಳ್ಳ | ನಿತ್ತಾದೊಡಂ ಭೀತಿಯಿರ್ದಪುದೆಪಲವುಪರಿ | ಯುತ್ತರವದಂತಿರ್ಕೆ ನಿನ್ನನೋರ್ವರ್ದದಲೊಡೆಯನೆಂದು ಲೆಕ್ಕಿಸಬಲ್ಲನೇ || 8 ||

ಸ್ವಾಮಿಭೃತ್ಯಾಚರಣಮುಳ್ಳೊಡಯ್ಯಯ್ಯ ನಿ | ಮ್ಮಾ ಮಹಾಕೋಶದರ್ಥಂದೆಗೆದುತಂದಿಂತು | ಕಾಮುಕಂಬೇಡೆಕೊಡುವನೆ ಕೊಟ್ಟೊಡಂಕುಡುಗೆಬೇರೊಂದು ರೀತಿಯಿಂದೇ || ಭೂಮಿಾಶಕೆರೆಗಟ್ಟಿಸದೆಕೆಮ್ಮನಿರ್ಪನೆ ಬಿ | ಡಾಮಾತನೀಯುಪಖ್ಯಾತಿಲತೆ ಚತುರಬ್ಧಿ | ಸೀಮಾವಸಾನಂಬರಂ ಪರ್ವಿಪರಕಲಿಸದೇನೀನೆಪೇಳೆಂದೆನೆ || 9 ||

ಭೂಪನಾದುರ್ಜನರದುಷ್ಟೋಕ್ತಿಯಂಕೇಳ್ದು | ಕೋಪವೇರೂಪಾದವೋಲ್ ಛಟಿಲೆನುತ್ತೆ ನಾ | ಸಾಪುಟದೊಳತ್ಯುತ್ಕಟೋಛ್ವಾಸಮುಣ್ಮೆ ಕಡೆಗಣ್ಕೆಂಪನಾಂತುಚಲಿಸೆ || ಅಪುರ್ವಗಂಟಿಕ್ಕಿದಷ್ಟೋಷ್ಠದಿಂ ಹೂಂಕೃ | ತೋಪಚಿತಕಂಠನಾಗುತೆಮಿಾಸೆಕುಣಿಯೆ ಭ | ಕ್ತಾಪರಾಧಕ್ಕಲಸದುದ್ರೇಕದಿಂ ದೋರ್ವಚರನನೀಕ್ಷಿಸುತೆಪೇಳ್ದಂ || 10 ||

ನೀಂಬೇಗದಿಂದೆಪದ್ಮರಸರಂ ಕರೆದುತಾ | ರೆಂಬುದುಮವಂಭೋಂಕನಿವರ ಬಾಗಿಲ್ಗೆಯ್ದಿ | ತಾಂಬಂದಹದನ ನೊಳಗಣ್ಗೆಯ್ದು ವರೊಳೊರೆದುಕಳಿಪೆಯವರಾವಾರ್ತೆಯಂ || ಶಂಬರಾರಿಪ್ರಹರರೂಪಂಗೆ ಪೇಳಲೊಡ | ನೆಂಬಣ್ಣೆಪೆಂ ಶರಣಜನವಿಯೋಗವ್ಯಥೆಗೆ | ಬೆಂಬೀಳ್ದುಬೇಳಾಗಿಪಂಬಲಿಸಿ ಹರಹರಾವಿಶ್ವನಾಥಾಯೆನುತ್ತುಂ || 11 ||

ಸ್ವಾತಂತ್ರ್ಯಚರಿತಭಕ್ತೇಪ್ಸಿತಾರ್ಥ ಪ್ರದಾ| ಯಿಾತೆರದ ಮಣಿಹಕಾನಾರ್ಪೆನೇನಿಜಚಿತ್ಸು | ಧಾತಿಕ್ರಮಣಮಾಗಿ ಬರ್ಪ್ಪಭಾಗ್ಯಂಶ್ಲಾಘ್ಯಮೋ ಯೋಗ್ಯವೇನೊಲ್ವರೇ || ಮಾತೇನಿದಂತೊಲಗಿಸಯ್ಯ ಕರುಣಾಬ್ಧಿ ಯೆಂ | ದೋತುಭರ್ಗಂಗೊಡಂಬಡಿಕೆಯಂ ಪೇಳ್ದು ಭ | ಕ್ತ್ಯಾತುರದಿನೀಶಭಕ್ತರ್ಗೆಮೆಯ್ಯಿಕ್ಕಿಬೀಳ್ಕೊಂಡು ಪೊರಮಟ್ಟುಗೃಹಮಂ || 12 ||

ರುದ್ರಾವತಾರನಾರಂಲೆಕ್ಕಿಸದೆ ಭವನ | ಭದ್ರಗಜದಂತೆ ಬಂದಾಸ್ಥಾನಮಂ ಪೊಕ್ಕು | ಸದ್ರುಚಿರಮಾದತನ್ನೆಂದಿನಾಸನದಲ್ಲಿ ಕುಳ್ಳಿರೆನೃಪತಿಯಿಾಕ್ಷಿಸಿ || ರೌದ್ರಮುಖದಿಂದಾಗ್ರಹಿಸುತೆಂದನೆಲೆಲೆ ನಿನ | ಗುದ್ರೇಕವೇಕಿನಿತು ಕಟ್ಟೊಡೆಯನಾನಿರಲ್ | ಛಿದ್ರವೃತ್ತಿಯೊಳೆನ್ನ ಕೋಶಧನಮಂ ಸೂಳೆಗಂಗೀವಪರಿಯದೆಂತೋ || 13 ||

ನಿನ್ನನೀಶ್ವರಭಕ್ತನೆಂದುಸುವಿನೀತನೆಂ| ದುನ್ನತ ವಿವೇಕಿಯೆಂದತ್ಯಮಲಗುಣಿಯೆಂದು | ನನ್ನಿಯುಳ್ಳವನೆಂದುಪರರೊಡವೆಗಳುಪದಿರ್ಪ್ಪತಿಶುದ್ಧನೆಂದುನಂಬೀ || ಎನ್ನಸರ್ವಸ್ವಮಂನಿನಗೊಪ್ಪುಗೊಟ್ಟೆನಗೆ | ಚಿನ್ನಾಗಿಕಾಣಿಸಿದೆಯೆಂಬಬಲಲ್ಲಳನಂ | ತಾಂನಿರೀಕ್ಷಿಸಿಪದ್ಮರಾಜಾಂ ಕನಿದಿರೆರ್ದಗಳೊಡೆವಂತಿರಿಂತುನುಡಿದಂ || 14 ||

ದುರ್ಜನರ ದುರ್ವಿದಗ್ಧರ ದುರಾತ್ಮರ ಧರ್ಮ | ವರ್ಜಿತರ ಮಾತುಗೇಳ್ದಿಂತುದೂಷಿಸಿ ನೀನು |ಪಾರ್ಜಿಸಿದಪುಣ್ಯಮಂ ಕೆಡಿಸಿಕೊಳ್ವರೆ ಶಿವಪದರ್ಥರ್ಶರಣ ರೂಹಿಸೆ || ನಿರ್ಜರೇಂದ್ರಾದಿಭೋಗಂಗಳಂ ತೃಣಕೆಣಿಪ | ದರ್ಜನಪನಿಂನೊಡವೆಗೆಳಸುವರೆ ನಿನಗಿದ | ತ್ಯೂರ್ಜಿತವೆನಿಪುದೈಸೆ ಷಡ್ಗುಣೈಶ್ವರ್ಯಸಂಪನ್ನನಣುಗರ್ಗೆಪಿರಿದೇ || 15 ||

ಬಾವನ್ನಮಂಪೊರೆದುರಂಜಿಸುವ ರಸಿಕನಿರ | ದೋವೊಕಿಸುಕುಳವನೇಂಪೊರೆವನೇದಿವ್ಯ ಕಾಂ | ತಾವಿನುತ ಸುರತಾನುಭವಿಪಡಿಕೆದೊಳ್ತಿಂಗೆರಮಿಸುವನೆ ಪರಮಾನ್ನಮಂ || ಸೇವಿಸುವಭೋಗಿಕಲಗಚ್ಚಿಂಗೆ ಮೋಹಿಸುವ | ನೇವಿಪುಲಸಿಂಹಶಿಶುನಾಯಮೊಲೆಯುಂಬುದೇ | ಭೂವರಾಬಿಡುಬಿಡಾಸಂದೇಹಮಂ ಶರಣರನ್ಯಧನಕಿಚ್ಛೈಪರೇ || 16 ||

ಪೊಡವಿಬಾಯ್ಬಿಟ್ಟುನರರಂತಿಂಬೊಡಂ ಮೇಗ | ಣಡಿಕಿಲಾಗಿರ್ದಜಾಂಡಂಗಳೊಂದೊಂದಾಗಿ | ನಡುನೆತ್ತಿಯೋಳ್ಬೀಳ್ವೊಡಂ ಮಾತೃಕಾಕುಚಕ್ಷೀರಂ ಗರಳಮಾದೊಡಂ || ಪುಡಿದವೂಮಾಲೆಯುಗ್ರವ್ಯಾಲನಾದೊಡಂ | ಕಡೆಗೆಶಶಿಮಸಿಯಾದೊಡಂ ಮಲಯಮಾರುತಂ | ಸುಡುವಕಿಚ್ಚಾದೊಡಂ ಶಿವಭಕ್ತರಿತರಧನ ಕೆಳಸುವರೆಧಾತ್ರೀಧವಾ || 17 ||

ಪಲವುಮಾತೇಂಮುಳಿದೊಡಾಬ್ರಹ್ಮನಂ ತೃಣ | ಕ್ಕೆಲೆಲೆಕೀಳ್ಮಾಳ್ಪರೊಲ್ದೊಡೆತತ್ತೃಣಮನೋವೊ | ವಿಲಸಿತಬ್ರಂಹಂಗಧಿಪ ಮೆನಿಪರೆಂತೆಂದೊಡೆಮ್ಮದೂರ್ವಾಸಮುನಿಪಂ || ಬಲರಿಪುಗೆಮುಳಿದವನ ಸಿರಿದೆಗೆದುಬಿಸುಡನೇ | ಜಲಸಿಧಿಯೊಳುಪಮನ್ಯು ಹರಿಗೆಕರುಣಿಸಿಮೃಡನ | ನೊಲಿಸಿಪಡೆದಮೃತಾಬ್ಧಿಯಂಕುಡನೆಅದರಿಂಶಿವೈಕ್ಯರ್ಗೆದೇಂಲಕ್ಷ್ಯಮೇ || 18 ||

ಲಲಿತನವನಿಧಿಕಾಮದುಘಕಲ್ಪಕುಜಸಮು | ಜ್ವಲ ಮೇರುಪರುಷ ಚಿಂತಾಮಣಿಗಳೆಂಬಿವೆಂ | ಮಲಹುಮಾಹೇಶ್ವರರ ಕಣ್ಸಂನೆಯಿಂ ದೊಗೆವವಳಿವವೆನಲಾಮುಹಿಮರಾ || ಸುಲಭಾಂಘ್ರಿಭೃತ್ಯನಾದಾಂ ನಿನ್ನವಿತ್ತದೊಳ್ ತಿಲದನಿತುವಂ ಮುಟ್ಟುವೆನೆಲಿದಂ ಮುಟ್ಟಿದೊಡೆ | ಮಲಹರನ ಭಕ್ತರೊಲ್ಪರೆ ಅವರವಿತ್ತಮನವರ್ಗೊಪ್ಪಿಸಿದೆನೆನುತ್ತೇ || 19 |

ಈಪಥದೊಳೊರೆದಪದ್ಮರಸರ ದೃಢೋಕ್ತಿಯಂ | ಭೂಪಾಲನಾಲಿಸುತ್ತಕ್ಕಕ್ಕಮಿಂತಪ್ಪ | ಪಾಪಭೀತರ್ಸಮರ್ಥರ್ಸತ್ಯರೀ ಧರೆಯೊಳೊಳರೆನೀವಳಿಪುವವರೇ || ಕಾಪುರುಷರಿವರನುಡಿಗಳ್ದಿಟಮೆನಿನ್ನಸ | ಲ್ಲಾಪವೇದಿಟಮಪ್ಪವಂತಾದೊಡೆವ್ಮ ಕೆರೆ | ಯೇ ಪರಿಯೊಳಿಪ್ಪುದುಸಿರೆಂದಣಕವಾತಿನಿಂಬೆಸಗೊಳ್ಪನಿತರಲ್ಲೀ || 20 ||

ಅರಿವರುಳರಾದವಾಡಿಗಳೆಂದರೆಲೆ ಭೂಪ | ಕೆರೆಯವ್ಮಾತೇಂಗ್ದೇಗಳ್ಪಿತ್ತಿಯಂಕುರಿಸಿ | ಮಿರುಗುತವೆ ತೋಂಟದೊಳ್ಕ್ರಮುಕಾದಿಗಳ ಸಸಿಗಳೆಸೆವುತವೆ ತದ್ವಿಭವಮಂ || ಮರೆಯೇಕೆನೀಂನೋಡಲೆಯ್ದುವುದೆತಳ್ವೆಂಬ | ಕುರಿವಾನಿಸರಕುಯುಕ್ತಿಗೆ ನಸುನಗುತೆಧೀರ | ರೆರೆಯಪದ್ಮರಸಾಂಕನಾಮಹಾಸಭೆಯೊಳಂತೆಂದನದನೇಂವಣ್ಣಿಪೆಂ || 21 ||

ಕಪಟನಾಟಕಸೂತ್ರಧಾರಿ ಗುರುರೂಪ ವಿ | ಶ್ವಪತಿಯಾಡಿಸಿದೊಡಾಡಿದರಲ್ಲದಕಟಪರಿ | ಕಿಪ್ಪೊಡೀತೊವಲಬೊಂಬೆಗಳ್ತಾಮೆಯಾಡಲ್ಸ್ವತಂತ್ರರೇಪಲವುಮಾತೇಂ|| ನೃಪತಿಕೇಳಿವರೆಂದ ವ್ಪೋಲ್ಗದ್ಕೆರೆತೋಂಟ| ವಪರಿಮಿತವಿಭವದಿಂದೆಸುವುತವೆತೋರ್ಪೆ ನೇ | ಳುಪಮಾನವೇಹೆನುತೆ ಮತ್ತಮೊರೆದಂಪದ್ಮ ಸಾರ್ಯನೇನಕಲಂಕನೋ || 22 ||

ಮೊದಲಿಸಿದಾಕ್ಷಣವೆತೋರದಿರ್ಪುದುಭರ್ಗ | ಪಾದಾಂಬುಜಾರ್ಚಕರ ಪದ್ಧತಿಯೆ ಪುಸಿದೊಡೆ ಮ | ಹಾದೇವನಣುಗರೆನ್ನಂ ತಮ್ಮಡಿಂಗರಿಗನೆಂಬರೇ ಶಂಕಿಸಿದೊಡೇ || ಮೇದಿನೀಶಾಗುರುಕುಲಜನೆನಿಪೆನೇ ಬಿಡವ | ನೋದಲೇಂನೋಳ್ಪುಡೇಳೇಳೆನುತ್ತುರವಣಿಸಿ | ಯಾದಿಪುರುಷಂನುಡಿದನಯ್ಯಯ್ಯ ಸದಾ ವಶುದ್ಧಿಯಂತಾಗವೇಡಾ || 23 ||

ಅಂತುಸಿರ್ದಪದ್ಮರಾಜಾರ್ಯವರ್ಯನ ಮುಕ್ತಿ | ಕಾಂತಾಧವನನಿಶ್ಚಲೋ ಕ್ತಿಗೇಳ್ದಂ ಮಹೀ | ಕಾಂತನಜ್ಞಾನದಿಂದುರ್ಜನರ ದುಸ್ತಂತ್ರಕೊಳಗಾಗಿ ಯುಕ್ತಿಗೆಟ್ಟು || ತಿಂತಿಣಿಸಿಸುರಿವಮೇಘಾಗಮದ ಮಳೆವನಿಗ | ಳಂತವೆಗಣಿ ತದಿಂ ಪರೀಕ್ಷಿಸುಷ್ಚೆನೆಂಬಜ್ಞ | ನಂತಿದಂ ಪರಿಕಿಸುವೆನೆಂದೇಳ್ದನಕಟಕಟದು ರ್ಬೋಧಮೇಗೆಯ್ಯದೋ || 24 ||

ಭರದಿಂಪ್ರಯಾಣಭೇರೀರವಂಗೆಯ್ಸಿ ಭೂ | ವರನೊಳಗಣಿಂದೆಪೊರಮ ಡೆಶಿವಶಿವಾ ಕೂಡೆ | ನೆರೆದುದೇನೆಂಬೆ ನಿಳೆಯನಿತುಂ ಮನುಜರೂಪದಿಂ ವಿಕರಿ ಸಿತೊಗುರುವರಂ || ಅರಿದೆನಿಸಿನೆಗಳ್ವಬಲ್ಗರೆಯ ನಿದಿರ್ಗೊಳಲೆಂದು | ಪರಿಕರಿ ಸಿಮೊದಲೆನಡೆವಂದವೋಎನೆ ಬಹಳ | ತರದಿಂ ವಿಭವದಿಂದೆಸೆವಬಲಂ ಬೆರ ಸರಸುವಾರುವನನಡರ್ದುನಡೆಯೇ || 25 ||

ಜಾತ್ಯಶ್ವಮಂಜಾಣ್ಮೆ ಮಿಗಿಲೇಱ ಪದ್ಮಣಾ | ಮಾತ್ಯನುಂ ಬಲ್ಲಾಳರಾ ಯನ ಸಮೀಪದೊಳ | ಗತ್ಯಂತ ಶಿವವಿಕ್ರಮಾಡಂಬರದೊಳಾರುಮಂ ಗಣಿಸದೆ ಯುದ್ದತ್ತಿರೆ|| ಭೃತ್ಯಭೇದ್ಯನ ಶರಣರೀವಾರ್ತೆಗೇಳ್ದು ತ | ತ್ಕೃತ್ಯೈಕರಚಲನಿ ಷ್ಠಾಹೃದಯರಾಗಿ ಕೃತ | ಕೃತ್ಯತೆಯಿನೊಡನೆನಡೆದರ್ ಸಮಯಪಕ್ಷವಿನಿತಿ ಲ್ಲದಶಿವಭಕ್ತರೇ || 26 ||

ವರದಂಡನಾಯಕರಮಂಡಲಾಧಿಪರ ಸಚಿ | ವರ ಮಕುಟವರ್ಧನರ ರಾಜಪುತ್ರರ ರಾವು | ತರ ನಿಯೋಗಿಗಳ ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳರಸಿಕರ || ಭರತಾದಿಶಾಸ್ತ್ರಕೋವಿದರ ಷಡ್ದರ್ಶನ | ಸ್ಥರಕಲಾವಿದರ ಪಲವೇನಿವರ್ಮೊದಲಾದ | ಕರವೊಪ್ಪುವೆಪ್ಪತ್ತೆರಡು ನಿಯೋಗದವರಕುಲಂ ನೃಪನೊಡನೆನಡೆದುದೂ || 27 ||

ಕರಿಘಟೆಗಳೋ ಕಾಲಗಿರಿಗಳೋಳಿಗಳೊಗ | ರ್ಘರ ಝಣತ್ಕೃತಿಪೊ ಣ್ಮೆ ಕುಣಿವಕುದುರೆಗಳೊ ಭೋ | ರ್ಗರೆವ ಸಂವರ್ತಾಂಬುಧಿಯ ಪೇರ್ದೆರೆಗಳ ಸಂದಣಿಯೊ ನೂಂಕುವತೇರ್ಗಳೋ || ಮರುದಧೀನದೆಚಮತ್ಕರಿಸಿ ನೀರ್ವಟ್ಟೆ ಯೊಳ | ಗಿರದೆಚರಿಸುವ ಪಡಂಗುಗಳಗಡಣಮೊ ನರರ | ಪರಿಕರವೊ ಕಾಲಭೈ ರವನ ಬಹುರೂಪವೋಎನೆ ಚತುರ್ಬಲಮೆಯ್ದಿತೂ || 28 ||

ಅಂತಾಬಲದಕೂಡೆಪರಿಜನಂ ಪುರಜನಂ | ತಿಂತಿಣಿಸುತೆಯ್ದಿ ತಾಬಲ ಭೂರಮಂಡಲಾ | ನಂತಿಂತನಿತ್ತಿನಿತ್ತೆಂದುಸಿರಲರಿಯೆನೋಕದುಂಟೆದೆಂತೆನೆಭೂಮಿ ಯಂ || ಅಂತಕರಿಗಿರಿಫಣಿಪಕಮಠ ಸಂತತಿಮಹಾ| ಶ್ರಾಂತಿವೆತ್ತೀಶನನಿವೃತ್ತಿಕ ಲೆಯಂ ಸ್ಮರಿಸು | ತುಂತಿರ್ದ್ದವೆಂಬಿನಿತನರಿವೆ ನಿದರಿಂಮೇಲೆಕಾಣ್ಬಯುಕ್ತಿಗಳ ವೆಂತೊ || 29 ||

ಅರಿದೆನಿಸುವಾ ಮಹಾಸೇನಾಸಮುದ್ರಕ್ಕೆ| ವರುಣನಂತಮರ್ದು ಬಲ್ಲಾ ಳರಾಯಂಪರಿ|ಸ್ಫುರಿಸುತೆದಿಶಾತಟಮನಲೆದು ಘುಮುಘುಮಿಪಬಹುವಾದ್ಯಧ್ವನಿ ಗಳೆಸಕದಿಂ || ಪರಮವೈಭವಸಹಿತನಾಗಿ ಬೇಲೂರ್ಗೆಯ್ದು | ತಿರಲೊಡನೆನಡೆವ ಪರಿಜನಪುರಜನರ್ಮಹೀ | ಶ್ವರನನಾಕುಜನರಂ ಪದ್ಮರಸರಂನೋಡುತೋರೋ ರ್ವರನುಮಾನಿಸಿ || 30 ||

ಏನಪ್ಪುದೋಶಿವಶಿವಾ ಪದ್ಮಣಾಂಕಂಗ | ನೂನಕರುಣಾಳುಗಿಂದಿನ ದಿನದ ಪಾಯವೆನು | ತಾನಿರೋಧದೆಮರುಗುವ ಕೆಲರನಾರತಮವಂಭಜಿಸು ವಿಷ್ಟದೈವಂ || ತಾನಿಲ್ಲವೇಯೆಂಬ ವರ್ಕೆಲತ್ತರ್ನ್ನಚೇ | ತೋನಿಷ್ಠೆಯಂತಾ ನರಿಯದೀಮಹಾಪ್ರಬಲ | ಸೇನಾನ್ವಿತಂನೃಪತಿಯಂ ಕೊಂಡುಬರ್ಪನೇಯೆಂಬ ಕೆಲಂಬರಲ್ಲಿ || 31 ||

ಇಂದಿವನಮೇಲೆ ಪಿಸುಣಿಸಿದವರ್ಬಲ್ಲನ್ನ | ಮಂದಿಟಂತಾಳ್ವರಲ್ಲಡೆ ಯೀಮಹಿಮನಿನಿಸು | ಕುಂದನಾಂಪನೆಯೆಂಬ ವರ್ಕೆಲರಿದುವೆಸತ್ಯಮಾಕುಷ್ಠ ನೆನಿಪಯ್ಯನಂ || ಪಿಂದೆವಿಮಲಾಂಗನಂಮಾಡಿ ಸೆಣಸಿದಮಹೀ | ವೃಂದಾರಕ ಗ್ಗೆ ತದ್ರುಜೆಯನಿತ್ತೆರಗೆಕಾ | ಯ್ದಂದಮಂಕಂಡೆವಾಗರಿದಲ್ತು ಕೆರೆದೋಪ್ಪು ದೆಂಬಕ್ಕೆಲಂಬರಲ್ಲೀ || 32 ||

ಈಪಿಸುಣರೇನನಾದೊಡಮೊರೆಯೆಕೇಳ್ವೆಮ್ಮ | ಭೂಪನೆಂತಪ್ಪಜ್ಞನೋ ತಾನದೇನರಿಯ | ನೇಪರೀಕ್ಷಿಸಿಪಿಂದೆಪದ್ಮರಸರಳವನೆಂಬ ಕ್ಕೆಲಬರೀಮಾಳ್ಕೆ ಯಿಂ || ಆಪಥದೊಳುಸಿರುತೊಡವರೆ ತತ್ಸಮಸ್ತಸೇ | ನಾಪರಿವೃತೌಜ್ವಲ್ಯದಿಂ ಬಿಟ್ಟೆರಾಯನೆಂ | ಬೋಪಕುವರಂಬೆರಸು ಬಲ್ಲಾಳ ಭೂಭುಜಂಬೇಲೂರಪೊರಗೆ ನಡೆದು || 33 ||

ತನ್ನ ಬಲವಕ್ಕದೋಳ್ಮೆರೆವ ಪದ್ಮರಸಾಂಕ | ನಂನಿರೀಕ್ಷಿಸುತೆ ಕೆರೆಯೆಲ್ಲಿ ತೆನೆತತ್ತಟಾ | ಕೋನ್ನತಿಗೆಮುಂಕುರಿತತಾಣಕೊಡಗೊಂಡೆಯ್ದಿ ತೋಪ್ಪೆ್ನೀಸ್ಥಲದೊಳಿಂದು || ಓಂನಮೋವಿಶ್ವನಾಥಾಯಯೆನುತಾತೇಜಿ | ಯುಂನಿಶ್ಚಲಾತ್ಮನಿಳಿಯಲ್ಕಾ ನೃಪಪ್ರಮುಖ | ರಿನ್ನೆಮಗೆಪಡುವ ಮುಖವೆಂದದಂತೋರ್ಪಂತೆ ಪಡುವಮುಖವಾಗೆಬಳಿಕಂ || 34 ||

ಅರ್ಧಬಲನಾದೆನಾನಿ ನಿತರೊಳಗೆಲೆಕೃಪಾ | ವಾರ್ಧಿನೋಡೆಂದು ಪದ್ಮರಸರ್ಗೆ ತೋರ್ಪ್ಪಂತಿ | ರರ್ಧಚಂದ್ರಾಕಾರದಿಂ ತನ್ನ ಬಲವಂನಿಲಿಸಿ ನೃಪತಿಯಿರಲೀಕ್ಷಿಸಿ || ಅರ್ಧಚಂದ್ರನನಿವರ್ಪಡೆಯ ದಿರರೆನುತಿತ್ತ | ಲರ್ಧಚಂದ್ರಾಭರಣರೂಪನತಿಭಕ್ತಿಯಿಂ | ಸ್ವರ್ಧುನೀಧರಭಕ್ತತತಿಗೆ ಸಾಷ್ಟಾಂಗದಿಂ ನಮಿಸಿನಲವಿಂದೆತಂದು || 35 ||

ಹರಸಮಯಮುತ್ತರೋತ್ತರರೂಪಮಾಗಿನಿಲ್ವುದೀ | ಪರಿಯೊಳೆಂದದರಸೂಚನಮನಾವಾದಿಗ | ಳ್ಗರದೆತೋರ್ಪ್ಪಂತುತ್ತರಾಭಿಮುಖಮಾಗಿ ಶರಣಶ್ರೇಣಿಯಂ ನಿಲಿಸುತೆ || ನೆರೆದುಭಯಸಭೆಯಮಧ್ಯದೊಳೀಶ್ವರಜ್ಞಾನ | ಪರಿಮಳಸ್ಫುರಣಭಕ್ತ್ಯಂಬುಜಾಲಂಕೃತೋ | ತ್ಕರಮಸ್ತಕಂಶಿವಾದ್ವೈತ ಪ್ರತಿಷ್ಠಾಸ್ಯಪಟ್ಟಬದ್ಧೋರುಭಾಳಂ || 36 ||

ಶಿವಕಥಾಮೃತರಸಾಯನ ಪೂರ್ಣಕುಂಡವೈ | ಭವಕರ್ಣನುಭಯಲಿಂಗ ವಿಧಾನವೀಕ್ಷಣೋ | ತ್ಸವವಿಶಾಲಾಕ್ಷನೀಶಾನಂದಬಾಷ್ಪಾಂಬುಕಣಕಲಿತಗಂಡಸ್ಥಲಂ|| ಭವಿಮನುಜಮಧುಕರಾಸ್ಪೃಶ್ಯಗಂಧೋಚ್ಛ್ವಾಸ | ಸುವಿಲಸಚ್ಛಾಂಪೇಯ ಕೋಪಮಘ್ರಾಣನು| ತ್ಸವಕಾರಿಪಂಚಾಕ್ಷರೀವಧೂಲಾಸ್ಯ ರಂಗಸ್ಥಲೀಭೂತಜಿಹ್ವಂ || 37 ||

ಇವನಮುಖದಿಂ ಶಿವಾನುಗ್ರಹಮೆಸೆವುದದರಿ | ನಿವನಮುಖವಿದುಶಿವನ ಕಣ್ಣೆನಿಪುದೆಂದೂಹಿ | ಸುವವಿವೇಕಿಗಳೂಹೆಯಂಗಭೀರಸಿ ತ್ಕೊಳಗುವಕಲಂಕಚಂದ್ರಾನನಂ || ತವಕದಿಂ ಮುಕ್ತಿಕಾಂತಾಲಿಂಗನಂಗೆಯ್ವ | ಡಿವೆತಕ್ಕವೆನಿಸಿ ರಾಜಿಪಬಾಹುದಂಡನೀ | ಶವಿಪಕ್ಷವಾದಿಗಳ್ಗೆರ್ದೆಯೊಡ್ಡಿನಿಂದೋಡಿಸುವ ಸದ್ವೈರ್ಯೋರಸ್ಥಲಂ || 38 ||

ಪುದಿದಕೃತಿಚಿತ್ರೃತಿಷ್ಮೆಗೆ ನೆಟ್ಟವೆರಡುತೊಲ | ಗುದಕಂಬದಂದದೂರು ದ್ವಯಂದಶದಿಬ್ಮ | ಖದಿನೊಲ್ದುಬಂದೊಂದಿವಂದಿಸಿದ ರಾಸ್ವಸ್ವರೂಪಮಂ ತೋರಲಾರ್ಪ || ಪದನಖರನಿಕರಮುಕುರಂ ಶಿಷ್ಯಜನದಚಲ | ಹೃದಯಕಾ ಸಾರೋದ್ಭವಾಂಘ್ರಿಕಮಲಂ ಶುಭಾಸ್ಪದವಿಮಲಿನಾಂಗಯಷ್ಟಿ ಪ್ರೋಜ್ವಲಂಶಿ ವಾರ್ಪಿತಧವಲವಸ್ತ್ರರಚನಂ || 39 ||

ಭೂತಿತ್ರಿಪುಂಡ್ರರುದ್ರಾಕ್ಷಮಾಲಾಮಂಡಿ | ತಾತತೌಜ್ವಲ್ಯಾವಯವನಿತ ಶಮತತವೋ | ದ್ಧೂತಭಾಸ್ವತ್ಪ್ರಭಾವದಿನಮರ್ದುನಿಂದಾ ನೃಪಾದಿಗಳನೀಕ್ಷಿ ಸುತ್ತೇ || ಓತುಕೇಳ್ವುದುನಾಡೆನೆರೆದೀಸಭಾಜನ | ವ್ರಾತಮೆನ್ನಯೆಭಾಷೆಗಳ ನೆಂದು ಗುರುರಾಜ | ನೀತೆರದೊಳೆಂದನಿದು ಕೆಳೆಯಂದಕಿನಿತುಬಾರದೊಡಂಪ್ರ ವಿಸುತಿರ್ದೊಡಂ || 40 ||

ವೋಳೆಯೊಳಗುತ್ತಿರ್ದೊಡೇರಿ ಬಿರಿದಿರ್ದೊಡನು | ಕೂಲಬದ್ಧೋಪಲಂ ಗಳ್ಸಡಿಲ್ದಿರ್ದೊಡು| ತ್ತಾಳಸೋಪಾನಮಲ್ಲಲ್ಲಿಗಳ ವಡದಿರ್ದೊಡಂಬುತುಂಬಿರದಿ ರ್ದೊಡೇ || ಪೇಳಲೇಂತೂಬು ತೊಟ್ಟಿಗಳೆಸೆಯದಿರ್ದೊಡಾ | ಚಾಳಿಯೊಳ್ಪರಿ ಕಾಲ್ಗಳೀಳ್ಗಿದಪ್ಪಿರ್ದೊಡವ | ರೋಳಿಯಂಭೊವಾಟ ಮಾಪೈಸರಮುಮುದಕ ಸೂತ್ರಕ್ಕೆ ಹರಿಯಾದೊಡೇ || 41 ||

ಗರ್ದ್ದೆಯಮುಡಿಗಳೀಕ್ಷಿಪರ ಕಣ್ಗೆನಿದನೀಯ | ದಿರ್ದೊಡಲ್ಲಿಯಸಸಿಗ ಳೊಂದಿನಿಸುಕೊಂಕನಾಂ |ತಿರ್ದ್ದೊಡಾತೋಂಟವತಿಸಂಪನ್ನಿಕೆಯ ನಪ್ಪುಗೆಯ್ದು ಶಂಜಿಸದಿರ್ದೊಡೆ || ಮಾರ್ದನಿಯದೇಂವೊದಲ್ಕೆರೆಗೆ ಕುರಿತರ್ಥಮಿ | ಲ್ಲಿರ್ದ ಕೆಲಸಕೆ ನೆರೆವುದೇಯೆಂದುನೀವೆಲ್ಲ | ರಾದ್ಯರ್ಪೊಗಳ್ವಂತೆಸಗದೊಡೆ ಮಹಾದೇ ವನೇ ದೇವನೆಂದೆನಲಕ್ಕುಮೇ || 42 ||

ಹರಶರಣರೇಕುಲಜರೆನಲಕ್ಕುಮೇ ಮಹೇ | ಶ್ವರಭಕ್ತನಾನೆಂದುಲಿಯ ಲಕ್ಕುಮೇ ಬಳಿಕೆ | ಪರಧನಾದಿಗಳಭಕ್ಷ್ಯದ್ರವ್ಯತತಿಗೆಣೆಶಿವಾರ್ಚಕರ್ಗೆನಲ ಕ್ಕುಮೇ || ಒರೆಯಲೇಂನೀವೆಂದ ದೂಷಣಕ್ಕೆಲ್ಲಕ್ಕೆ | ನಿರುತವಾಂತಕ್ಕಾತ ನೆಂಬೀಪ್ರತಿಜ್ಞೆಯಂ | ಕರಮನುದ್ದ್ವಕೆನೆಗಪಿಯುನ್ನತಧ್ವಾನದಿಂ ದುಸಿರ್ದ ದರಹಸಿತಮುಖದಿಂ || 43 ||

ಗಂಗಾಧರನ ಶರಣಸಭೆಗೆ ಸೈವರಿದುಸಾ | ಷ್ಟಾಂಗದಂಡಪ್ರಣಾಮ ವನೆಸಗಿಬಲವಂದು | ಪೊಂಗಿತಪ್ಪದಕಮಲಭೃಂಗನಾಗುತ್ತವರ ಹಸ್ತಾರ್ಪಿತ ವಿಭೂತಿಯಂ || ಮಂಗಲಕರದೊಳಾಂತು ನಿಂದುನಿಜಪರಮಮಂ | ತ್ರಾಂಗನಂ ಪ್ರಾಣವಲ್ಲಭನನಾಪ್ರಾಣ ಪದ | ಸಂಗನಂಮಾಡಿ ನಿಶ್ಚಲನಿಷ್ಠನಾಗಿ ಭಕ್ತ್ಯತಿಶಯದಿನಿಂಪುವೆತ್ತು || 44 ||

ಓಂನಮಃಪ್ರಪದಾಣುಹೃದ್ಯಾಯ ಶೋಭನಾ | ಯೋಂನಮಸ್ತ್ರ್ಯಂಬಕಾಣು ವಿಶೇಷಿತಾಯಸ | ತ್ಯೋಂನಮೋರುದ್ರಯತ್ತ ಇತಿಮಂತ್ರಪ್ರಾರ್ಥಿತಾಯತೆ ಶೀಘ್ರ್ಯಯತೇ || ಓಂನಮಃ ಪರ್ಜನ್ಯಹೃತ್ಕಮಲ ಶೋಭಿತಾ | ಯೋಂ ನಮೋಜಲದೇವತಾರ್ಚಿತ ಪದಾಂಬುಜಾ | ಯೋಂನಮೋಪಾಂಪುಷ್ಪ ಧಾರಿಣೇ ಗಂಗಾಧರಾಯವಿಶ್ವೇಶ್ವರಾಯ || 45 ||

ಓಂನಮೋ ಮೃತ್ಯುಂಜಯಾಣು ವ್ಯವಸ್ಥಿತಾ | ಯೋಂನಮೊಗಾಯತ್ರ್ಯಣೋರ್ಮಧ್ಯ ದೀಪಿತಾ |ಯೋಂನಮಸ್ಸೋಭ್ಯಾಯಸುಪುರುಷಾಯೇತಿ ಸಾಮಾಮ್ನಾಯಕೀರ್ತಿತಾಯ || ಓಂನಮಸ್ತೇಷಡಂ ಗಾಣುಭಿಸ್ಸಂಸ್ಫುಟಾ | ಯೋಂ ನಮಃ ಪಂಚಾಕ್ಷರೀಮನುವ್ಯಾಪಕಾ|ಯೋಂನಮಃ ಪ್ರಣವಸ್ವರೂಪಿಣೇ ಗಂಗಾಧರಾಯ ವಿಶ್ವೇಶ್ವರಾಯ || 46 ||

ಓಂನಮೋಭಕ್ತ್ಯಪವಿತ್ರಂತ ಇತಿನುತಾ | ಯೋಂ ನಮಸ್ತೇರುದ್ರನುಸ್ತವಇತೀಳಿತಾ | ಯೋಂ ನಮಸ್ತೇತ ವಿಾಶಾನಂಪುರುಷಮಿತ್ಯಥರ್ವವೇದೋರ್ಜಿತಾಯ || ಓಂನಮೋನೇತ್ರಯೋ ರ್ಮೇಘಪುಷ್ಪಜನ ಕಾ| ಯೋಂ ನಮೋ ಗಂಗಾಪ್ರದಾಯಸಗರಾತ್ಮ ಜ | ಸ್ಯೋಂನಮಸ್ಸಪ್ತಲಾವದ್ದಿವ್ಯ ಗಂಗಾಧರಾಯ ವಿಶ್ವೇಶ್ವರಾಯ || 47 ||

ಓಮಾಪಇತಿಮಂತ್ರ ಕಲ್ಪಿತಾರ್ಘ್ಯಾದಿಕಾ | ಯೋಮಯಂ ಮೆಹಸ್ತ ಇತಿಮನುಸ್ಪೃಶ್ಯಶೋ | ಭಾಮಯಾಂಗಾಯ ಸದ್ಯಾದಿಮಂತ್ರಾರ್ಚಿತಾಯೋ ಮಾರ್ಧವಿಗ್ರಹಾಯ || ಓಮವಸ್ವನ್ಯಾಯ ಸಂವೃಧ್ವನೇನಮ | ಸ್ಸೋಮಾಯ ಹೇತಿಯಜುರಾಘೋಪಿತಾಯ ರು | ದ್ರೋಮುಪರ್ಷಿರಿತಿಸ್ತುತಾಯತೇ ಗಂಗಾಧರಾಯ ವಿಶ್ವೇಶ್ವರಾಯ || 48 ||

ಅಂತರಿಕ್ಷಂತೀತಿ ಮಂತ್ರತಾತ್ಪರ್ಯೋದಿ | ತಾಂತರದ್ವಿವಿಧಪೂಜಾಫಲ ಪ್ರದಜಂತು | ಸಂತಾನಜೀವನ ಪ್ರಥಮಮೂರ್ತೀನಮಸ್ತುಭ್ಯ ಮುರ್ವರಶ್ಯಾಯ್ಯ ಶೇ || ಸಂತತಮಸೌಯೋವಸಸ್ಪರ್ತೀತ್ಯಣುನಾಪಿ | ಚಿಂತಿತಾಯಾದಿತ್ಯಮಧ್ಯೇ ಸುವೃಷ್ಟ್ಯರ್ಥ | ಮಂತರಾತ್ಮಸ್ಥಿತಾಯೋಂನಮೋಗಂಗಾಧರಾಯ ವಿಶ್ವೇಶ್ವ ಠಾಯ || 49 ||

ಭಾನೋರ್ಮರೀಚಿವ ಚ್ಛಂಭೋರನಸ್ಯಾತ್ಮ | ತಾನುಪಮವಿಭವಾನುಸಾ ರಿಣೇಂಪ್ರಾಣಿನಾ| ಮಾನಂದಕಾರಿಣೇಂ ಮಹಿಮಾವಿಹಾರಿಣೇಂ ವಿಪದರ್ಣವೋ ತ್ತಾರಿಣೇಂ || ಸ್ವಾನುಭೂತ್ಯುದ್ಧವಿಸ್ತಾರಿಣೇಮಾವೃತಿವಿ | ತಾನಾಪಹಾರಿ ಣೇಂ ಘನದಯಾಪೂರಿಣೇಂ | ಜ್ಞಾನಕ್ರಿಯಾನಂತ್ಯಚಾರಿಣೀ ಮಾಶದ್ವಿತೀ ಯಾಮುಪಂನಮಾಮಿ || 50 ||

ಶ್ರೀಮದ್ವೃಷೇಂದ್ರಾಯ ಶಿವಧರ್ಮರೂಪಾಯ | ವೈಮಲ್ಯಚರಿತಾ ಯ ಭೃಂಗೀಶ್ವರಾಯಕರು | ಣಾಮೃತಸಮುದ್ರಾಯ ವೀರಭದ್ರಾಯ ವಿಲಸ ತ್ಪ್ರಮಥಸಮುದಯಾಯ || ಭೀಮಾತುಲಿತವಿಕ್ರಮಾಯ ರುದ್ರಕುಲಾಯ | ಕಾಮಿತಾರ್ಥಪ್ರದಗುಣಾಯ ಭಕ್ತಚಯಾಯ | ಭೂಮಿಸಂಸ್ತುತ್ಯಾಯಪುನರ ಪಿ ನಮೋನಮಸ್ತೇಭ್ಯೋಗಣೇಭ್ಯಸ್ಸದಾ || 51 ||

ಭಸ್ಮೀಕೃತಾಂಜನ ಸಮೂಹಾಯವೈವಸ್ವ | ತಸ್ಮಯಹರಣಶಕ್ತಿದಾ ಯವಿನತೇಭ್ಯೋಘ | ನಸ್ಮೇರಲಪನಾಂಬುಜಾಯ ಕಾರುಣ್ಯರಸಭರಿತಾಂಬಕ ದ್ವಯಾಯ || ಅಸ್ಮದ್ಧಿತಾರ್ಥಮಂಗೀಕೃತಶರೀರಾಯ | ವಿಸ್ಮಯಾನುಪಮ ಸಂವಿತ್ಸುಖನಿಮಗ್ನಾಯ | ತಸ್ಮೈನಮೋದೇಶಿಕೇಂದ್ರಾಯ ಶಿವಸಮಯ ವಾ ರ್ಧಿಚಂದ್ರಾಯಾನಿಶಂ || 52 ||

ಎಂದೀಪರಿಯೊಳು ಜ್ಜ್ವಲಸ್ತುತಿಯನೆಸಗಿಬಾ| ಲೇಂದು ಧರನಮಳತೇಜೋ ರಾಶಿಯುಂಶರಣ | ಸಂದೋಹ ಸೌಖ್ಯಪ್ರಕಾಶಿಯಂ ವಾಮಹಸ್ತಸ್ಥವಿಮಲವಿ ಭೂತಿಯಂ || ಚಂದದಿಂ ದಕ್ಷಿಣಕರಾಂಗುಷ್ಠತರ್ಜನಿಗ | ಳಿಂದೆಪಿಡಿದಾಪತ್ಸ ಮಯಬಂಧುವಂ ಮಂತ್ರ | ವೃಂದರಾಜನನಿಷ್ಟದಾತೃವಂ ಸಕಲಸಂಪದ್ವಶೀಕೃ ತಧರ್ಮಿಯಂ || 53 ||

ನಿರುಪಮಜ್ಞಾನೈಕ ಹೇತುವಂ ಸದ್ಭಕ್ತಿ | ಪರರರಸನಾಮಣಿಕರಂಡ ಸ್ಥವಸ್ತುವಂ | ವರವಿಶ್ವದರಸಿನೋೞ್ ಸಂಧಾನಮಂ ನಿಜಸ್ಮರಣಮಾತ್ರದೊಳಾಗಿಪಾ || ಪರಮಸಾಮರ್ಥ್ಯನಿಧಿಯಂ ಸುಪಂಚಾಕ್ಷರಿಯ | ನೆರೆದೆರೆದುಕರೆದುಕರೆದುಬರ್ದುಂಕೊಬರ್ದುಂ | ಪರಿಪರಿಯ ಬಣ್ಣವಣ್ಣಿಗೆಗಳಿಂ ಜಪಿಸುತುತ್ತರದಿಬ್ಬಿಳಕೆ ನಡೆವುತೇ || 54 ||

ಭಾಗೀರಥೀಜಲಂಬಂದು ಸಿಲ್ಕಿಡೆಯಿದೆಂ | ಬೀಗವಮಾಸ್ಥಲಶುದ್ಧಿಗೆಯ್ವನುವೊ ಯೆಂಬಂತೆ | ರಾಗದಿಂದೊಳಗಗ್ಗೆ ತದ್ಭಸಿತಮಂತಳಿವುತಂತದಂಪಿಡಿದ್ಯಕೂಡೆ || ಶ್ರೀಗಂಗೆಯಾಗಮಕೆ ರಂಗವಲ್ಲಿಯನಿಕ್ಕು | ವಾಗಾಡಿಯೋಕಾಶಿಗೆಣೆಯನಿಪುದಿದರುಭಯ | ಭಾಗದೊಳಗಾಧನೆಲಸೆಂದಿಳಿಗೆನೆಗಳ್ವಸೀ ಮಾರೇಖೆಯೋ ಬಳಿಕ್ಕಂ || 55 ||

ತನೆತನ್ನನಾಶ್ರಯಿಸಿದವರೀ ಶಪುರಕೆ ಗಮಿ | ಸುವೊಡೆಬಟ್ಟೆಯ ಪುಟ್ಟನುರೆತೋರ್ಪಪರಿಯೊಭೂ | ಯುವತಿಯನನುಗ್ರಹಿಸಲೆಂದು ಪಣೆಗಿಡುವ ಭಸಿತ ವಿಲಾಸದೊಂದುಗೆರೆಯೋ || ತವಕದಿಂಗಂಗೆ ಬರಲಿಲ್ಲಿ ಕಟ್ಟಿಲ್ಲಗೊಡೆ | ಭುವನ ಪ್ರಳಯಮುಪ್ಪುದೆಂದು ಒಗೆದಿನಿತರ | ಲ್ಲಿ ವಿಹಾರಿಸೆಂದು ಕಲ್ಪಿಸುವನಿಯಮದ ರೇಖೆಯೊ ಎಂಬ ಪಾಂಗಿನಿಂದೇ || 56 ||

ಬೆರಲೆರಡರಿಂಬಿಡುತ್ತೀರಿಯಾಕಾರದಿಂ | ದಿರದೊಂದುರೇಖೆಯಂರಚಿಸುವನಿತರೊಳಗಾ | ನೊರೆವೆನೆಂತುಟೊ ಶಿವಶಿವಾ ಪದ್ಮರಸರಳವಸಾವಿಶ್ವಪತಿಯಾಜ್ಞೆಯಿಂ || ಧರಣಿಯಂತಃ ಪಥದೊಳಾತ್ರಿಪಥಗಾದೇವಿ | ಪರಿದುಬಂದಾಸ್ಥಲದ ಸಸಿನದೋೞ್ಕಿಂದೆಲೆಲೆ | ಶರಣಬರುತೈದೆನೆಂದುಲಿವಂತೆ ಘುಳುಘುಳಿಸುತೇಳ್ದಳದನೆಂವಣ್ಣಿಪೆಂ || 57 ||

ಎಲೆಲೆಮುಟ್ಟಿದವೋಹದಿಂದೆ ಗಂಗಾದೇವಿ | ಪಲವುಪೊಗವಾಂತುಗುರುವರನ ನೀಕ್ಷಿಸಲೆಂದು | ತಲೆದೋರಿದಳೊ ಎಂಬ ಭಾವದಿಂದಾತಾಣದೊಳಗಲ್ಲಿಗಲ್ಲಿಗಮುದ್ರ್ || ಜಲವುಕ್ಕಿ ಭೂದೇವಿಮುಡಿದ ಬೆಳ್ದಾವರೆಯ | ದಲಪಂಕರನೊ ಯೆಂಬವೋಲ್ಪೊಗಸುದೋರಿಯು | ಜ್ವಲಿಸುವವಸರದೊಳಚ್ಚರಿಯೊಂದಿಘನಭೀತಿಯಾವರಿಸಿ ಗಡಬಡಿಸುತೇ || 58 ||

ಅದೆಯುಬ್ಬು‍ರ್ತದೆಯೊಡೆವುತದೆ ತೋರುತದೆವಿಾರು | ತದೆಯುಣ್ಮು ತದೆ ಪೊಣ್ಮು ತದೆ ಪೊಂಗುತದೆಪೊಳೆವು | ತದೆಸುಳಿವುತದೆ ಸೂಸುತದೆ ಪರ್ವುತದೆ ಪರಿವುತದೆ ಪರಕಲಿಸುತಡರುತೇ || ಅದೆ ಪಿಗ್ಗುತದೆ ಪೆರ್ಚು‍ತದೆ ಬುದ್ಬುದಂ ದೋರು | ತದೆನೊರೆಯ ನೊದವಿಸುತ್ತದೆತೆರೆಯನಾಗಿಸು | ತ್ತದೆಘೋರ್ಗರೆವುತೆ ಬರುತ್ತದೆಯೆಂದು ನೆರೆದಸಭೆಯು ಲಿವುತಿರಲಿತ್ತಕೂಡೇ || 59 ||

ಪರಮಸಾದ ಸ್ವರೂಪನ ಶರಣಸಂಕುಲಂ | ನಿರುಪಮಾನಂದದಿಂ ಮೆಯ್ಯುರ್ವಿಕಯ್ಯೆತ್ತಿ | ಹರಹರಮಹಾದೇವ ಲೋಕಕ್ಷಯಾಕರಾಮರಧುನೀಧರ ಪುರಹರಾ || ದುರಿತಾರಿಕಾಲಾರಿ ಕಾಮಾರಿಯೆಂದಿಂತು| ಬಿರುದಾಂಕಮಾಲೆಗಳ ನೆತ್ತಿಯುತ್ಕಟ | ಸ್ವರದಿನುಘೆಯುಘೆಜಾಂಗುಭಲರೆ ಜಯಜಯಯೆಂಬನಿತ ರೊಳುದಕಂಪೂರ್ಣಿಸೇ || 60 ||

ಗುರುಕುಲಾಗ್ರಣಿಯೊಡನೆ ನೆಣಸುವಗ್ಗ‍ಡನರಕಿ | ನರರಿವರೆನುತೆ ಕೋಪದಿಂದೆ ಪಲ್ಮೊರೆದು ಹುಂ | ಕರಿಸಿ ಝುಂಕಿಸುತುಬ್ಬು‍ಬೆಳೆದಳೋ ಭೂಕಾಂತೆಯೆಂಬಂತೆ ಘುಡುಘುಡಿಸುತೆ || ಸ್ಫುರಿಪಕಲ್ಪಾಂತಕಾಲದ ಸಿಡಿಲಗರ್ಜನಮ | ನಿರದೆತಾಳ್ದಾರ್ಭಡಿಸುತೇ ರಿಯೊಗೆತರೆನೋಡು | ತರರೆತಧ್ವನಿಗೆ ಹಮ್ಮೈಸಿಹವ್ವನೆ ಹಾರಿಮೂರ್ಛಿಸಿದುದಾಜನಜಯಂ || 61 ||

ಗರಲಶಕ್ತಿಪ್ರಬದ್ಧರ ಪೊಲವಿಕಾರವಿಂ |ನರಪಾದ್ಯಖಿಲ ಜೀವಿಗಳ್ಬೇಳ್ದಿರಲ್ಕಿತ್ತ | ಲುರಗಕಂಕಣನಣುಗರೊಲ್ದು ಗುರುತಿಲಕನಂನೋಡುತುಂ ಕೊಂಡಾಡುತುಂ|| ಹರಿಸದಿಂತೂಗುತುಂ ಬಾಗುತುಂತೊನೆಯುತುಂ | ಭರವಸದಿನುಲಿವುತುಂ ಮಲೆವುತುಂಕೆಲೆವುತಂ | ತಿರದುರ್ಬಿಜೊಬ್ಬಿಡುತೆ ತಮ್ಮ ಹರೆತಮ್ಮ ಕೊಳಲೆಂಬಂತದೇಂನೆಗಳ್ದರೋ || 62 ||

ನಿರುಪಮೋಲ್ಲಾಸದಿಂನೆರೆದು ಮಾಹೇಶ್ವರವಿ | ಸರವನೇಕಪ್ರಕಾರದ ನಾಟಕಂಗಳಂ | ಪರುತವಿಸಿಶರಭೇಶ್ವರಂ ನೃಸಿಂಹಪ್ರಮಥನಂಗೆಯ್ದು ಘನಲೀಲೆಯಂ|| ತ್ವರಿತದಿಂ ತೋರ್ಪ್ಪ‍ಕ್ಕೆ‍ಲರ್ಭ‍ಗ‍ನಂಧಕಾ | ಸುರನುರದೊಳಾಡಿ ದಾಟವನಾಡುವಕ್ಕೆ‍ಲ | ಕ್ಕ‍ರಿದೈತ್ಯನಂ ಹರಂಕೆಡಪಿತೊವಲುಟ್ಟುದಂ ತೋರ್ಪ‍ಕ್ಕೆ‍ಲರ್ಬ‍ಳಿಕ್ಕಂ || 62 ||

ದಕ್ಷಾಧ್ವರಧ್ವಂಸಮಂ ಜಲಂಧರವಧೆಯ | ನುಕ್ಷವಾಹತ್ವಮಂತ್ರಿಪುರ ಪ್ರಹಾರವಂ | ಭಿಕ್ಷಾಟನಮನಚ್ಯುತನನೀಶ್ವರಂ ಸಚ್ಯುತನನಾಗಿಸಿದ ಬಗೆಗಳಂ|| ಅಕ್ಷಯಾವಸರದೊಳ್ಬ್ರಾಂಡವಾಡಂಬರವ | ನಕ್ಷಿತ್ರಯಂನೆಗಳ್ದುದಂ ತಚ್ಛಿವಸ ತತ್ಸ | ಧೃಕ್ಸಗಣವರರ ಪಲತೆರದ ಲೀಲಾಕಲಾಪಾನುಪ ಮವಿಭವಂ ಗಳಂ || 64 ||

ಉಚಿತಕ್ಕೆತಕ್ಕಂದದಿಂ ಪಲವುಬಗೆಗಳಂ | ರಚಿಸಿತೋರಿಸುತೆ ಕುಕಿಲಿ ರಿದುಕುಣಿಕುಣಿದಾಡಿ | ರುಚಿರಾಭವಾನಂದಲೀಲೆಯೊಳ್ಮುಳುಗಾಡುತಂ ತಿದ್ದುರ್ಕೊಡೆ|| ವಚಿಸಲೇಂಮೂರ್ಚ್ಛಿತ ನೃಪಾದ್ಯರಂಕಂಡುಗಣ | ನಿಚಯಮು ವರಿರವಿಂಗೆ ಹಸಿತಮುಖದಿಂ ಕೃಪಾ | ರುಚಿವೃತಸ್ವಾಂತರಾಗುತ್ತಿಮ್ಮ ಪದ್ಮರ ಸಗುರುವಂ ನೀರೀಕ್ಷಿಸುತ್ತೀ || 65 ||

ಜಯಕುಜನಭಂಗ ಜಯಜಯಶರಣಸಂಸಂಗ | ಜಯಮಂಗಲಾಂಗ ಜಯಜಯಜಿತಮದಾನಂಗ | ಜಯದಯಾಪಾಂಗ ಜಯಜಯಗುರುಕುಲೋ ತ್ತುಂಗಜಯವಾದಿಜಯ ಭುಜಂಗಾ || ಜಯಭಕ್ತಿಪಕ್ಷಜಯಜಯ ಕಲ್ಮಷವಿ ಪಕ್ಷ | ಜಯಸುಭಗಲಕ್ಷ ಜಯಜಯವಿದಾರಿತರೂಕ್ಷ | ಜಯಗಣಾಧ್ಯಕ್ಷಜಯ ಜಯಬೋಧಗುಣದಕ್ಷ ಜಯವಿನತಕಲ್ಪವೃಕ್ಷಾ || 66 ||

ಸಾರಭಕ್ತಿತ್ರಯವಿಹಾರ ಸಮ್ಯಕ್ತ್ವದಾ | ಕಾರ ನಿಜಲಿಂಗಶೃಂಗಾರ ನಿರ್ಧೂತಸಂ | ಸಾರ ನಿರ್ಜಿತತನುವಿಕಾರ ಗುಣಗಣ ರತ್ನಹಾರಸುಜನಾನು ಸಾರ || ದೂರೀಕೃತೋರುನೀಹಾರ ಸಕಲಜನೋಪ | ಕಾರ ಶಿವಮಾರ್ಗವಿಸ್ತಾರ ಕರುಣಾಪೂರ | ವಾರಿತಾಹಂಕಾರ ಕರುಣಿಸಾಕರ್ಮಹೇತುಗಳನೆಲೆ ಪದ್ಮ ಣಾರ್ಯ || 67 ||

ಎಂದು ಮಾಹೇಶ್ವರರ್ಪ್ರಸನ್ನ ಮುಖಾರ | ವಿಂದರಾಗುತೆ ಪದ್ಮಣಾ ರಾಧ್ಯಪುಂಗವಂ | ಗಂಡೊರೆಯೆ ತದ್ವಾಕ್ಯಮಂಮನದೆ ಗೊಂಡಾನೃಪಾದಿಗಳ ನೀಕ್ಷಿಸುತ್ತೆ || ಮಂದಹಾಸಂಗೆಯ್ಯುತಾ ಕೆರೆಯದಿವ್ಯಾಂಬು | ವಂದಿಟಂತರಿಸಿ ಗಂಗಾಜೀವನವೆಕರುಣ | ದಿಂದಿವರ್ಗೆ ಜೀವನವನೆಸಗೆಂದವರಮೇಲೆ ತಳಿಯ ಲೊಡನೇವಣ್ಣಿಪೆಂ || 68 ||

ಅರರೆನಿವ್ರಿತರೆಪ್ಪಿಸಿದೊಡೆ ಬೆಚ್ಚಿರ್ದವೊಲೇ | ಳ್ವಿರವಿನಿಂದೇಳ್ದು ಭೂಸತಿ ಯುಸದ್ಭೂಲತೋ | ತ್ಕರಯುತಾನಂದಾಶ್ರು ಪೂರ್ಣಲೋಚನದಂತೆ ನೀರ್ದುಂ ಬಿಮೆರೆವಕೆರೆಯಂ || ಗುರುರಾಜನಂನೋಡಿ ತಲೆಗುತ್ತಿಕಡುನಾಣ್ಚಿ | ಧರೆಗೆ ತಮ್ಮ ಯೆಭಂಗಫಮಂ ಬರೆದುತೋರ್ಪಂತೆ | ಬರೆಯುತುಂನೆಲನನುಂಗುಟದೆ ಭೂಪಾದಿಗಳ್ಪಾಯಳಿವುತಿರಲೀಕ್ಷಿಸಿ || 69 ||

ಜನಪಾದಿಗಳಿರಕೆರೆ ಯಾಯ್ತೆಬಳಿಕಿನ್ನಿತ್ತ್| ಮಿನುಪತುಂಬಂತೊಟ್ಟೆಯಂ ಗದ್ದೆಯಂತೋಂಟ | ದನುವನಾರೆಯ್ದುವೆದೆನುತಲ್ಲಲ್ಲಿ ಗೀಶಮನುವಂಜಪಿಸುತಾ ಭಸಿತಮಂ || ಅನಘದೇಶಿಕಚಕ್ರವರ್ತಿತಳಿದನಿತರೋ | ಳ್ಚನಿಸಿನಳನಳಿಸುತೊ ಪ್ಪಿದುವವರ ಜೆಲ್ಪನಾ |ನಿನಿತೆಂದು ಪೊಗಳಲಾರ್ಪನೆ ಶಿವಶಿವಾ ಬಲ್ಲ ವೊಲ್ಭಕ್ತಿ ಯಿಂಬಣ್ಣಿಪೆಂ || 70 ||

ಅಂಗಜಾಂತಕನೂರಪೇರ್ಬಾಗಿಲೋ ದಿವ್ಯ | ಗಂಗಾಪ್ರವೇಶಕ್ಕೆ ಭೂ ಕಾಂತೆಕೊರ್ತುಪಳು | ಕಿಂಗಾಡಿಮಿಗೆ ಸಮೆದುನೆಟ್ಟತೋರಣವೋ ಪುಣ್ಯಸ್ನಾನ ಕೆಳಿಯಲೆಂದು || ಪೊಂಗಿಪೇಚರರಿಟ್ಟ ನಿಶ್ರೇಣಿಯೋಕಡುಬೆ | ಡಂಗಿನಿಂಜಲದೇವತೆಯರಾಡಲೆಂದೊಲ್ದು| ಸಿಂಗರಿಸಿನಿಲಿಸಿದುಯ್ಯಾಲೆಯ ಕಂಬಂಗಳೋ ಎನಿಸಿತುಂ ಜೇಂಮೆರೆದುದೋ || 71 ||

ಭರದಿಂತ್ರಿಲೋಕೀನುತನನಿಷ್ಠೆಗಳ್ಕಿಯಂ | ತಿರದೆ ಪಾತಾಳದಿಂಪಾ ರಸಾಯನಕುಂಡ | ವರರೆಮೇಗಣ್ಗುರ್ಬ್ಬಿತೋ ಶಂಕರಂ ಚಂದ್ರಕಾಂತದ ಕರಂಡದಲ್ಲಿ || ವರಕೃಪಾಸಿದ್ಧರಸಮಂತೀವಿನೆಲವೆಣ್ಣ | ಕರದೊಳಾಚಾರ್ಯತಿಲಕಂಗೆ ಕಳಿಪಿದನೊತ | ದ್ಧರಣೀಸತಿಯ ಕಾಂತಿರಸಭರಿತನಾಭಿಯೋ ಎನೆತೊಟ್ಟಿಕಣ್ಗೆಸೆದುದೂ || 72 ||

ಆದಿಪುರುಷನ ದಿಟ್ಟಿಗೊನೆವೆಳಗುಸೋಂಕಿನಿಂ | ಭೂದೇವತೆಗೆ ಸಾತ್ವಿಕಂ ಜನಿಸಿತನುವಿನೊಳ್ | ಸ್ವೇದಾಂಬುವುಣ್ಮೆ ಪುಳ ಕಂಪೊಣ್ಮೆ ರಾರಾಜಿಪಂದಮೋ ಎಂಬವಾಂಗಿಂ || ಮೋದದಿಂನೀರ್ವೆರಸು ಶಾಲಿಗಳಸಸಿಗಳಿಂ | ದಾದವೊಪ್ಪಿದು ವುಗದ್ದೆಯ ಮಡಿಗಳವರೆಡೆಯೊ | ಳಾದೇಶಿಕನ ಕೃಪಾರಸದೊಳ್ಪೊನಲ್ಗಳೋ ಎನೆಕಾಲ್ಗಳೊಪ್ಪಿರ್ದುವೂ || 73 ||

ಅನಘದೇಶಿಕಕುಲೋತ್ತಮನ ಸಂಭ್ರಮಕೊಲ್ದು | ವನಲಕ್ಷ್ಮಿ ಪರಿಕರಿಸಿ ಗುಡಿಗಟ್ಟಿದಳೊಮಹೇ | ಶನೆದೈವವಾಭಕ್ತರೇ ಕುಲಜರವರ್ಗೆಸರಿಯಿಲ್ಲೆಂದು ಭೂಕಾಮಿನೀ || ಅನುನಯದೆ ಪಲಗಯ್ಗಳಾಂತುದ್ಧಕೆತ್ತಿದೊಂ | ದನುವೊವಾದಿ ಪರೆರ್ದಗೆ ಬಸಿದಿಟ್ಟದಸಿಗಳೋ | ಯೆನಿಸಿಸುಳಿವಿಡಿದಡಕೆ ಮೊದಲಾದವರಸಸಿಗಳಿಂ ತೋಂಟಗಳ್ಮೆರೆದುವೂ || 74 ||

ಪರಿಕಿಸುವೊಡಮೃತಜೀವನ ಘನರಸಂಗಳಿಂ | ದೊರೆವನಾಮತ್ರಯಂ ಸಾರ್ಥಕಮಿವೆನ್ನನೀ | ರ್ಗಿರದುಳಿದನೀರ್ಗೆ ವಿಷನಾಮವೆಂದಾವರ್ತಮೆಂಬ ಬಾಯ್ದೆರೆದುಲಿವುತೇ || ತೆರೆಗಯ್ಯನೆತ್ತಿತಡಿವ್ರೊಯ್ಲಿಂದೆಡಂಗುರವ | ನರರೆವೋ ಯ್ದೀಳ್ವಶೀಕರ ಕುಲದೆಕುಣಿವುತು | ತ್ಕರಫೇನದಿಂನಗುತೆ ಬೊಬ್ಬುಳಿಕೆಯಿಂದುರ್ಬುತಾಕೆರೆಯುದೇಂಮೆರೆದುದೋ || 75 ||

ಇಂತೆಸೆವ ಕೆರೆಗದ್ದೆ ತೋಂಟಮೊಳಗಾದವರ | ನಂತವಿಭವಂಗಳಂ ನೋಡಿ ನಲಿದೀಶಗಣ | ಸಂತಾನವಾನಂದರಸ ವರ್ಷದಿಂನಾಂದು ನಾಂದುಬಂದೆಮ್ಮ ಗುರುವಂ || ಸ್ವಾಂತಮುಲರ್ದಪ್ಪಿ ಮುಂಡಾಡಿ ಮುದ್ದಿಸುತೆತ | ತ್ಸಂತೋಷದಿಂನೆಗಳ್ದ ಪುಳಕಾಂಬರಂದಳೆದ | ನಂತರದೊಳಾದಪರಿಣಾಮಾಮೃತವ ನೀಶ್ವರಾರ್ಪಿತಂಗೆಯ್ದುಸುಖಿಸಿ || 76 ||

ಪನ್ನೆರಡುಸಾಸಿರನರಿಗಳಂ ಪಿಡಿದುತರಿಸಿ | ಸನ್ನುತಾಶ್ವಂಗಳಂ ಮಾಡಿ ಪಾಂಡ್ಯನೃಪಂಗೆ| ಮುನ್ನೆಮ್ಮ ಚೊಕ್ಕನಾಯ್ನಾರು ತೋರಿದುದನೆಸೆವಿಳೆಹಾಳಬೊಮ್ಮದೇವಂ || ತನ್ನಬೀಜದ ಕಡಲೆಗೋದುವೆಗಳಂಚರ | ಕ್ಕುನ್ನತವಿಲಾಸದಿಂ ದಿತ್ತುಬಿತ್ತದೆಬೆಳೆದು | ದಂನಲಿದುಕುರಿಯ ನೆವದಿಂದಾದವಾದಕ್ಕೆ ಕಟಕದೊಳ್ ತ್ರಿಪುರಾರಿಯಂ || 77 ||

ಕಿನ್ನರಬ್ರಹ್ಮವಿಭುನುಡಿಸಿ ಯಾಧ್ವನಿಗಳಿದ | ತನ್ನರಪಬಿಜ್ಜಳಾದ್ಯಖಿಲ ಗ್ಗರ್ಸುವನಿತ್ತು | ದನ್ನಾಡೆಕೇಳ್ದರಿವೆವಿಂದೆಮ್ಮ ಪದ್ಮಣಾರ್ಯಂ ಬಟ್ಟಬಯಲೊಳ ಳವಿಂ || ಚೆನ್ನಾಗಿಕೆರೆದೋರಿಗದ್ದೆ ತೋಂಟಗಳನು | ತ್ಪನ್ನಮಂಮಾಡಿಕೆಡೆದೀ ನೃಪಪ್ರಮುಖಬಲ | ವನ್ನಗುತ್ತೆಬ್ಬಿಸಿದುದಂ ಕಂಡೆವೆಂದುಪಲವಂದದಿಂಬಿತ್ತರಿಸುತೇ || 78 ||

ಭಲರೆ ಶಿವಸಮಯಪ್ರತಿಷ್ಠಾಪನಾಚಾರ್ಯ|ಭಲರೆ ಪರಸಮಯಾಂಧಕಾರ ಪ್ರಹರಸೂರ್ಯ|ಭಲರೆ ನಿಜಮೇಧಾಜಿತ ಬ್ರಹ್ಮಚಾತುರ್ಯ ಭಲರೆ ನಿಶ್ಚಲಿತಧೈರ್ಯಾ || ಭಲರೆ ಮೃತ್ಯುಂಜಯಸದೃಕ್ಷಪ್ರಸೃತವೀರ್ಯ | ಭಲರೆ ಖಂಡಿತಸಬಲಬಲ್ಲಾಳನೃಪಶೌರ್ಯ | ಭಲರೆ ನಿರ್ಮಲಶಂಭುಭಕ್ತಜನತಾತ್ಪರ್ಯ ಭಲರೆ ಶಿವಕಾರ್ಯಧುರ್ಯಾ || 79 ||

ಭಾಪುರೇ ಪದ್ಮರಸಗುರುವೆ ಭಕ್ತಿಯಕರುವೆ |ಭಾಪುರೇ ಪದ್ಮಣಾರಾಧ್ಯಕುಜನಾಸಾಧ್ಯ |ಭಾಪುರೇ ವರಪದ್ಮರಾಜ ಸಂವಿದ್ಬೀಜ ಘನತೇಜ ಗುಣಸಮಾಜಾ|| ಭಾಪುರೇ ಮಹಿತ ಪದ್ಮರಸ ಸಜ್ಜನಸರಸ | ಭಾಪುರೇ ಸತ್ಪದ್ಮಿದೇವ ಜಂಗಮಜೀವ | ಭಾಪುರೇ ಮತ್ಪದ್ಮಣಾಂಕ ವಿಗತಕಲಂಕ ನಿಶ್ಶಂಕ ಭೂವೃಷಾಂಕ || 80 ||

ಶರಣರೇನಂಜೇಡಿದೊಡ ಮಿಾವೆನೆಂಬದು | ರ್ದುರಭಾಷೆಯಂಧರಿಸಲಕ್ಕುಮೇ ಧರಿಸಿಭೂ | ವರನೊಲ್ದು ಕೆರೆಗಿತ್ತವಿತ್ತಮಂ ಕಾರಣಿಕಜಂಗಮುಂಬಂದು ಬೇಡೆ || ಹರನೆಂದು ತಿಳಿದು ಕುಡಲಕ್ಕುಮೇ ಕೊಟ್ಟುತ | ಚ್ಚರಣಸಂಗದೊಳೊಡನೆ ಸಲಲಕ್ಕುಮೇ ಸಂದು | ನರಪಂಕಿನಿಸಲಿಂತು ನೆಗಳಲಕ್ಕುಮೆ ಭಾಪು ಗುರುಕುಲಾಂಬರಭಾನುವೇ || 81 ||

ಭಾವಿಸುವರಾರ್ಭಾವಿಸಿದೊಡದಂ ನೆನೆವವಿಜ | ಲಾವಲಂಬಿಗಳ ದಾರ್ನೆನೆದೊಡಂನಿಶ್ಚಯಿಪ | ಧೀವರರದಾರ್ನಿಶ್ಚಯಿಸಿದೊಡಂ ನುಡಿವಸುವಚೋವಿಭವರಾನ್ನುಡಿದೊಡಂ || ಪ್ರೋಪ್ರೋಕೋರುವೆನೆಂದು ನಡೆವರಾರ್ನಡೆದೊಡಂ | ಭೂವರಾದ್ಯಖಿಲರೀಕ್ಷಿಸಲಿಂತು ತೋರ್ಪ್ಪಮಹಿ | ಮಾವಕೀರ್ಣಾತ್ಮರಾರ್ನ್ನಿನ್ನಂತೆಸೂನೃತಾರಾವ ಗುರುಪದ್ಮಿದೇವಾ || 82 ||

ಉರದೆನೋಳ್ಪರದಿಟ್ಟಿ ಜೊನ್ನವಕ್ಕಿಗೆನೆಗಳ್ದ| ಪೆರೆಯೊ ಶರಣರ್ಗೆ ಸರಿಯಿಲ್ಲೆಂದಿದೇಂಕಟ್ಟಿ | ದೊರೆಯೊ ಗುರುವರನ ಮಹಿಮಾಪ್ರಭಾವಕೆಶಿವಂ ಕೊಟ್ಟಕಯ್ಸೆರೆಯೊ ಎಮ್ಮಾ || ಉರುವಗಣವಿತತಿಪದ್ಮರಸರ್ಗೆ ಕಳಿಪಿದುಡು | ಗೊರೆಯೊ ದೇಶಿಕಸಾಜ್ಞೆಗಳ್ಗೆ ಚಲಿಸದೆ ನಿಂದು | ಮೆರೆವಸಗ್ಗಿಗರಬಲ್ಪೊರೆಯೊ ಭೂತಿಯೊಳೊಗೆದ ಕೆರೆಯೊ ಪೇಳಿದುಭಾವಿಸೆ || 83 ||

ಮಲಹರನಶರಣಸಂತತಿಯ ಸಂಭ್ರಮಕಮರ್ದ | ಬಲವೊ ಗಂಗಾಧರನ ಪರಮಪ್ರಭಾವದು | ಜ್ವಲವೊ ಕುಜನರ ನಲೆದುನಿಂದ ಗುರುವಲ್ಲಭನಛಲವೊ ನಿಜವಿಷಯಸ್ಥರಾ || ಅಲಘುತರ ಪೂರ್ವಜನ್ಮಕೃತಸಮ್ಯಕ್ತಪಃ | ಫಲವೊ ತಣೆ ಯದತವಕ ದಿಂದೂಹಿಪರಮನದ | ಗೆಲವೊ ಕಡೆಗಿದು ಭಸಿತದಿಂದೇಳ್ದಕೆರೆಯ ತುಳಜಲವೊ ಬಣ್ಣಿಪೊಡಭೇದ್ಯಂ || 84 ||

ಮಾರಾರಿದೂಷಕರದರ್ಪಮಂ ಮುರಿವುಗ್ರ | ಮಾರಿಯೋ ಗುರುಮು ಖೇಂದು ಪ್ರಭೆಗೆಪೆರ್ಚಿದಜ | ಕೋರಿಯೋಶಿವಶರಣರ ವಸರಕ್ಕೊದವಿದುಪಕಾರಿ ಯೊ ಘನಗಂಗೆಯಾ || ಘೋರಮಂತ್ರಡೆಯುಲೆಳಸಿರ್ದ ಗುರುವರನಸಹ | ಕಾರಿಯೋ ನಿಷ್ಠಾವಿಧಿಗೆತಿಟ್ಟವಾಗಿಟ್ಟ | ದಾರಿಯೋ ಕಡೆಗೆ ಭಸಿತಪ್ರಭಾವದಿನುರ್ಬಿದೇ ರಿಯೋ ಇದುಶಿವಶಿವಾ || 85 ||

ಗೆಡೆವಪರವಾದಿಗಳ ಬಾಯ್ಗಳ್ಗೆ ಕಿತ್ತೆಸೆವ | ಪಡಿಗಳೋಪರಿಕಿಪರವಾನ ಸೋಲ್ಲಾಸಕಿವು | ಗಡಿಗಳೋ ಗುರುವಿನೋಳ್ಸೆಣಸುವರ ನೊದೆಯಲೆಂದಿಳಿತಳೆದ ಪಲವಡಿಗಳೋ || ಮೃಡರೂಪನುತ್ಸವಕೆ ಜಯಲಕ್ಷ್ಮಿ ಪಿಡಿದಕ | ನ್ನಡಿಗಳೋ ಕ್ಷಾರದಿಂನೆಗಳ್ದ ಗರ್ದ್ದೆಯಚೆಲ್ವ | ಮಡಿಗಳೋಪೇಳೆನಿಸಿಪೊಗಳ್ವರ ಶತಾಯು ವಿಂಗೆಡೆಗೊಟ್ಟವಿನ್ನೊರೆವುದೇಂ || 86 ||

ಪಿಂಗದಾಲೋಕಿಪರಕಣ್ಣ ಪುಣ್ಯದಸತ್ಫ | ಲಂಗಳೋ ಸಾಗಿಪಜನರಕಯ್ಯ ಪೊಚ್ಚಪೊಸ | ಪೊಂಗಳೋವಾದಿಗಳ ಮುಖಕಮಲಕಿವುಪಲವುತಿಂಗಳೋ ಗುರು ರಾಜನಾ || ಮಂಗಲವನೀಕ್ಷಿಸುವವನ ದೇವತೆಯರವದ | ನಂಗಳೋ ಸದಾರ್ಯ ನಮಹತ್ವವಸ್ತುವಿನಕೋ | ಶಂಗಳೊ ಬಳಿಕಸಮರಕ್ಷೆಯಿಂದಾದ ತೋಂಟಂಗ ಳೋಪೊಗಳ್ವುದೇನಂ || 87 ||

ಎಂದಿಂತು ವಿವಿಧವಿಧದಿಂದೆಯ್ದೆ ಶಿವಭಕ್ತ | ವೃಂದವಂಕಿಸಿ ಪೊಗಳುತಿ ರಲೊಡನೆಬಲ್ಲಾಳ | ನಂದುತನ್ನಖಿಲಬಲಸಹಿತ ವಷ್ಟಾಂಗದಿಂದೆರಗಿ ದೈನ್ಯಂ ದೋರುತೆ || ಸಂದದೇಶಿಕಚಕ್ರವರ್ತಿ ಯಭಯವನೀವು | ದಂದವೆತ್ತುರುಯ ಶಸ್ಫೂರ್ತಿಯಭಯುವನೀವು | ದಿಂದುಶೇಖರಸಾಮ್ಯವರ್ತಿ ಯಭಯುವನೀವುದೆ ಮಗೊಲ್ದುಪದ್ಮಣಾಂಕಾ || 88 ||

ಕಾಯುಯ್ಯಕಾರುಣ್ಯಸಿಂಧು ಭಕ್ತರಬಂಧು | ಕಾಯುಯ್ಯಲೋಕೈಕಗು ರುವೆನತ ಸುರತರುವೆ | ಕಾಯುಯ್ಯಸದ್ಭಕ್ತಿಗೋತ್ರ ಮಹಿಮಾಮತ್ರ ಸುಚ ರಿತ್ರ ಪುಣ್ಯಗಾತ್ರಾ || ಮಾಯಾಂಧರಂ ಮಹಿತಪಾಪಾತ್ಮರಂ ಮತ್ಸ | ರಾ ಯತ್ತರಂ ಮರ್ಕಟೋಪಮರನಧಮರನಪಾಯಸ್ಥರಂ ಕಷ್ಟಚಿತ್ತರಂ ಸಜ್ಜನಾರಿ ಷ್ಟರಂ ದುಷ್ಟಗುಣರಂ || 89 ||

ಗರ್ವಿತರನರಿವರುಳರಂ ಕ್ರೂರಚಿತ್ತರಂ | ಸರ್ವಾಪರಾಧಿಗಳ ನೆಮ್ಮನುದ್ಧ ರಿಸೆಲೆಯು | ಖರ್ವಗುಣನಿಧಿಯೆನಿನ್ನ ಮಹತ್ವಮಂ ಪೊಗಳಲೆಮಗಳವೆ ನಿನ್ನಾ ಜ್ಞೆಯಂ|| ಉರ್ವಿಯುಂ ಗಂಗೆಯುಂ ಸಸ್ಯಂಗಳುಂ ವಿಾರ| ದುರ್ವಿನಿಂಪೇಳ್ದನಿತ ರೊಳ್ನಿಂದು ಮೆರೆದುವೀ | ಸರ್ವಬಲವಳಿದು ನಿನ್ನುರುಕೃಪೆಯಿನುಳಿದುದೆನಲಂ ತಿಂತುಟೆಂದೆಂಬುದೇಂ || 90 ||

ಸರ್ಗಮುಂ ಸ್ಥಿತಿಯುಂ ಲಯಮುಮೆಲೆ ಪ್ರತ್ಯಕ್ಷ | ಭರ್ಗನಿನ್ನಾಧಾ ರವಲ್ಲದಿಲ್ಲಿನ್ನೆಮಗೆ | ಮಾರ್ಗಮುಂ ಮತಿಯುಮಂಬೆಯುಮಯ್ಯನುಂ ದೈವ ಮುಂ ಗುರುವುಮಿನಿತೆಲ್ಲವುಂ || ವರ್ಗಿಸಲ್ನೀವಲ್ಲದುಂಟೆನೀಂ ಕಯ್ಬಿಟ್ಟೊ ಡಾರ್ಗಡಪೊರೆವರೆಂದು ಬಿನ್ನವಿಸಿಬಳಿಕೆರಗೆ | ದುರ್ಗಾವರಾಧಸಾ ಜನಸಸಂ ನೋಡಿ ನಸುನಗುತೆತ್ತಿ ಸಂತೈಸಲೊಡನೆ || 91 ||

ಗುರುವರಂನೆಗಳ್ದಮಹಿಮೆಯು ವಾರ್ತೆಯಂ ದಿಗ್ವಿ | ಸರಕರಿಪಿಸಲ್ಕೆಗೆ ದುವೋವನಿಸಿವಾದ್ಯಪ್ರ | ಕರರವಂ ಪೊಣ್ಮೆ ಶರಣಪ್ಪರಸೆವಿಬುಧತತಿ ಜಯ ಜಯಧ್ವನಿಯನೆಸಗೇ || ಪರಿಜನಂ ಪುರಜನಂಕೊಂಡಾಡೆ ಪಾಠಕಾ| ದ್ಯರನೇಕ ವಿಧದೆಕೈವಾರಿಸೆ ಮಹೇಶ್ವರನ | ಪುರದೊಳ್ ಗಣಶ್ರೇಣಿಗುಡಿಗಟ್ಟೆ ತದವಸರ ದಲ್ಲೆಮ್ಮಪದ್ಮಣಾರ್ಯಂ || 92 ||

ನರಪಾದ್ಯರಂಕೆಲಕೆತ್ತೊಲಗಿಸಿ ಶಿವೈಕ್ಯಪ್ರ| ಕರಸಹಿತನಾಗಿ ಲಿಂಗಾರ್ಚ ನಮನಾ ಕೆರೆಯೊ | ಳುರುತರಾನಂದದಿಂ ಯಾದೃಚ್ಛಿಕಂ ರಚಿಸಿ ಹರ್ಷದಿಂ ಬಂದುನಿಂದು || ಅರಸಂಗೆಕೈವೀಸಲೊಡನವಂ ನಿಜಬಲಂ | ಬೆರಸಾತಟಾಕ ದೋಳ್ ಸ್ನಾನಪಾನಾದಿಗಳ | ನಿರದೆಸಗಿಕೌತುಕಂ ಬಡುತೆಗುರುಸಂನಿಧಿಗೆಬರೆ ಶರಣಸಭೆಯಿಕ್ಷಿಸೀ || 93 ||

ಅಸಮಾಕ್ಷನಿಂದೆಬಿಟ್ಟಿಗೆಕಟ್ಟಿಸಿದ ಕತದಿ | ನೆಸೆವುದೀಕೆರೆಗೆ ಬಿಟ್ಟಿಸಮುದ್ರವೆಂಬ ಪೆಸ | ರೆಸಗಿದೀಮಹಿಮಂಗೆ ಕೆರೆಯಪದ್ಮರಸಾಖ್ಯ ಮೆಸೆವುದಿನ್ನಿತ್ತಲೆನುತೇ || ಉಸುರ್ದೀತಟಾಕವರಬರಗಳೆನ್ನದೆ ಸಮಂ | ಜಸವಾಗಿನಿರ್ವಿಘ್ನದಿಂದಿಕ್ಕೆ ನುತ್ತಿಪ | ರಸಿಪೊಗಳುತಿರೆ ನೃಪನದಕ್ಕೆಹರ್ಷಿಸಿ ಪುರಕೆಚಿತ್ತವಿಪುದಿನ್ನೆನುತ್ತೇ || 94 ||

ಅರ್ಥಾಧಿಪಾಪ್ತನಣುಗಗ್ಗರಗಿ ಭಕ್ತಿಯಿಂ | ಪ್ರಾರ್ಥಿಸಿಗಜಾಶ್ವಜಯಮಂ ತರಿಸಿಕೊಟ್ಟಪರ | ಮಾರ್ಥನಿಧಿಪದ್ಮರಸರಂ ಭದ್ರಗಜವನೇರಿಸಿ ಸಕಲಜನಸಮೇತಂ || ತೀರ್ಥಯಾತ್ರೆಯನೆಸಗಿತಿರುಗುವ ಬೆಡಂಗಿಂ ಕೃ | ತಾರ್ಥತೆಯನೆಯ್ದಿ ಬಹುವಿಧದವಿಭವಂಗಳಿಂ | ವ್ಯರ್ಥವೃತ್ತಿಯನುಳಿದು ಗುರುವರನಸೋಲಗಿಸುತುಂ ಪುರಕ್ಕೆಯ್ತರುತಿರೆ || 95 ||

ಜಗದಾರ್ಯಸೋಲ್ವಿವಾದಿಸಿ ಕುವಲಯದಿನೆಯ್ದೆ | ನಗೆವೆತ್ತುನಿಜತೇಜಮುಡುಗಿಗತಿಗೆಟ್ಟು ತೊ | ಟ್ಟಗೆ ನೃಪಾದಿಗಳಿಂತು ಲಜ್ಜಾಂಬುಧಿಯೊಳಾಳ್ದರೆಂದಿಳೆಗೆತೋರ್ಪಂದವೋ ||ಸೊಗಯಿಸುವದೇಶಿಕಾಗ್ರಣಿಯ ಮಹಿಮಾಪ್ರಭೆಯ| ಹೊಗರಿದಿರೊಳಿರಲ್ಕಾದಮಮ ಜಜ್ಜನೆಜರಿದು| ಬೆಗಡಿನಿಂಸೀರ್ವ್ಪೊಕ್ಕನೋಎಂಬವೋಲ್ದಿವಾಕರನಪರಜಲಧಿಗಿಳಿದಂ || 96 ||

ಪರವಾದಿಗಳಮನದಸಂಕೋಚಮಂ ತೋರ್ಪ |ಪರಿಯಂತೆ ಕಮಲಾಳಿ ಮುಗಿದುವೆಮ್ಮಲಘು ಭ | ಕ್ತರ ಮತಿಯಸಮ್ಯಗ್ವಿಕಾಸಮಂ ಕಾಣಿಪಂತಿರೆಕುಮುದಕುಲಮಲರ್ದುವೊ || ಇರದೆದಶದಿಕ್ಕನಾಕುಜನರಪಕೀರ್ತಿಲತೆ | ಕರಮಡರ್ದವೋಲ್ ಮರ್ವ್ವಪರ್ವಿತೀಯೊಸಗೆ ಗಂ | ಡಿರುಳೆಂಬ ಪೆಣ್ಣಮೆಯ್ಯೋಳ್ಳಿಗೆದ ಬೆಮರ್ವನಿಗಳಂತೆ ಭಗಣಂಸೆಗೆದುವು || 97 ||

ಭಾವಜಾಂತಕವಿಮುಖಯೋಗಕ್ಕೆ ಪೋದದೋ | ಪಾವಳಿಯ ನಳಿಯಲಾಚಾರ್ಯನಕಟಾಕ್ಷದಿಂ | ದೋವೊಬಹುರೂಪನಾಂತಾಯಜ್ಞಪುರುಷನೆಯ್ತಂದನೋಎಂಬಂದದಿಂ || ಏವೇಳ್ದಪೆಂಪಲವು ಕೈದೀವಿಗೆಗಳೆಸೆದ | ವೀವೇಳೆಯೊಳ್ಗುರುಪದಾಬ್ಜದೊಳ್ಪಿಸರಾಂತು | ತೀವಿದೆರ್ದೆಯಕಳಂಕ ನಳಿವೆನೆಂದೊಗೆದುನೋಎನಲಬ್ಜನುದಯವಾದಂ || 98 ||

ಶರಣನಿಧಿಯೊಸಗೆಯಂನೋಳ್ಪಸಗ್ಗಿಗ ವೆಣ್ಗ | ಳುರುಕಟಾಕ್ಷದ್ಯುತಿ ಯೋ ಕುಜನರನುವಿಂಗೆ ಶೇ | ಜರರಟ್ಟಹಾಸಮಂಮಾಡಿದನುವ್ರೋ ಪದ್ಮಣಾಂ ಕನೊಳ್ಪಸದಬೆಳಸೊ || ಒರೆಯುಲರಿದೆನಿಸಿತಿಳಿಜೊನ್ನಂಮುಸುಕೆ ತದವ | ಸರ ದೊಳಿಯ್ತುಪರ್ಾಗಳೀಧರಾಂಗನೆ ಜಗ | ದ್ಗುರುವಿನುತ್ಸವಕೆ ಕುಂಕುಮದೋಕು ಳಿಯನೆಸಗಿದಂತೆ ಕೆಂದೂಳಮರ್ದುದೂ || 99 ||

ನೆಲನೊಗೆದದಿನದಿಂದ ಮಿಂತಪ್ಪಮಿಭವ ಮು | ಜ್ವಲಿಸಿದುದನೋರ್ವ ಯುಂ ಕೇಳ್ದರಿಯುವೆಮಗೆ ಪು | ಟ್ಟೋಲೆದಂದು ಮೊದಲಿಂದುವರಮೆಂದುವುಂ ಕಂಡರಿಯೆವಮುಮ ಪೊಸತಿದೆನುತೆ|| ಪಲವಂದದಿಂ ಸರ್ವಜನಮುಲಿವುತಿರಲಿಂ ತ | ತುಲಸಂಭ್ರಮದೆ ಪುರಂಬೊಕ್ಕುತದ್ವೀಧಿಯೋ | ಳ್ನಲಿದೀಕ್ಷಿಪರ ದಿಟ್ಟಿಗಂ ಮನಕಮಾನಂದಮಂ ಬೀರುತೆಯ್ದಿಬಂದೂ || 100 ||

ಕೆರೆಯಪದ್ಮರಸರ ಗೃಹದಸಿರಿದರಕ್ಕೈದಿ | ಮೆರೆವನಿಜಸೇನಾವೃತೋ ಜ್ವಲದಿನಮರ್ದುನೆಲ | ದೆರೆಯನೋಲಗಿಸುತಿರೆ ಗಜಮಸ್ತಕಮನೀಶ ಭಕ್ತತತಿ ಸಹಿತಮಿಳಿದೂ || ಪೆರೆದಲೆಯನಜಲ ನಿಷ್ಠಾಜಯಸ್ತಂಭದಂ | ತುರೆ ನಿಂದು ಗುರುವರಂ ನೃಪತಿಯಂನೋಡಿ ಬಾ | ಯ್ದೆರೆದನಿಂತಮುಮಕೆಂಬಲ್ವೆಳಗು ಮೂ ಡುವೆಳೆನೇಸಗ್ಗದಿರಸಣಕಿಸೇ || 101 ||

ನರಪಾಲಕೇಳಿಂದುಮೊದಲಾಗೆಮಗೆ ಮಹೇ | ಶ್ವರ ಸೇವೆಯಲ್ಲದುಳಿದ ರಸೇವೆಯುಗ್ರಾಹ್ಯ | ಮೊರೆವುದೇನಿದೆ ಭಾಷೆಯೆಂದು ತನ್ಮೊಡವೆಯುನಿತುಮನು ಳಿದವಂಗೆಸಲ್ಗಾ|| ವರಧನಕನಕ ರತ್ನಭೂಷಾಂಬರಾದಿಗಳ | ನಿರದೆಸೆವಸಿವ್ರ ಡಿಯಂ ದಂಡಮುದ್ರೆಯುಮನುರು | ತರದ ಬೀಯಗಮನುದ್ಯನ್ನಿಯೋಗ ಮನೆಲ್ಲವಂತರಿಸಿಯೊಪ್ಪಿಸಲೊಡಂ || 102 ||

ಅಂತವೆಲ್ಲವನೀಕ್ಷಿಸುತ್ತೆಬಲ್ಲಾಳನತಿ | ಚಿಂತಾನಿಮಗ್ನಮಾನಸನಾಗಿ ಸಾಷ್ಟಾಂಗ | ದಿಂ ತುಳಿಲ್ಗೆಯ್ದುಲೆ ಮಹಾಮಹಿಮ ನೀವಿಂತು ನುಡಿವರೇ ನಿಮ್ಮಾ ಜ್ಞೆಯಿಂ || ಇಂತೀಭುವನಮುಳಿವುದಳಿವುದೆನಲೆನಗೊಡೆತ | ನಂ ತೀರ್ವುದೇ ನಿಮ್ಮೊಳೀಜಗದ್ರಕ್ಷಣಾ | ರ್ಥಂ ತವೆಜನಿಸಿದನರರೂಪ ಹರನಲ್ಲದೀನಾಟಕಂ ನಿನಗೆನಿಜಮೇ || 103 ||

ಇಂದುವರಮೆನ್ನನಂಗೀಕರಿಸಿ ಪೊರೆದೀಗ | ಳಿಂದವಲ್ತೆಂದು ನೊಂಕಿ ಮೊಡಾನದೆಂತುಳಿವೆ | ನೆಂದು ಪಲತೆರಗಳಿಂ ಬಿನ್ನವಿಸಿದೊಡ ಮೊಪ್ಪದಿರೆಯದಂ ಬಿಟ್ಟುಭೂಪಂ || ಕಂದುತೆಲೆಯಯ್ಯ ಕೇಳ್ಮತ್ಸ್ಯಕೂರ್ಮಖಗಂಗ | ಳೊಂದಿ ವೀಕ್ಷಣಲಸದ್ಧ್ಯಾನ ಸಂಸ್ಪರ್ಶಂಗ | ಳಿಂದೆ ತಂತಮ್ಮ ಶಿಶುಗಳ ಸೋವವೇಂತುಟಾದೊಡಂ ರಕ್ಷಿಸೆನುತೇ || 104 ||

ಮತ್ತೆಗುರುತಿಲಕನಂ ಪ್ರಾರ್ಥಿಸುತ್ತೀಸಕಲ | ವಿತ್ತಮಂ ಕೈಕೊಂಡು ಕರುಣಿಸೆನ್ನುವ ನೆನು | ತ್ತು ತ್ತುಂಗವೃತ್ತಿಯಿಂದಡಿಗೆರಗಿ ಮರುಗುವನ್ನೃಪಾಲ ಕನನೀಕ್ಷಿಸುತ್ತೇ || ಚಿತ್ತವೊಲ್ದಂತೆಗೆಯ್ದಪೆ ವೇಳೆನುತ್ತವನ | ನೆತ್ತಿಮನ್ನಿಸು ತಿಂದುವೊದಲಾಗಿ ಶಿವಭಕ್ತ | ರತ್ತಲವಗುಣವನೆಸಗದೆ ಸತ್ಯನಾಗಿರು ಮೃಡಂ ರಕ್ಷಿಸುವನೆನುತ್ತೇ || 105 ||

ವಿನಯೋಕ್ತಿಯಿಂದೆಬೀಳ್ಕೊಡೆ ಪದ್ಮಣಾರ್ಯಂಗೆ | ಪುನರಪಿನಮಸ್ಕರಿಸಿ ತನ್ನ ಮೆರೆವರಮನೆಗೆ | ಜನಪಾಲನಖಿಲಸೇನಾಸಹಿತನಾಗಿ ಗಮಿಸಿದನತ್ತನಿತ್ತ ಲೆವ್ಮಾ || ಘನಗುರುವರಂ ಶರಣಸಭೆವೆರಸು ನಿಜನಿಕೇ | ತನಕೆಯ್ದಿ ಸಂಪ್ರಾರ್ಥನಾಪೂರ್ವಕಂ ಭಕ್ತ | ಜನವನುಪಚರಿಸಿ ಲಿಂಗಾವಸರಮಂಸಲಿಸಿ ಭಕ್ತಿರಸ ದೋಳ್ಮುಳುಗಿಸಿ || 106 ||

ಏಂಸಿರಾಸಾಭರಿತನೊ ಸಕಲಭಕ್ತರ್ಗೆ | ತನ್ನರಪನಿತ್ತುದೊಳಗಾಗುಳ್ಳ ಖಿಲವಸ್ತು | ವಂ ನಿರ್ಮಲೋತ್ಸಾಹದಿಂ ಸಮರ್ಪಿಸಿಯವರ ಕರುಣಾಮೃತಾಬ್ಧಿಯಳ್ಳೀ || ತಾಂನಲಿದುಮೂಡಿಮುಳುಗಾಡಿ ಯಂತಾಮಹಿಮ | ರಂ ನಾಡೆ ಬೀಳ್ಕೊಟ್ಟು ನಿಜಸತೀಸುತಮುಖ್ಯ | ರುನ್ನತಸಪರ್ಯೆಗಳ ನೊಪ್ಪುಗೊಳುತೀಶ ಸುಖದಿಂಪದ್ಮಣಾರ್ಯನೆಸೆದಂ || 107 ||

ಮದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದಭ್ರಮು ಕರಂದಲೀಲಾ ಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರಣೀತವಮಾಗಿ || ಸದಮಲಾಖಿಳಶಾಸ್ತ್ರ ಸಾರವೆಂದೆನಿಸುವ | ಭ್ಯುದಯಕರಪದ್ಮರಾಜಪುರಾಣಕಥೆಯೊಳಿಂ | ತಿದುಗುರುತಟಾಕಾದಿಗಳ ನೆಸಗಿಸಚಿವತೆಯನುಳಿವಾರನೆಯಸುಸಂಧೀ || 108 ||

ಈಶಾಪರಾಮತಾರನ ವಿಬುಧನುತನ ಭವ | ಪಾಶನಾಶಕ ಕೆರೆಯಪದ್ಮ ಣಾರ್ಯನ ಲಸ | ಚ್ಛ್ರೀಶಿವಾದ್ವೈತಸಾಕಾರ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ನಾ || ಈಶುದ್ಧಚರಿತಮಂ ತಿಳಪಿದರ್ಗೋದಿದ | ರ್ಗಾಶಿಯಿಂ ಕೇಳ್ದರ್ಗೆ ಭುಕ್ತಿಮುಕ್ತಿಗಳಂ ಮ | ಹಾಶುಭಂಗಳನಾಯುವಂಕೊಟ್ಟು ಗುರುರೂಪವಿಶ್ವನಾಥಂ ರಕ್ಷಿಪಂ || 109 ||

ಅಂತು ಸಂಧಿ 6 ಕ್ಕಂ ಪದ 454 ಕ್ಕಂ ಮಂಗಳಮಹಾ || ಶ್ರೀ || ಶ್ರೀ ||

---

ಶ್ರೀ ಗುರುರೂಪ ವಿಶ್ವನಾಥಾಯನಮಃ.

7 ನೆಯ ಸಂಧಿ.

ಪಲ್ಲ || ಲಿಂಗಾರ್ಚನಂಗೆಯ್ದುತಲ್ಲಿಂಗದಂಗದೊಳ|ನಂಗಾರಿಯಚ್ಚರೂ ಹಂಕಂಡುಪನ್ನೆರಡು | ಪೊಂಗಳಂ ನಿಚ್ಚಮುಂ ಪಡಿಯಾಗಿ ಪಡೆದುಪದ್ಮರಸಾರ್ಯನೊಪ್ಪುತಿರ್ದ್ದಂ ||

ಪದ || ಧಿಷ್ಣ್ಯವರಧರ ವಿಗತತೃಷ್ಣಾಘರಜತಗಿರಿ | ದಿಷ್ಣ್ಯಸಾಷ್ಟಾರ್ಧ ವರ್ತಿಷ್ಣುಭಕ್ತಸ್ವಾಂತ |ಧಿಷ್ಣ್ಯಸ್ಥಲೋಕೇಶಜಿಷ್ಣು ನತಭವನಸತ್ರ್ಯಕೃಷ್ಣವರ್ತ್ಮಾರ್ಯಮಾನ|| ಧಿಷ್ಣ್ಯಶಿಷ್ಯಾರಿನುತ ಕೃಷ್ಣಕಂಕಾಳಕರ | ಧಿಷ್ಣ್ಯನೇತ್ರಾಪತ್ರಪಿಷ್ಣು ದಕ್ಷಸಹಿಷ್ಣು | ಧಿಷ್ಣ್ಯಗಣಸೇವ್ಯೋನ್ನದಿಷ್ಣುದನುಜನಿರಾಕರಿಷ್ಣು ಜಯ ವಿಶ್ವನಾಥಾ || 1 ||

ಅಂತುಧನಮಂಕನಕ ಮಂಧಾನ್ಯಮಂದಿವ್ಯ | ಕಾಂತೆಯರ ನಾಭರಣ ಮಂ ವಸ್ತ್ರಮಂರತ್ನ | ಮಂತೊಳಗುವನುಲೇಪಮಂ ಪಶುಕುಲಂಗಳಂ ಪರ್ಯಂಕತಲ್ಪಂಗಳಂ || ಇಂತಂತುಟೆಂಬುದೇನುಳ್ಳ ಸರ್ವಸ್ವಮಂ | ತಾಂತಡೆಯದೀಶಭಕ್ತರ್ಗಿತ್ತು ವೈರಕ್ತ್ಯ | ಸಂತೋಷದಿಂ ಪದ್ಮಣಾರ್ಯನಿರ್ಸ್ಪನಿತರ್ಕ್ಕೆ ಬೆಳಗಿನಂಕುರವಾದುದು || 2 ||

ಮೂಡಕೆಂಪೊತ್ತಿದುದು ಕಡುತಣ್ಣನಾಗೆಲ | ತೀಡಿತಂಬುಜಗರ್ಭ ದಿಂದೆಪೊರಮಡುವಳಿಯ | ಗಾಡಿಯಿಂಚರಮುಣ್ಮಿದುವು ಪಿಸಿಲ್ವಕ್ಕಿಗಳೊಳ್ಗೇಡಾದುವೊಳ್ಪಸಿಲ್ಗೇ || ಬಾಡಿತುತ್ಪಲನಿಯ ಮೊಗಂ ಜೊನ್ನವಕ್ಕಿಗ | ಳ್ವಾಡಳಿದವಿಂದುವಿನ ಕಾಂತಿವಿಭ್ರಾಂತಿಯಾ | ಯ್ತಾಡಲೇಂಸೊಡರ್ಗಳಗುಮಸುಳಿಸಿತುವಿಹಗಕುಲದುಲಿಪಾದುದನಿತರಲ್ಲೀ || 3 ||

ನರರಸಾಶ್ರಯಿಸಿದೀಬಾಹ್ಯತಮವಂತಿರ | ಸ್ಕರಿಸಲಾನಾರ್ಪೆನಲ್ಲದೆಯಂತರಂಗದುರು | ತರತಮವನಳೆಯಲ್ಸಮರ್ಥನೇ ಅಂತದಂಪರಿಹರಿಪಶಕ್ತನಾದಾ|| ಗುರುವೈದನವನಂಘ್ರಿಯಂತೋಪ್ಪೆನಾನೆಂಬ | ಪರಿಯಂತೆದಿನಕರನೊಗೆದನಿಂತು ಲೋಕಕ್ಕೆ | ಪುರುಷಾರ್ಥಿಯಾದ ಕತದಿಂರವಿಗೆ ಲೋಕಬಾಂಧವನೆಂಬಪೆಸರಾದುದು || 4 ||

ಇಂತಪ್ಪಸೂರ್ಯೋದಯಕ್ಕಿಂದೆ ಮುನ್ನಮೋ | ರಂತೆಸದ್ಬ್ರಾಹ್ಮೀಮುಹೂರ್ತದಲ್ಲೇಳ್ದುಶೌ | ಚಾಂತರಮನೆಸಗಿ ಮಂತ್ರಿತಸುಲಿಂಗೋದಕದಿನಾಸ್ಯಮಂ ಪ್ರಕ್ಷಾಲಿಸೀ || ಸಂತಸದೆ ಪದಕಮಲಸೇವನಾಪೇಕ್ಷೆಯಿಂ | ದಂತಡೆಯದೆಯ್ತಂದಮರಿಯಂಚೆಗಳೊಇವೆಂ| ಬಂತೆಸೆವಪಳುಕುಪಾವುಗೆಗಳಂಮೆಟ್ಟಿ ಸರ್ವದಃನುತೆಗೃಹಮನೆಯ್ದಿ || 5 ||

ಸುರುಚಿರಾಲಂಕೃತೋತ್ತಮದಿವ್ಯ ಪೀಠದೊ | ಳ್ಪರಮನುನುವಂಜಪಿಸುತಮಲಪದ್ಮಾಸನ | ಸ್ಥಿರತೆಯಿಂ ಪೂರ್ವಮುಖವಾಗಿ ಕುಳ್ಳಿರ್ದುಭಯಶುದ್ಧಿಯಂರಚಿಸಿಮೇಲೆ || ವರಕಾಷ್ಠಮೌನಮನೆಸಗಿ ಲಸಿತಭಸಿತಮಂ | ಭರದಿನಾಗ್ನೇಯೋಕ್ತಿಯಿಂದೆ ಸಂಕಲ್ಪಿಸು | ತ್ತಿರದಗ್ನಿರಿತಿಮಂತ್ರದಿಂ ಮಧ್ಯಮಾನಾಮಿಕಾಂಗುಷ್ಠದಿಂದೆತೆಗೆದು || 6 ||

ಕರಮೆ ಭಸ್ಮಜ್ಯೋತಿರುಕ್ತಿಯಿಂ ನಮಿಸಿಯಂ | ತಿರದಗ್ನಿರಿತ್ಯಗ್ನಿರಸ್ಮಿದ್ವಿಮನುಗಳಿಂ|ದುರುತರಾವಯವಸಂಸ್ಪರ್ಶನಮನೆಸಗಿ ಯೋಂಹ್ರೋಮೆನಿಪ್ಪುಪಸರ್ಗದಿಂ || ಸ್ಫುರಿಪೀಠಮನುವ ನೊರೆವುತೆಭಸ್ಮಮಂಬಳಿಕೆ | ಭರದಿಂಗ್ರಹಿಸಿವಾಮಕರತಲದೊಳಿಟ್ಟುಶುಭ | ಕರಮೂಲಮಂತ್ರದಿಂ ರುದ್ರಗಣಸಾಪಾರಮಭಿಮಂತ್ರಿಸುತೆಪಾಳಿಯಿಂ || 7 ||

ಪಂಚಪ್ರಣವಸಬಿಂದುಕಪಂಚಬೀಜಪೂ | ರ್ವಾಂಚಿತೇಶಾನಾದಿಪಂಚ ಮಂತ್ರಂಗಳಿಂ | ಚಂಚಚ್ಛಿರೋಮುಖಹೃದಯನಾಭಿಪದವೆಂಬ ಪಂಚಸ್ಥಲಂಗ ಳಲ್ಲಿ || ತಾಂಚದುರೆಸೆಯೆಸಭೂತಿನ್ಯಾಸವಮಂ ಮಾಡಿ | ಪಂಚಾರ್ಣಮನುವನೊ ರೆವುತೆ ಸಂಹಿತಾಮನುಗ | ಳಿಂಚಾರುಮಂತ್ರಿತಮೆನಿಪ ಭಸ್ಮಮುಷ್ಟಿಯಂತೆಗೆದು ಮಾನಸ್ತೋಕದಿಂ || ೮ ||

ನೆರೆಯುಲಭಿಮಂತ್ರಿಸುತ್ತೀಶಮನುವಿಂದೈದು | ತೆರದಿಂ ಶಿರವನಾಪು ರುಷಮಂತ್ರದಿಂನಾಲ್ಕು | ತೆರದಿಂಮುಖವನಘೋರಾಣುವಿಂದೆಂಟುತೆರದಿಂ ಹೃ ದಯವಮಂ ಯತ್ನದಿಂ || ಉರೆವಾಮದೇವಾಖ್ಯಮಂತ್ರದಿಂಪದಿಮೂರು | ತೆರ ದೆನಾಭಿಯನಂತೆ ಸದ್ಯಾಖ್ಯಮಂತ್ರದಿಂ | ಮೆರೆವ ಪಾದವನೆಂಟುತೆರದೆ ಸರ್ವಾಂ ಗವಮಂ ಸದ್ಯೋಹೃದಯಮನುಗಳಿಂ || ೯ ||

ಕ್ರಮದಿನುದ್ಧೂಳಿಸಿಕನದ್ಬ್ರಹ್ಮಮನುಗಳಿಂ | ದೆಮಗುಳೆವಿಭೂತಿಯಂತೆ ಗೆದಗ್ನಿರಿತಿಯೆಂಬ | ಸುಮಹದಣುವಿಂಮಂತ್ರಿಸುತ್ತ ಪೋಮಾಪ ಇತಿಮಂತ್ರ ಮಂತ್ರಿತವಾರಿಯಿಂ || ವಿಮಲಪಂಚಾಕ್ಷರೀ ಮನುವನೊರೆವುತೆಕಲಸಿ | ಯ ಮಿತತ್ರಿಯಾಯುಷಮುಖತ್ರಿಯಂಬಕ ಮನುಗ | ಳಮರಲ್ಪಿಸುತುಂತ್ರಿಪುಂಡ್ರ ಮಂ ಮೂವತ್ತೆರಳ್ತಾಣದಲ್ಲಿಧರಿಸಿ || 10 ||

ಲೀಲೆಯಿಂ ಪ್ರಾಣಂಗಳಂ ಸಮಾಯಾಮಿಸು | ತ್ತಾಲಾಪಿಸುತೆ ಸಮ ಸ್ತಯೆನಿಪ್ಪಸೂಕ್ತಿಯಿಂ | ಲೋಲಮತಿಸಂಕಲ್ಪಮಂ ಮಾಡಿರುದ್ರಾಕ್ಷವೃಕ್ಷ ಯೆಂದೆನುತೆನಮಿಸಿ || ಲಾಲಿತಸುಪೇಟಿಕಾಂತಸ್ಥರುದ್ರಾಕ್ಷಮಂ | ಶೂಲಿಮಂ ತ್ರವನೋದುತುಂಪಿಡಿದು ನಿಜಕರದ |ಮೇಲಿಟ್ಟುಕೊಳುತುವೋಂ ಹ್ರೂಮಾದಿಸ ವ್ಯಷ್ಟಿಮಂತ್ರಕ್ರಮದೆಧರಿಸುತೇ || 11 ||

ನನ್ನಿಯಿಂ ಶ್ರೀಸದಾಶಿವಯೆನುತೆ ಶಿಖೆಯೊಳೊಂ | ದಂನೆತ್ತಿಯೊಳ್ವಹ್ನಿ ಯೆನುತೆಮೂರಂಶಿರದೊ | ಳುನ್ನತಂಷಟ್ತ್ರಿಂಶದೆನುತೆ ಷಟ್ತ್ರಿಂಶತ್ತನುರೆಕರ್ಣಯು ಗಳದಲ್ಲಿ || ಚನ್ನಮರೆಸೋಮಾಯಯೆನುತು ವೊಂದೊಂದಂಕ | ರಂನಲ್ಮೆ ಯಿಂತ್ರಿಯಂಬಕಯೆನುತೆ ಕಂಠದೋ | ಳ್ಮಾಂಸೆಗಳ್ವಮೂವತ್ತೆರಡನಹೋಶ್ರೀ ಕಂಠಯೆನುತುರದೊಳ್ಳೈವತ್ತುಮಂ || 12 ||

ಬಲದತೋಳೊಳ್ಸ್ವಾಸನಯೆನುತೆ ಪದಿನಾರ | ನೊಲವಿನಿಂ ಶ್ರೀಸೋಮಯೆನುತೆಡದತೋಳೊಳಂ | ತೆಲೆಲೆಪದಿನಾರ ನಾಬಲದ ಮಣಿಬಂಧದೊಳ್ದ್ವಾದಶಾದಿತ್ಯಯೆನುತೇ || ಸಲೆಪನ್ನೆರಡ ನಂತೆಕೇಶವಾದಿಯೆನುತ್ತೆ | ನಲಿದೆಡದ ಮಣಿಬಂಧದೊಳ್ಪನ್ನೆರಡನೊತು | ಲಲಿತಯಜ್ಞೋಪವೀತಾಕಾರವಾಗಿ ಶತರುದ್ರವಿದ್ಯಾಯೆನುತ್ತೆ || 13 ||

ನಿಲಸದಷ್ಟೋತ್ತರಶತಂಗಳಂಧರಿಸಿ ಮ | ತ್ತುಳಿದಕ್ಷಮಾಲೆಗಳ ನಾಮೂಲಮಂತ್ರದಿಂ | ದಳವಡಲಲಂಕರಿಸಿ ಮೇಲೆ ಶಂಕರನ ಸಾಕಾರಮಂ ನೆರೆಚಾನಿಸೀ || ಅಲಘುಮತಿಯೊಮಯಂ ಮೇಯೆಂದೆನುತ್ತೆನಿ | ರ್ಮಳಲಿಂಗಮಂ ನೆಜ್ಜೆಯಿಂತೆಗೆದು ನಿಜಕರ | ಸ್ಥಳದೊಳಿಟ್ಟಾಲಿಂಗ ಮೂರ್ಧದೊಳ್ಕುಸುಮವನಿರಿಸಿ ನಮಸ್ಕರಿಸಿ ಮುದದಿಂ || 14 ||

ಮೇಲೆಪಾದ್ಯಾರ್ಘ್ಯಾಚಮಾನಂಗಳಂಕಲಾ | ಶಾಲಿಸದ್ವಾಣುವಿನವೊದಲಸಟ್ಕಲೆಗಳಿಂ | ಶೂಲಿಗರ್ಪಿಸಿ ಪಂಚಗವ್ಯಪಂಚಾಮೃತಸುಪಂಚೋದಕಾದಿಗಳುಮಂ || ಲೀಲೆಯಿಂ ಬ್ರಂಹ್ಮಾಂಗರುದ್ರಾದ್ಯಣುಗಳಿಂವಿ | ಶಾಲಶಮತಾಂಬುಸಹಿತಂ ಸಾಂಗವಾಗಿ ಕರು| ಣಾಳುಗಭಿಷೇಕಿಸಿ ವಿಶದಭಸಿತಮಂತತ್ಪುರುಷಮಂತ್ರದಿಂದೆಧರಿಸೀ || 15 ||

ಪರಿಪೂರ್ಣಭಾವವಸ್ತ್ರಂಗೂಡಿ ನಿರ್ಮಲೋ | ತ್ತರವಸ್ತ್ರಮಂ ವಾಮದೇವಾದಿಕಲೆಯಿಸಿ | ತ್ತುರುಯಜ್ಞಸೂತ್ರಮಂ ಶಕ್ತಿತ್ರಯೋರುಗುಣಯುತಸೂತ್ರದೊಡನೆ ಕೂಡಿ || ನಿರುತವಾಯರಡನೆಯಕಲೆಯಿಂದಲಿತ್ತುವಿ | ಸ್ಫುರಿತಸದ್ವಾಸನೋತ್ಕರಗಂಧದೊಡನೆ ಶುಭ | ಕರದಿವ್ಯ ಗಂಧಮಂಚಿದ್ಘನಂಗಾನಾಲ್ಕನೆಯಕಲೆಯಿನನುಲೆಪಿಸೀ || 16 ||

ಅಕ್ಷತಗುಣಾಕ್ಷತೆಗಳೊಡನೆ ಸಿತದಿವ್ಯಕಲ | ಮಾಕ್ಷತಮುಮಂಪಂಚವರ್ಣಕಲಿತೋತ್ತಮತಿ | ಲಾಕ್ಷತಮುಮಂದಲಾಯೈದನೆಯ ಕಲೆಯಿನರ್ಪಿಸಿ ಸುಶಬ್ದಾದಿಯಾಗಿ || ಲಕ್ಷಿಪಕುಸುಮದೊಡನೆ ಕುಸುಮವಿಸರಂಗಳಂ | ತ್ರ್ಯಕ್ಷಂಗೆಷಷ್ಠೋರುಕಲೆಯಿಂದಲಂಕರಿಸಿ | ಸುಕ್ಷೇಮದಿಂ ನೋಡಿನೋಡಿ ತಣಿಯದತವಕದಿಂದೋವಿಯೋವಿಮುತ್ತೆ || 17 ||

ಕರಣಗುಣಗಣಮಸಾಮೂಲಾಗ್ನಿಯಿಂದಪಿಸಿ | ದುರುಧೂಪದೊಡನೆಪ ಟುತರಧೂಪಧೂಮುಮಂ | ಪರಮುಸಪ್ತಮಕಲೆಯಿನಿತ್ತು ನಿರ್ಮಲಚಿತ್ರಕಾಶಪ್ರ ದೀಪದೊಡನೇ || ಸ್ಫುರಿಪದೀಪಮುಸಾರತಿಗಳ ನಷ್ಟಮಕಲೆಯ | ನೊರೆವುತರ್ಪ್ಪಿ ಸಿಸುಖಾಸುಖಮನಳಿದಾತ್ಮನೆಂ | ಬುರುತರಸದುಪಹಾರದೊಡನೆ ಸದ್ರಸಮಿಳಿತ ಮಾಗೆಸೆವನ್ನೈವೇದ್ಯಮಂ || 18 ||

ನೇಪದಿಂತನ್ನವಮಕಲೆಯಿನರ್ಪ್ಪಿಸಿವಲಂ | ಸ್ವಾಹಾಂತಪಂಚಾರ್ಣದಿಂ ದೆಪಾನೀಯಮಂ | ಮೋಹಾರಿಗಿತ್ತಾಚಮನಮನೇಳ್ಗೊಳಮಲಶಂಭುಗೆ ಹೃದ ಯಮಂತ್ರದಿಂ || ವ್ಯಾಹಾರಿಸುತ್ತಿತ್ತು ಮುಖವಾಸಮಂಪುನ | ಸ್ಸ್ವಾಹಾಂತಸ ತ್ರ್ಯಣವದಿಂದಿತ್ತುತದ್ಗುಣ | ಪ್ವ್ಯಾಹಾಬ್ಧಿತಾಂಬೂಲದೊಡನೆ ತಂಬುಲಮಂ ನವಾ ಗ್ರದ್ವಿಕಲೆಯಿನಿತ್ತು || 19 ||

ಮಣಿದು ನೀರಾಜನಮನವರಂತ್ಯದಾದ್ವಿಕಲೆ | ಯಣುವಿಂಬೆಳಗಿ ಲಸ ದ್ಘೃಣಿಯುತಾಪಿಲದಿವ್ಯ | ಮಣಿಖಚಿತಹೇಮಭೂಷಣವ ನಾಸುಮನುವಿನ ಮೂರನೆಯ ಕಲೆಯಿನಿತ್ತೂ || ಭಣಿತಿಯಿಂ ಛತ್ರಚಾಮರ ತಾಲವೃಂತದ | ಪ್ರ್ಪಣಗೀತವಾದ್ಯನೃತ್ಯ ಮುಖೋಪಚಾರಮಂ | ಪ್ರಣವಪಂಚಾರ್ಣದಿಂಸ್ವಾ ಹಾಂತಮಾದುಚ್ಚಾರಣಮೆಸಗು ತಾರಾಧಿಸೀ || 20 ||

ಭವಸುಶರ್ವೇಶಾನಪಶುಪತಿಯೆನಿಪ್ಪಿವ | ಕ್ಕೆವಿಶಿಷ್ಟರುದ್ರೋಗ್ರಭೀಮಮ ಹದೆಂಬಿವ | ಕೇವಲಂಚತುರ್ಥಿಯನಿರಿಸಿದೇವಾಯೋಂನಮೋಯೆಂದುಬೇರೆ ಬೇರೆ || ತವೆಕೂಡಿದೀಯಷ್ಟಮನುವಿಂಮದನತಿಮಿರ | ರವಿಗಪಿಂಸಾದ್ಯಷ್ಟಪು ಷ್ಪದೊಡನಷ್ಟಪು | ಷ್ಪವನಿತ್ತುಮೇಣಾತ್ರಿಯಂಬಕಮನುವಿನಿಂದೆಮಂತ್ರಪುಷ್ಪ ವನರ್ಪ್ಪಿಸೀ || 21 ||

ಚಿನ್ನಿಧಿಗಖಿಲನಮಸ್ಕಾರಾಧಿಪತಿಗೆಸಂ | ಪನ್ನಶತರುದ್ರೀಯಮಧ್ಯಗತ ವಿದ್ಯೆಯಿಂ | ದಂನಲಿವುತ್ತೈದುಸೂಳ್ಪ್ರಾಣಾರ್ಪಣಾಂತರನಮಸ್ಕಾರದೊಡನೆ ಕೂಡೀ || ಚೆನ್ನಿಂನಮಸ್ಕರಿಸಿಶಾಂತಿಪುಷ್ಪಾಂಜಲಿಯು | ತೋನ್ನತಸುಪುಷ್ಪಾಂ ಜಲಿಯನೊಲ್ದುಮೂರುಸೂ | ಳ್ಸನ್ನುತೋಂಕಾರತ್ರಯವನುಚ್ಚರಿಸುತಾಚರಿಸಿ ಪರಮಭಕ್ತಿಯಿಂದೆ || 22 ||

ಅನುನಯದೆನೋಟದೊಡನಾನೋಟವಮರ್ದುಸೊಗ | ಸೆನಿಸಿಬೆಂಬತ್ತಿ ಯತ್ತಿತ್ತಲೇನಾನುವೊಂ | ದಿನಿಸುಂಚಲನಮಿಲ್ಲದಕ್ಷಿಗಳ್ಸಿಲ್ಕೆಶಿವಮಂತ್ರೋಚ್ಚ ರಣದಮಿಡುಕಿಂ || ಮಿನುಪಕೆಂಬಲ್ವೆಳಗುಪಸರಿಸಿವದನವೆಸೆಯೆ | ಮನದಮ ಧ್ಯದೊಳಾಶಿವಧ್ಯಾನಮೊಪ್ಪೆಮೇ | ಣನಘನೀಜತುರಂಗದಿಂತ್ರಿವಾರಂನಯನದಿಂ ಪ್ರದಕ್ಷಿಣಮನೆಸಗೀ || 23 ||

ವಿಧ್ಯುಕ್ತಮಾಗಿರಚಿಸಿರ್ದಜಪಮಾಲೆಯಂ | ಮಧ್ಯಮಾನಾಮಿಕಾಂಗು ಷ್ಠದಿಂಗ್ರಹಿಸಿಯಾ | ರಾಧ್ಯತಿಲಕಂತ್ರಿವಾರಂಪ್ರಾಣಮಂಸಮಾಯಾಮಿಸಿಮ ನಃಪವನರಂ || ಸಾಧ್ಯತೆಯಿನೊಡಗೂಡಿತನ್ಮನಸ್ಸರಸಿರುಹ | ಮಧ್ಯದೊಳಗ ವಿಲತೇಜೋಪೀಜಮಾದಸ | ನ್ಮೇಧ್ಯಚಿನ್ಮಯಶಿವಾಕೃತಿಯನುರೆಜಾನಿಸುತುಭ ಯರವೀಂದುಗಳನಡುವೆ || 24 ||

ಲಲಿತಸ್ವತನುಚಿಂತನಂಗೆಯ್ದಮೃತಮಯೋ | ಜ್ವಲನಾಗಿಶಕ್ತ್ಯುದಯ ಮರಿದುತಚ್ಛಕ್ತಿಯೋ| ಳ್ಲಿಲಿಸಿಮನುವಂಸಗರ್ಭಂಗೆಯ್ದುಮೇಣ್ನಿಜಶ್ವಾಸಾವಸಾ ನಂಬರಂ || ಸಲೆಶಾರಮಂಪೂರಕದಿನಮರ್ದುತನ್ನಶ | ಕ್ತ್ಯಲಘುತೆಯಿನಾಚ ರಿಸಿಕುಂಭಕಮನಾದ್ವಯಂ | ಫಲಿಸೆರೇಚಕದೆನಾಮನುವನೆಸಗುತೆವಾಚ್ಯವಾ ಚಕಾಂತರಮನರಿದು || 25 ||

ಕ್ರಮದಿಂದೆವರ್ಣದಿಂವರ್ಣಮಂಪದದಿಂಪ | ದಮನವರಿಸುತ್ತೆಶಬ್ದಾ ರ್ಥಮಂಚಿಂತಿಸು | ತ್ತಮಲಿನಗವಾಗಮದ್ವಯಯೋಗದಿಂಮೂಲಮಂತ್ರಮಂ ಸ್ಮರಿಸುತೊಲವಿಂ || ಅಮಮಜವವಾಗದೆವಿಲಂಪತಂಬುಗದೆವಿ | ಭ್ರಮಬು ದ್ಧಿಪೊರ್ದದೊಂದೊಂದುಮಣಿಗೋರ್ವೊರ್ಮೆ | ಸುಮನುಪೂರಿಸೆಜಪವನಪ್ಪಿ ಸಿಯಘೋರಾದ್ಯಣುತ್ರಯದೆನುತಿಸಿಮತ್ತಂ || 26 ||

ಶ್ರೀರಮಾಕರನಾಕಕೋಟಿತೃಣತಾಯಮಾ | ತ್ವಾರುದ್ರಚುಕ್ರುಧಾಮೇ ತಿಯುಕ್ತ್ರಣುತಾಯ | ಗೌರೀಶ್ವರಾಯಾಗ್ನಿವಿಾಳೇಪುರೋಹಿತಮಿತಿಸ್ತುತಾಯ ಮಹಾತ್ಮನೆ || ಚಾರುಶಿವಏಕಃಪುನರ್ಧ್ಯೇಯಇತ್ಯಥ | ವಾರಾವವೇದಿತಾ ಯಬ್ರಹ್ಮಣೇನಮಃ | ತೀರಿತಾಯನಮಶ್ಶಿವಾಯೇತಿಯಜುಷಾಪ್ರಣಮಿತಾ ಯತಸ್ಮೈನವೋ || 27 ||

ಎಂದಿಂತುಪಶುಪತಿಗೆಗದ್ಗದಾಲಾಪದೊಡ | ನೊಂದಿದುತ್ತಮಘನಸ್ತುತಿಯನಸ್ಪರ್ಶಿಸಿನಿಜಾ | ನಂದಾಶ್ರುಕಣ್ಗಳೋಳ್ಗಳಧಳನೆಸುರಿಯೆನುಣ್ಗೊರಳಸೆರೆ ಬಿಗಿಯೆಪುಳಕಂ || ಸಂದಣಿಸಿತನುವಿನೋಳ್ಸುಡಿಗಟ್ಟಿಬೆಮರ್ವರ್ಣನಿಗ | ಳಿಂದಂಗಯಷ್ಟಿಥೊಪ್ಪನೆತೋಯೆನವಕಂಪ | ನಂದೋರಲಿಂತುಟುಶಿವಾವೇಶದಿಂಸಾತ್ವಿಕಂಪೊಣ್ಮೆ ಪೂಜಿಸುತ್ತೇ|| 28 ||

ಅಪರಾಧಯೆನುತುಂಸಪಸ್ತ್ರಾಣಿಯೆನುತೆಬಳಿ | ಕುಪಮೆಯಿಂದಂಕ್ರಿಯಂ ತೇಹರ್ನಿಶವೆನುತ್ತೆ | ಸುಪದದೆಮುಯೂಯೆನುತೆದಾಸೋಹಮಿತಿಮೂಮೆನುತ್ತೆ ಮತ್ಪ್ರಾಯೆನುತ್ತೆ || ಕೃಪಣೋಕ್ತಿಯಿಂಕ್ಷಮಸ್ವಯೆನುತ್ತೆಕೂಡೆನಿ | ಷ್ಕಪಟದಿಂಭಕ್ತವತ್ಸಲಯೆನುತ್ತೀತೆರದೆ | ಜಪಿಸುತೆಜಗದ್ಗುರುಜನಾರ್ದನ ನುತಂಗೆವಿಜ್ಞಾಪನಂಗೆಯ್ವುನಲವಿಂ || 29 ||

ಸದಮಲಾನುಪಮನಿಜಲಿಂಗದಂಗದಚೆಲ್ವ | ನೊದವಿದಮಹಾನಂದದಿಂ ನೋಡಿನೋಡಿತಣಿ | ಯದತವಕದಿಂಕಣ್ಗಳಮರ್ದಪ್ಪುತರೆಮುಚ್ಚುತೊಡನೆ ಮೂರ್ಛಿಸುತಳ್ಕುತೆ || ಪದುಳಿಸುತ್ತೆಚ್ಚರುತ್ತಾಳುತೇಳುತೆನಿಮಿರು | ತಿದಿರ್ಗೊಳುತೆಗಂಟಿಕ್ಕುತಡರುತ್ತೆಜುಂಪಿಸು | ತ್ತದಿರುತ್ತೆಪೊಂಗುತ್ತೆಪೊಣ್ಮುತ್ತೆಪೊಳೆಯುತ್ತೆಮೆಯಿಡದೀತೆರದೊಳೀಕ್ಷಿಸಿ || 30 ||

ಲಲ್ಲೆಗೆಯ್ಯುತ್ತೆದೈನ್ಯಂದೋರಿಕರೆಯುತ್ತೆ | ಚಲ್ಲವಾಡುತ್ತೆಚದುರೊದವೆಬಣ್ಣಿಸುತೆಕುಳಿ | ಗ್ಗಲ್ಲಪುತ್ಥಳಿಯಂತೆಕರಗುತಲರ್ಕಿವರಿಯಂತೆಜಿನುಗುತೆಜೋಲುತೆ || ಕೆಲ್ಲೆನೋಟದೊಳೀಕ್ಷಿಸುತೆನೇಹಮುರ್ವೊಗ | ದಲ್ಲಿಮೊಗವಿಟ್ಟುಮುಂಡಾಡಿಮುದ್ದಿಸುತೆಪರ | ವೋಲ್ಲಾಸದಿಂಗಡಲೊಳರಸಂಚೆಯಂತಿಡಾಂದೋಲಕೇಲಿಯನೆಸಗುತೇ || 31 ||

ಜಾಂದೊರೆದಲೆಯನವೊಗಕೊಂದರಲ್ಮರೆಯಾಗೆ | ಕಂಪಿಕುಂದುತ್ತೆಕೂಡೆಜ್ಜತುರ್ಣನಸುನಗುತೆ | ಹೆಂದದಾನಂದದಿಂದೆನ್ನಯ್ಯಯೆನ್ನಮುದ್ದಂಸಲಿಸಿಪೊರೆವತಂದೆ || ಸೌಂದರ್ಯನಿಧಿಯೆಯೆಂದಂಕಿಸುತ್ತೊಡನೊಡನೆ | ಚಂದದಿಂತೊದಲಸುತನಾದನಂನಿನ್ನಣುಗ |ಗಂದನಂಕೈಬಿಡದಿರಯ್ಯೋಕೃಪಾದುಗ್ಧಸಿಂಧುವೇಯೆಂದೊರಲುತೇ || 32 ||

ಇಂತುಗುರುವರನಮಲಶಿವನನರ್ಚಿಸುತುಮಿರೆ | ಯೆಂತವನಭಕ್ತಿಗೊಲ್ದಾಲಿಂಗಗರ್ಭದೊಳ | ನಂತಕೋಟ್ಯರ್ಕತೇಜೋರಾಜಿಯಂಪಳಿದುನಳನಳಿಪಧವಳಾಂಗದಿಂ || ಎಂತೆಂಬೆನತುಳಮೋಹನಪೊಲ್ದುಮುದ್ದುಮೊಗ | ವಂತಾಳ್ದಪ್ಪೋಲ್ಮೆರೆವಮೊಗವ್ಯೆದರಿಂದಿವ್ಯ | ಕಾಂತಿಸಂತತಿಕರಂಕಣ್ಗೆತ್ತಮೂಳ್ಕೆಯಿಂಥಳಥಳಿಪಕಣ್ಮೂರರಿಂ || 33 ||

ಪೊಳೆವಲಾವಣ್ಯಕಲ್ಲೋಲದೀರುಪದ ಶಾಟಿ | ಗಳ ಪ್ರೋಲೊಪ್ಪುವಪತ್ತುನಳಿತೋಳ್ಗಳಿಂ ಸದು | ಜ್ವಳ ಮಹಾತ್ಮ್ಯಂಗಾರ ರಸತರಂಗಿಣಿಯೊಳೊಗೆದರುಣಾಂಬುಜಗಳಂತೆ || ತೊಳಗುವಪದಾಬ್ಜದ್ವಯಂಗಳಿಂ ಸಿರಿಮುಡಿಯೊ | ಳಳವಟ್ಟ ಪೆರೆಬಾಂದೊರೆಗಳಚೆಲ್ವಿಂ ಕಿವಿಗ | ಳೊಳಗಮರ್ದ ಕೆಂಬರಲತಲೆಯುಪಾವುಗಳಪಾಡಿಂ ಕೊರಲಪಸಿಯಬಿಸದಿಂ || 34 ||

ಪೆಣ್ಣನಾಲಿಂಗಿಸಿದವಾಮಾಂಗದಿಂ ಪುಲಿಯ | ಬಣ್ಣದೊವಲುಟ್ಟುರಂಜಿಪಕಟೀಭಾಗದಿಂ | ತಿಣ್ಣನಾದಾನೆ ಸಮ್ಮದಪೊದಕೆಯಿಂ ಸನಾನಾಭಯಾದಿಗಳಪಡಪಿಂ || ಕಣ್ಣಮಿನುಗಿಂತೊಳಗುವುಂಗುಟದಗಾಡಿಯಿಂ | ಬಣ್ಣಿಸಲ್ಕಾರದೀ ಪರಿಯರೂಪಿಂದೆ ಬಿಡು | ಗಣ್ಣರೆರೆಯಂ ವಿಶ್ವನಾಥಂ ಪ್ರಸನ್ನನಾದಂ ಭಕ್ತರುಘೆಯುಘೆಯೆನೆ || 35 ||

ಶಿವಶಿವಾಪೊಗಳ್ವೆನೆಂತೋದೇಶಿಕೋತ್ತಮನ | ನವಭಕ್ತಿರತಿಯುದೊಂದುವಿಲಾಸಮುಂ ರಂಜೆ | ಸುವ ಹರ್ಷದೇಪುರುಷನಾದುದೊ ಬಹುವಿಧಸ್ತುತಿಯೆಬಾಯ್ದೆರೆಯಾದುದೋ || ಅವಿಚಲನದನುವೆ ಮನವಾದುದೊ ಘನಕಾತ |ರವೆಕರಂಕಣ್ಗಳಾದುವೊ ಸಾತ್ವಿಕವೇ ದೀಪಿ | ಸುವ ತೊಡಿಗೆಯಾದುದೋಯೆನೆಪರವಶೀಭೂತನಾಗಿ ಯೊಡನೊಡನೆರಗುತ್ತೇ || 36 ||

ಪೊಂಗುತುಂ ಪೊರೆಯೇರುತುಂ ಕರಗುತುಂ ಕೊರಗು | ತುಂ ಗಾಡಿಯಿಂ ದುಬ್ಬರಿತುಂ ಕೊಬ್ಬರಿತುಂ ಪಬ್ಬರ | ತುಂ ಗಮಕವಮರೆಕುಕಿಲಿರಿವುತುಂ ಕೂಗುತುಂ ತೂಗುತುಂ ತೊನೆದಾಡುತುಂ || ಸಿಂಗರದನುಲಿವುತುಂಕೆಲೆಯುತುಂಮಲೆಯುತುಂ | ಮಂಗಲಾಕಾರನಂ ಮಿಗೆನೋಡಿನೋಡಿ ಪರ | ಸಿಂಗದಾನಂದದಿಂ ಬೆಳ್ವಂತಿರೊಚ್ಚತಂ ಬಾಗಿನಲಿನಲಿದಾಡುತ್ತೇ || 37 ||

ಪ್ರತಿಯಿಲ್ಲದುಜ್ಜ್ವಲನಿರಾವರಣ ವಸ್ತುವಿದೆ | ಯತಿಗಳಾನಂದಪ್ರಕರ ವಾದಿ ಮೂಲವಿದೆ | ಮತಿಗಗೋಚರವಾದಖಂಡ ಪರಿಪೂರ್ಣಾದ್ವಿತೀಯ ಚಿನ್ಮಯನಿಜವಿದೇ || ಶ್ರುತಿತತಿಯನುತಿಗೆಸಿಲ್ಕದ ಮಹಾಬ್ರಹ್ಮವಿದೆ | ನತಹೃತ್ಕಮಲವಿಸ್ಫುರಿತ ಪರಂಜ್ಯೋತಿಯಿದೆ | ಶತದಳಾಂಬಕ ಮುಖಾಮರಕುಲಸ್ವಾಮಿಯಿದೆಯೆನುತಡಿಯಮೇಲೆಬೀಳ್ದು || 38 ||

ಎನ್ನ ಭವತಿಮಿರಭಾನುವೆ ಕಾಮಧೇನುವೇ | ಯೆನ್ನ ಸಾಳ್ಗೊಂಡಗುರುವೇ ಶರಣಸುರತರುವೆ | ಯೆನ್ನ ಕಾರುಣ್ಯರಸವರ್ಷವೆ ದಿವ್ಯಪರುಷವೇಯೆನ್ನ ನಿಧಿಯೆ ಸುಧೆಯೇ || ಎನ್ನ ಚಿತ್ತಿನತಿರುಳೆ ಯೆನ್ನ ಪುಣ್ಯದಪುರುಳೆ | ಯೆನ್ನ ಮುಕ್ತಿಯನಿಲವೆ ಯೆನ್ನ ಭಕ್ತಿಯಬಲವೆ | ಯೆನ್ನ ನನ್ನಿಯೆ ಯೆನ್ನ ಚೆನ್ನಿಗನೆ ಯೆನ್ನ ಗತಿಯೇಮತಿಯೆ ಧೃತಿಯೆ ಪತಿಯೆ || 39 ||

ಘನರಸಶಯನತನಯಮದಮಥನ ಧವಳಘನ | ಘನವರದ ಶತದಳನಯನ ನಯನಪದಕಮಳ | ವನದಗಮನ ಧವಶತದಳಪರ ತಪನ ದಹನನಯನ ಪರತರಗದಹರ || ನನಕನತ ನಮದಶಮನ ಶಮನಶಮನ ಭವಶ | ಮನಭಯಶಮನ ಗರಳಧರಗರಳ ಧರಪರಗ | ಮನ ತನಯ ಶಶಧರ ಧರಧರವರಭವನಕನದನಘ ಭವಹರಪರಮವ || 40 ||

ಗಣಪರನೆ ಭಕ್ತವತ್ಸಲನೆ ದಾನಿಗಳತಲೆ | ವಣಿಯೆ ಶಿವಧೋಶಿವಧೊರಕ್ಷಿಸೆಂದಿಂತು ಮಣಿ | ಮಣಿದು ಕೀರ್ತಿಸುವಗುಣಮಣಿಯ ಭಾವಕೆಮೆಚ್ಚಿಗುರುರೂಪ ವಿಶ್ವನಾಥಂ || ಫಣಿಕಂಕಣಾಲಂಕೃತೋರುಕರಮಂ ನೀಡಿ | ಪಣೆವಿಡಿದು ನೆಗಪಿಗಾಢಾಲಿಂಗನಂಗೆಯ್ದು | ತಣಿದೆನೆಲೆಮಗನೆ ನಿಂನೇಕನಿಷ್ಠೆಗೆ ಬೇಡುಬೇಡಭೀಷ್ಟವನೆಂದೆನೇ || 41 ||

ನೀರರರಸಾನಿಧಿಯಿರಲ್ಕಿರಿದುತಿರಿದು ಬಾ | ಯಾರಿ ಬದುರ್ಕುವರೆನೀನಿಂತೆನ್ನೊಳಿಡಿದಡನಿ | ತೋರುತಿರಲುಳಿದ ಭೋಗಾಕಾಂಕ್ಷೆಯೇಕೇಳ್ವುದೆನ್ನ ಬಿನ್ನಪವನೊಂದಂ || ಬೇರೊಂದನೊಲ್ಲೆನಾಂ ಲಿಂಗಸೈಜೈಕ್ಯರನೆ | ತೋರಿಸಾಶಿವನೆ ನಿಮ್ಮಯಧರ್ಮವಾನವರ್ಗೆ | ಮಾರುವೋದಪೆನೆನುತ್ತೀತೆರದೊಳೈದು ಗೀತದೊಳೀಶನಂಕೇಳಿಸೆ || 42 ||

ಪನ್ನಗಾಭರಣನಾತನ ಭಕ್ತಿಯೋಗಮಂ | ತಾಂನೋಡಿ ತಲೆದೂಗಿ ಮುಂಪಾಡಿ ಯೆನ್ನಣ್ಣ | ಯೆನ್ನತೆತ್ತಿಗ ಯೆನ್ನಭದ್ರಗಜವೇ ನಿನಗೆಕೆಲವುಪಗಲ ವನಿಯಲ್ಲೀ || ಮನ್ನಿಮಿತ್ತಂ ಪ್ರವರ್ತನಮುಂಟದಾಗಿ ನಿ | ನ್ನುನ್ನತ ಚರಾರ್ಚನಕೆ ಕೇಳಿಂದುಮೊದಲಾಗಿ | ಪನ್ನೆರಡುಪೊಂಗಳಂ ಪ್ರತಿದಿನಂ ತಪ್ಪದೀತೀರ್ಥಪಾತ್ರದೊಳಿರಿಸುವೆಂ || 43 ||

ಶರಣನೀನಂತದಂ ಕೈಕೊಳ್ವುದೆಂದೊರೆದು | ನಿರುಪಮಸ್ನೇಹಮಂ ಬೀರಿ ಮನ್ನಿಸಿಶಿವಂ | ಕರದಲಿಂಗದೊಳಡಂಗಲ್ಕ ಭವಕೃಪೆಗೆಚೋದ್ಯಂಬಡುತ್ತೆ ತಲ್ಲಿಂಗಮಂ || ಅರರೆಕಣ್ಗೊತ್ತಿ ಯುರಕೊತ್ತಿ ವಂದಿಸಿ ಸೆಜ್ಜೆ | ಯರ ಮನೆಗೆ ಬಿಜಯಂಗೆಯ್ಸಿ ಬಳಿಕವಾ ಮಹೇ | ಶ್ವರ ಪದಾಂಬುವನಮಲಶಂಬದೊಳ್ತೀವಿ ಶಂಭುಧ್ಯಾನಯುಕ್ತನಾಗೀ || 44 ||

ವರಗಂಧಪುಷ್ಪಾಕ್ಷತಾದಿಗಳನರ್ಪಿಸಿ ಸು | ಚರುವಂನಿವೇದಿಸಿ ಇಮಂ ಮೇಯೆನಿಪ ಮನುವ | ನೊರೆವುತಭಿಮಂತ್ರಿಸಿಬಳಿಕ್ಕೆ ಮಾತ್ಸಾರುದ್ರಎಂಬ ಕದ್ರುದ್ರಯೆಂಬಾ || ಪರಮಮಂತ್ರಂಗಳಿಂ ಸಮ್ಮಾರ್ಜನಂಗೆಯ್ದು | ಕರಮೆಸ ರ್ವೊರ್ವೈಯೆನಿಪರುತಂ ಸತ್ಯಮೆನಿ | ಪೆರಡರಿಂ ಪ್ರಾಶಿಸಿಶಿವೋಚ್ಛಿಷ್ಟಮಂ ಶಿವಾಣುಸ್ಮರಣದಿಂಸೇವಿಸಿ || 45 ||

ಭಯಭಕ್ತಿಪೂರ್ವಕಂ ಶರಣಸಭೆಗೆರಗೆ ಸ | ತ್ಕ್ರಿಯದಿ ನವರೀಕ್ಷಿಸುತ್ತಲಿ ಮಹಾಪುರುಷ ನಿ | ನ್ನಯ ದರ್ಶನಪ್ರಭಾವದಿನಪ್ರಮೇಯನಂ ಚಿತ್ರಭಾಮಯಕಾಯನಂ || ನಿಯತಮೆಲ್ಲರ್ಕಂಡೆ ವೀಕ್ಷಿಪೊಡೆನೀನೆರಡ | ನೆಯ ವಿಶ್ವಪತಿಯಲ್ಲದೇಂ ಜಾವಳನೆಜಯತು | ಜಯತೆಂದುಪರಸೆ ನಿಜನುತಿಗಳ್ಗೆ ತದ್ಭಕ್ತತತಿಯಕರುಣಂಬಡೆವುತೇ || 46 ||

ಒಳಿಕಭವಪಾದಾಂಬುಪಾತ್ರದೊಳ್ಗುರುವರಂ | ತಳಿರ್ಗಯ್ಯನಿಟ್ಟು ಶಿವನಿತ್ತಪನ್ನೆರಡುಪೊಂ | ಗಳ ಪೊಟ್ಟಳಂದೆಗೆದದರವಿತ್ತದಿಂ .ಸಕಲವಸ್ತುವಂ ತರಿಸಿಮುದದಿಂ|| ವಿಳಸಿತೋಜ್ವಳಬಹುವಿಧಾನ್ನಮಂ ಸಮೆಯಿಸಿವಿ | ಮಳಗಣಾವಳಿಗೂಡಿ ಲಿಂಗಾರ್ಪಿತಂಗೆಯ್ದು | ಚಳನಿಷ್ಠೆಯೆಂತೊತದ್ರವ್ಯದೊಳಿಭಕ್ತರಿಶೆದನಿತನೀವುತಿರೆನೋಡೀ || 47 ||

ಸೌಂದರಗಣಾಧೀಶ್ವರಂ ಪಾಡಿಪಡಿವೊಂಗ | ೪ಂ ದಾಸಿಮಯ್ಯನಂ ಬರವಿತ್ತು ಜೇಡಿಭರ | ದಿಂದೆ ತವನಿಧಿಯನಾಜೋಳಂ ಬಹುಪ್ರಕಾರದೆಭಜಿಸಿ ಪೊನ್ನಮಳೆಯಂ ‖ ಪಿಂದೆಶಿವನಿಂಪಡೆದದಂ ಕೇಳ್ದೆವೀಮಹಿಮ | ನಿಂದುಧನಮಂ ವಿರತಿಯಿಂಪಡೆದು ಜರಸೇಪೆ | ಗೊಂದಿಸಿದುದಂ ಕಂಡೆವೆಂದುಗಣತತಿವೊಗಳು ತಿರೆ ಪದ್ಮಣಾರ್ಯನೆಸೆದಂ ‖ 48 ‖

ಮದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದಭ್ರಮ ಕರಂದಲೀಲಾ ಪ್ರ | ಮದ ಪರವಶೀಭೂತ ಮಧುಕರೋಪಮ ಪದ್ಮಣಾಂಕ ಪ್ರಣೀತಮಾಗಿ ‖ ಸದಮಳಾಖಿಲ ಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣ ಕಥೆಯೊಳಿಂ | ತಿದು ಗುರುಶಿವಾರ್ಜನಂಗೆಯ್ದು ಪಡಿವೊಂ ಗಳಂ ಪಡದೇಳನೆಯಸುಸಂಧೀ ‖ 49 ‖

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶಕಕೆರೆಯ ಪದ್ಮ ಣಾರ್ಯನ ಲಸ | ಚ್ಛ್ರೀಶಿವಾದ್ವೈತ ಸಾಕಾರ ಸಿದ್ಧಾಂತ ಪ್ರತಿಷ್ಠಾಪನಾಚಾ ರ್ಯನ ‖ ಈಶುದ್ಧಚರಿತಮಂ ತಿಳಿಪಿದಗೋದಿದ | ಗಾರ್ಶಿಯಿಂ ಕೇಳ್ದಗೆ ಭುಕ್ತಿ ಮುಕ್ತಿಗಳಂ ಮ | ಹಾಶುಭಂಗಳನೀವುವಂಕೊಟ್ಟು ಗುರುರೂಪ ವಿಶ್ವ ನಾಥಂರಕ್ಷಿಪಂ ‖ 50 ‖

ಅಂತು ಸಂಧಿ 7 ಕ್ಕಂ ಪದ 192 ಕ್ಕಂ ಮಂಗಳಮಹಾ ಶ್ರೀ‖ ಶ್ರೀ‖

---

ಶ್ರೀ ಗುರುರೂಪ ವಿಶ್ವನಾಥಾಯನಮಃ.

---

8 ನೆಯ ಸಂಧಿ.

ಪಲ್ಲವಿ ‖ ಶಿವಭಕ್ತರೊಡಗೂಡಿ ಗುರುಕುಲಲಲಾಮ ನುಚಿ | ತವಿನೋದದಿಂ ಮಧುಸಮಯದಲ್ಲಿ ವನವಿಹಾ | ರವನಾಚರಿಸಿ ತಿರಿಗಿಪುರಶೋಭೆಯಂ ನೋಡುತೆಯ್ತಂದು ಸುಖದೊಳೆಸೆದಂ ‖

ಆಗ್ರಹಪ್ರಗ್ರಹೋರುಗ್ರಂಥಿದಗ್ರಹ ಗ | ದಾಗ್ರ ಜಾಡ್ಯಗ್ರೇಸಗಾಗ್ರಾ ವ್ಯವಾಗ್ರಮಾ | ವಿಗ್ರತ್ವದೋಗ್ರ ಮಾಯಾಗ್ರಹಾವಗ್ರಹವ್ಯಗ್ರತಾನಿಗ್ರಹ ಕರ ‖ ನಿಗ್ರಾಹ್ಯನಿಗ್ರಹಾಸುಗ್ರಾಕ್ಷ್ಯ ವಿಗ್ರಹ್ಯ | ನುಗ್ರಹೋದಗ್ರ ಭಯದಾಗ್ರಿ ಯವಿಷಗ್ರಾಹಿ | ಸುಗ್ರೀವವಿಗ್ರಹಾರ್ಧಗ್ರದಿತ ವಿಗ್ರಹೋವೋಗ್ರಜಯ ವಿಶ್ವ ನಾಥಾ ‖ 1 ‖

ಪರಮಹರ್ಷದಿನಿಂತು ಗುರುಕುಲಾಗ್ರಣಿಯಿರು | ತ್ತಿರೆ ಮೆಲ್ಲಮೆಲ್ಲನೆ ಹಿಮಂಪರಿಯೆ ಪೊಸವಿಸಿ | ಲ್ಪೊರೆಯೇರೆ ಮೆಯ್ಯಪಿರುಬುಗಳಪಂಗಿಲಸತ್ತ್ರಸನ್ನ ತೆಯ ನಪ್ಪುಗೆಯ್ದೆ ‖ ಕೊರಗಿದಂಬುಜವನಂ ಸೊಂಪೇರೆಬಲ್ಲಾಳಿ | ಸರಿದು ತಂಬೆಲರ ಕಾಲಾಟವಗ್ಗಳಿಸೆ ನಸು | ವೊರೆಯು ತುಂತುಂಬಿಸುಳಿದಾಡೆನೆರೆದುದು ವಾಗಿಯುಪಜಯಂ ಮಧುವಿನಜಯಂ ‖ 2 ‖

ಪರಿಯೆಮುದಮಂಪಾಗಿ ಕರೆಯೆಸೊಗಸಂಮಾವು | ನೆರೆಯೆಕಳಿಪೆಚ್ಚಿ ಸಸಿಮೆರೆಯೆ ಮಾಧವಿಪೂತು | ತೊರೆಯೆಲಜ್ಜೆಯ ನವನಿಜರೆಯೆತಪಮಂಯುವಿ ಗಳಿರಿಯೆನನೆ ಗಣೆಯೋಪರಂ ‖ ಮುರಿಯೆವಿರಹಿಯಗುಬ್ಬು ಬೆರೆಯೆಕುಸುಮೇ ಷುಕುಕಿ | ಲಿರಿಯೆಕೋಗಿಲೆ ದುಃಖವರೆಯೆ ಸುಪಿಜನಕೆ ಕ | ಣ್ದೆರೆಗುದು ವಸಂತಮಾಸಂ ಭೋಗಿತತಿಯುಮುಖವಿಕಾಸಂ ಸುಖೈಕವಾಸಂ ‖ 3 ‖

ಅಸುಗೆನೇರಿಲ್ಮಾಮರಂ ಪಲಸುಮೊದಲಾಗಿ | ಮಿಸುಪಮರಗಳ್ ಕನ ಗೆರ್ನಜಿಗುಂ ಜೆಂದಳಿರ್ | ಪೊಸನನೆಗಳುಳ್ಳರಲ್ಕುಸುಗಾಯ್ಕುರಂದೋರೆ ತನಿವಣ್ಗಳಾಂತುಮೆರೆಯೆ ‖ ಒಸೆದವರಸವಿಯನುರೆಸವಿದು ಪಡಿಯರವಕ್ಕಿ | ಯೆಸೆವರಲ್ಪಕ್ಕಿ ಕನ್ನಡವಕ್ಕಿ ಮೆಲ್ಲುಲಿಯ | ನೆಸಗೆ ಝುಂಕೃತಿಗೆಯ್ಯೆ ಸವಿವಾತ ನಾಡೆ ಕಣ್ಗೆಸೆದುದುವಸಂತಸಮಯಂ ‖ 4 ‖

ಓಹೋಶಿಶಿರದುಪಟಳಂಪಿಂಗಿತೆಂದೆನುತೆ | ಮಾಹೇಶ್ವರರ್ಪ್ಪರಮಹರ್ಷ ದಿಂ ಘನಪಿಸ್ಯ | ದೇಪಿಯ ಕೆರೆಯಪದ್ಮಣಾರ್ಯನೆಡೆಗೆಯ್ತಂದು ಸೊಗಸಿದೆವಸಂ ತಕಾಲಂ || ಆಹಾಇದರಸುಖವ ನೀಶಾರ್ಪ್ಪಣಂಗೆಯ್ಯ | ಬೇಹುದು ಪವನ ದೊಳಿನೆನಸುನಗುತೆ ಸಜ್ಜನ | ಸ್ನೇಹಿಯುವರಳ್ತಿಯ ಸಲಿಸಲೇಳ್ವನಂತಲ್ತೆ ಪುರು ವಾರ್ಥಪರರಜರಿತಂ ‖ 5 ‖

ಮನದನ್ನೆಯೆಸಿಸುವಂಗನೆ ತನೂಜಂ ವಿಲಾ | ಸಿಸಿಯುರಾಪ್ತಶಿಷ್ಯರಾ ಶ್ರಿತಶಿವಭಕ್ತ | ಜನರಿವರ್ಸೆರ್ದಲಾದವರ್ಪೆರಸು ಘನಪಾದ್ಯ ನಿನದದೊಳ್ವಿನ ಯಾರ್ಣವಂ || ಜನಪಸೀಪಾರ್ತೆಗೇಳ್ದಟ್ಟಿದ ಬಲಂಗೂಡಿ | ಯನಿಬರ್ಗುಚಿತ ಪಾಹನವನಿತ್ತುತಾಂಕನ | ತ್ಕನಕದಂದಣವೇರಿ ಯುಭಯಚಾಮರ ಸಿತಚ್ಛತ್ರ ವಮರಲ್ಕಡೆತರೆ || 6 ||

ಪಡಪಪೊಂಗಿಂಡಿ ತಣ್ಗರಗವೊಗದುಗುಲಕ್ಕೈ | ಪಿಡಿಪವಕೆಬೀಣೆ ಮೂ ಪಾಯಿಗದ್ದುಗೆಯುಲರಪಡಲಿಗೆ ಮಿಸುನಿಪಾವುಗೆಸೆವ ಪೊತ್ತಗೆಯಾಲವಟ್ಟಪನಿ ನೀರ್ಗುಪ್ಪಿಗೆ || ಪುಡಿಗತ್ತುರಿಯತಟ್ಟೆಸಾದಿನ ಭರಣಿರಂಗು | ಪಡೆದಕುಂಕು ಮದ ಪೊಟ್ಟಳಜವಾದಿಯುವಂಕಿ | ಪೊಡವರ್ಗಂಧದ ಸಿಪ್ಪುಕರ್ಪೂರದ ನಾಳಿಗ ಳಪಿಡಿದೊಡನೆನಡೆದರೊಲವಿಂ || 7 ||

ಅಲಘುವಿಭವದಿನಿಂತು ತಳರ್ದಾಪುರದ ಬಪಿ | ವರ್ಳಿಯುಕೆಯ್ತರೆಲಾಮ ಚದನೆರಕೆಗರಿಪೂವು | ಗಳ ಪೊದಕೆಪಚ್ಚೆಗಪ್ಪುರಪಾಳಿಗಳ ಕಂಬವಮರ್ದ ಮುಡಿವಾಳಗಟ್ಟೂ || ಪೊಳೆವಕರ್ವಿನಜಂತೆ ದವನದೆಡೆವರೆಯ ಸುಗೆ | ದಳಿರ ಪಾಸಿಕೆಯೊಪ್ಪೆ ಪಾನಮುಂಪಸಿಸೀರ | ತಿಳಿನೀರ ತುಂಬಿದಿಂದೂಪಲದ ಭಾಂಡಂ ಗಳಿಂದರವಟಿಗೆಗಳೆಸೆಗುಂ || 8 ||

ಅಲ್ಲವಂಪೊಸರೋಗರವ ನಳಿಯಸಂಬಲಿಯು | ನಲ್ಲಲ್ಲೆಡಂಬಡೆಯುಲಿ ಟ್ಟುಸೌಸವದಲರ | ನುಲ್ಲಸಿತಚಂದನವನೆಸೆವ ಕಪ್ಪುರವೀಳೆಯುವ ನಿಂಬುಗೆ ಯ್ಯುತವಮ್ಮಾ || ಚಲ್ಲಗಣ್ಣಡೆಯುಕುಡಿವೆಳಗೆಂಬುರುಳ್ಗಣ್ಣಿ | ಯಲ್ಲಿಪಥಿಕಮ ನೋಮ್ಮೃಗವ ನೆಯ್ದುಬೀರಿತಂ | ದಿಲ್ಲಿ ತಪೆವರಿವಳ್ವಿರೇಂ ವ್ಯಾಧವಧುಗಳೋಮೇ ಸ್ತ್ರಪಾವಘುಗಳೊಯೆನೇ || 9 ||

ಘೋರಸೋರ್ವಂಬಸಿಲಡಸಿ ಬಂದುತಾರೆಲೆಲೆ | ಸಾರಿಪಾರಿಯ ನೆನೆಯು ವಳ್ವರಿಯುಸಸಿಗಲ್ಲ | ತೋರಕರಗವನಣಕವಿಂದೆತಂವಿತ್ತು ನೋಡುತಿರೆ ತನ್ನ ಮುಖೇಂದುವಾ || ಸಾರಕದುಕಟ್ಟನೆಕರಗೆ ತಜ್ಜಲವನೀಂಟಿ | ಭೂರಿಶ್ರಮವ ನಲೆದನದನರಿಯುದಿವಸನಿದೇಂ | ದಾರಿಕಾರನೊ ಮಾಯಕಾರನೋ ಯಂದಗಿವ ಮುಗ್ಧೆನಗಿಸಿದಳೆಲ್ಲರಂ || 10 ||

ಉಟ್ಟುಡಿಗೆಬಳಸಿದನೆರಕೆ ತೊಡೆಯಿಕಂಬವಳ | ವಟ್ಟುಕಟ್ಟೆಸಡಿಲ್ದಿಮೆ ರೆವಮುಡಿಮೇಲೊಪ್ಪಿದಕೆ | ಬಟ್ಟವೊಲೆಕಲಶಂಗಳಾಕಾಂತಿ ರಸವೆತಿಳಿನೀರಾಗಲ ಲ್ಲಿಸುಳಿವಾ || ಬಟ್ಟೆಗರಬಗಸೆಗಣ್ಣಿಂಕರೆದು ಸಫಿದಕ್ಕೆ | ಗಟ್ಟಿನೊಳ್ವಾಸಿಕೆಯೊ ಳಿಟ್ಟಧರಪಾನಮಂ | ಕೊಟ್ಟುಪಚರಿಪುದತನುವರ ವಟ್ಟಿಗೆಯೋಎಂಬವೋಲ್ಪ ಪಾಕಾಂತಾಜನಂ || 11 ||

ಸಲ್ಲೀಲೆಯಿಂದಾಪ್ರಪಾಶ್ರೀಯಸೀಕ್ಷಿಸುತೆ | ಮೆಲ್ಲನೆಯ್ತರೆಪಸುರಿಡಿದು ಕಣಿಶಮುಂಕಚ್ಚಿರ್ | ಸೊಲ್ಲಲೇಂಪಾಲ್ದುಂಬಿ ಕಾಯ್ತುದಂಗೂಡಿ ಪೊಂಬೆಳಸಾಗಿ ಪಲವುಪರಿಯಿಂ || ಸೆಲ್ಲಗದ್ದೆಗಳೊಪ್ಪಿದುವು ಮುಂದದೆಂತೆನೆ | ಲ್ಲಲ್ಲಕ್ಷ್ಮೀ ಪದ್ಮಣಾರ್ಯನ ಪದಾಂಬುಜಕೆ ಪರ | ವೋಲ್ಲಾಸದಿಂ ನಿವಾಳಿಯನಿಟ್ಟ ಬಹುವ ರ್ಣದಂಬರಂಗಳೋಎಂಬಿನಂ || 12 ||

ರಸಭರಿತವಾಗಿಸತ್ಕವಿಕಾವ್ಯ ಬಂಧದಂ| ತೆ ಸಮಸ್ತಫಲಪೂರ್ಣವಾಗಿ ಸುಕೃತಾತ್ಮನಂ | ತೆಸೆವಪರಿಸಂ ಯೋಗಿಯಾಗಿ ಲಕ್ಷ್ಮೀದೇವಿಯಂತೆ ಗೋಪಿ ಯರೊಳೊಂದಿ || ಬಿಸಜಾಕ್ಷನಂತೆತೆ ಮರಲ್ಲರ್ಜುನಾಢ್ಯಮಾ | ಗಿ ಸುಭದ್ರೆ ಯಂತೆ ಸಸಿಯೊಡನೊಂದಿ ರೋಹಿಣಿಯು | ಮಸಕದಂತೆ ಸುವರ್ಣಯುತಮಾಗಿ ಪರದನಂತೊಪ್ಪುಗುಂಶಾಲಿಯುವನಂ || 13 ||

ಫಲಸಂಪದಂತಮುಗೊದವಿದಲ್ಲಿ ಸಜ್ಜನ | ತೆಲೆವಾಗಿರಲ್ವೆಳ್ಕಿ ಮಿಂತೆಂ ದು ತೋರ್ಪ್ಪನುವೊ | ತಲೆವಾಗಿನಡೆವವರ್ಗೆ ತಲೆವಾಗುವರ್ಸರ್ವರೆಂದಭಿನ ಯಿಸುವಬಗೆಯೋ || ಸಲೆಪೆತ್ತಧರೆಯವೋಹದಿ ನೆರಗಿನೋಳ್ಪಿರವೊ | ಸುಲಭ ಗುರುವಂಕಂಡು ವಂದಿಪಂದವೊ ಎನ | ಲ್ಕಳವಾಳಿಯೆಸೆದುವಲ್ಲಲ್ಲಿಜಲ್ಲಂಗಿ ಯ್ಯುತುಂಕಾಯ್ವವಲ್ಲವಿಯರಿಂ || 14 ||

ರಂಜಿಪಾಕ್ಷೇತ್ರದಗ್ರದ ಕಾಲ್ಗಳೊತ್ತಿ ಸೊ | ಳ್ಕಂಬುಲಚ್ಛಾಯೆಯಿಂದೆ ಸೆವ ಮಾಮರದೊಳೀ | ರುಂ ಜವ್ವನೆಯರಾದಗೋಪಿಯರ್ಕುಳಿಗಲ್ಲರೆಯ ಮೇಲೆಪಾಲ್ದೆನೆಗಳಂ || ಪುಂಜಿಸಿಪಳುಕುಗಲ್ಪಿಡಿದು ಕುಟ್ಟಿಕುಟ್ಟಕ್ಕಿ | ಯಂಜಾ ಣಮರೆ ಸಮೆದು ಪಾಂಥರಿರವರಿದೀಯು | ತುಂಜರಾಭೀರುವಂ ಕಾಣಿಸಿಕಳು ಪುತೆಸೆದರೇಂಜಾತಿಭಾವಕಿಯರೋ || 15 ||

ಪಾಲ್ದುಂಬಿಮೆರೆವಪೊಸಕಮ್ಮಂಗಳವೆದೆಸೆಯು । ಸೊಲ್ದುಪಿಡಿದಲ್ಲಿ ಪಾಮರಿಚರಿಸುತಾವನಕೆ। ಸಾಲ್ದೆಸೆಯನೊಸೆದು ಬಂದೆರಪಗಿಳಿವಳಗಮಂ ಕಯ್ಯೆತಿರಯ್ಯುವಾಗೀ ॥ ಬಲ್ದನಿವೆರಸುಸೋವೆಯುದನೊಂದು ಗಿಳಿಕಂಡೊ! ರಲ್ದು ಬಂದಾಕಯ್ಯತೆನೆಗೆರಗೆ ಮಾನಸವ । ರಲ್ದು ಕಳ್ಕನೆಪಿಡಿದು ಕುಟುಕಸೀವುತೆಪನದಿಸುತ್ತೆಸೆದಳತಿಹರ್ಷದಿಂ || 16 ||

ಪೊಳೆವಮೊಗವೆರ್ದೆಪೊಡೆ ತೊಡೆಗಳಾದಿಯಾಗಿ ಕಂ । ಗೊಳಿಪವಯ್ವಂಗಳೇಮಡಿಗಳಾ ಲಾವಣ್ಯಲಲಿತರಸವೇಜಲಂ ನರ್ಮಗೋಷ್ಠಿಪ್ರಸಂಗಾನಂದದಿಂ ಪೊಣ್ಮುವಾ ॥ ಪುಳಕಂಗಳೇಸಸಿಗಳಾಗೆ ರತಿಸುಖಮೆಂಬ ಫಲಮಂ ವಿಲಾಸಿಯುವಜನಕಿತ್ತು ಮನ್ಮಥನ ಕಳಮವನ ಮೋ ಎನಲ್ಕಳಮವನದೊಳ್ಕಳಮುವನ ಪಾಲಿಕೆಯರೊಪ್ಪುಗುಂ ॥ 17 ॥

ಪೋಪೊತಕ್ಕೇದಾರವನದು ಭಯಪಕ್ಷದೊ । ಕ್ಕೀವಿಕರ್ಪಿನತೋಂಟಪೂದೋಂಟಗಳ್ಕೆರೆದು । ವಾವಿಭವವೆಂತೆನಲ್ವಿಶ್ವತೋಮುಖನೊಡನೆ ಬಲ್ಪಿಗೆತನಂಬಂದುದು ॥ ಆವಿಲಗಮುಂಜಯಿಸಲೊಂದು ಬಿಲ್ಲೈದಂಬು । ತಾವೆಯ್ದುವವೆಯೆಂದು ಪಲವು ಬಿಲ್ಲಂಬುಗಳ । ಕಾವನೀತಾಣದೋಳ್ಬಿತ್ತಿಯೊತ್ತಿನೊಳಗಿರ್ದೋವಿದಪನೋ ಎಂಬಿನಂ ॥ 18 ॥

ಜಂಡವೇಗದಿನೋರ್ವ ಪಾಂಥನೆಯ್ತರುತೆಸಬ । ವಿಂಡಿಯಾಗೆಸೆವಗೋಪಿಯ್ನಿಕ್ಷುಪಾಟಿಯೊ । ಳ್ಕಂಡೊಂದೆರಳ್ಮೊರು ಸೂಳ್ನುಡಿಗಳಿಂದೊಲಿಸಿಕೊಂಡಲ್ಲಿಗೆಂಬ್ದಿನೆರೆದು ॥ ಗಂಡಗಾಡಿಯನಾಚರಿಸಿ ಪೋಗೆತತ್ಕಲೆಯ । ಕಂಡಿದೇನಾಯ್ತುತುಟಿಪೇಳೆಂಬ ಸಖಿಗೆಗಿಳಿ । ತೊಂಡೆವಣ್ಗೆತ್ತುಕರ್ದುಕಿದುದೆಂದ ಳಿಪಿದಳೆನೆಪೆಂಡಿರೊಳ್ಸತ್ಯಮುಂಟೇ ॥ 19 ॥

ಸಲ್ವುದೀದೇಸಿಯೆಂಬಂತಲಂಕರಿಸಿಯಾ । ವಲ್ಪೂಗಳಿಂಸಮೆದ ಮಾಲೆಯಂ ಧರಿಸಿನಸು । ಜೋಲ್ವಮೇಲುದ ನಿನಿಸು ಮುಸುಕುತಲರ್ಗಣ್ಣಬಂಬಲ್ಪೆಳಗುಗಳ ಸೂಸುತೆ || ನಲ್ಪಣ್ಣಾಗಿನ್ನರಿಯನುರೆ ಮೇಳಯಿಸಿಕೊಂಡ । ರಲ್ವಂದೆಯೋಳ್ಕಾಂತೆಯೊರ್ವ್ವಳ್ವಿಲಾಸದಿಂ । ಚಲ್ವಮರೆಪದ್ಮರಾಜಾಂಕಮಾಲೆಯಬಾಜಿಸುತ್ತೆಸೆದಳೇಂಸುಕೃತಿಯೋ || 20 ||

ಇಂತೆಸೆವ ಶಾಲಿಪಾಲಿಕೆಯರಂ ನೋಡುತುಂ। ಮುಂತುಪವನದಪೊರೆಯನೆಯ್ದೆ ವನಲಕ್ಷ್ಮಿ ಪರಿ। ದಂತದೊಳ್ಪಸರಿಸಿದಕಹಳಾರವದಿನಿವರ ಬರವರಿಪು ಗಂಧವಹನಂ ॥ ನೀಂತಳ್ವದಿಲ್ಲಿಗಾರ್ಕ್ಯನಕರೆದು ತಾರೆಂದು | ಸಂತಸದೆ ಕಳಿಪಿ ಪಳೊಎನೆಬಂದುದುದ್ಯಾನ | ದಿಂ ತಂಪೆಲರ್ಪದ್ಮರಾಜ ನೆಸೆಗತಿಸುರಭಿಭರದ ಕಾಣ್ಕೆಯನೀಯುತೆ ॥ 21 ॥

ಅಲ್ಲಿತಂಪೊಡವಂದಬಲವನಿರಪೇಳ್ದುಪೊಂ। ಬಲ್ಲಕಿಯನಿಳಿದು ತತ್ಕಾಲೋಚಿತಕೆತಕ್ಕ । ರೆಲ್ಲರ್ವೆರಸಿಯಾರ್ಕ್ಯನಾಬನಕೆ ಜೇಲಿಯಾಗಿರ್ದ್ದ್ರಕೇತಕಿಯನೋಡಿ || ಸಲ್ಲಲಿತವರ್ಣಸನ್ಮೋಹನಾಕಾರ ಚಿ। ತ್ಪ್ರೋಲ್ಲಾಸಕರಗಂಧಮಿರ್ದೊಡೇಂ ಕಂಟಕಿಗ | ಳೆಲ್ಲಿಪೆಯೊಳಂ ಬಹಿಷ್ಕೃತರೆಂಬುದಕ್ಕೀ ಪೇಸಾಕ್ಷಿಯೆಂದೆನುತೊಳಪುಗೆ || 22 ||

ನೆಗಳ್ದ ಪೊಂಬಾಳೆಗಳ ಚವರದಿಂ ಪೊತ್ತಕಂ। ಪುಗುವ ವೃಕ್ಷಾಪಳಿಯುಗುಡಿಯಿಂ ಮರಂಗಳಂ। ಬಿಗಿದುರೆತಳ್ತ್ರೆಳಲತೆಯ ತೋರಣದಿನೆಸೆವ ಸೋಗೆಗಳ ಸೀಗುರಿಗಳಿಂ || ಮಿಗೆಮೆರೆವತೆಂಗುಗಳ ಸತ್ತಿಗೆಗಳಿಂಕೋಗಿ। ಲೆಗಳಕಹಳೆಯಿನವಿಳ ಪಕ್ಷಿರವವಾದ್ಯದಿಂ। ಸೊಗಸಿವನ ಬಿಕ್ಕಿಗುರುವರನನಿದಿರ್ಗೊಂಡಪಳೊ ಎಂಬಂತೆವನ ಮೆಸೆದುದು ॥ 23 ॥

ಬದವಿದಪಲಸುವರ್ಣ ವೃದಂಗವಾಕರ್ಣಿಕಾ। ರದಪೂಪೆಪೋಃಪಾಳಪಾರಡಿಗಳಿಂಚರಂ। ವೃದುಗೀತವರಗಿಳಿಗಳುಗ್ಗಡಣೆ ಗಂಡಗೋಗಿಲೆಗಳ ಸಭಾಯೋಗ್ಯತೆ || ಪುದಿದತಂಬೆಲರಾಡಿಸುವನಟಂ ಮಾಧವಿಸ। ಮುದಿತನರ್ತಕಿಯದರಿನುವಿರ್ವಲಪೂರ್ವಲಿಯ। ಚದುರನಾಗಿಸೆ ವಸಂತಕನ ನಾಟಕಶಾಲೆಯಂತ್ಯಪವನಂಮೆರೆದುದು ॥ 24 ॥

ತುಂಬಿಸಾರ್ವತ್ತುಕಂಫಲಿಸಿ ಪಾವನಮಾಗ। ಳುಂಬಮೆಸೆವೆನ್ನಮುಂದುಳಿದ ಬನಗಿನಗಳಾ । ಡಂಬರಂ ನಿಲ್ಲುದೇತೆಗೆ ಚೀಸುಪೆನುತೆ ತಳಿಗೊರ್ಂಬೆಂಬಕಯ್ಯನೆತ್ತಿ || ತುಂಬಿಗಳಪಲ್ಮೊರೆಪದಿಂಗಿಳಿಯ ತೊಂಡುಬು। ಡಿಂಬೆಟ್ಟಿತಾದನುಡಿಯಿಂ ಗಂಡಗೋಗಿಲೆಯ। ಮುಂಬರಿಯ ಕೂಗಾಟದಿಂ ಬಗ್ಗಿಸುತೆಮೆರೆದು ದಾವನಂ ಸುಖಿಜೀವನಂ ॥ 25 ॥

ಮಾಲತೀಮಾಧವೀಯಾನ್ವಿತವೆ ನಾಟಕದ | ಲೀಲೆಯಂ ಯೋಗಿಕುಸುಮಾಂಜಲಿಯೆ ನಾತರ್ಕ | ಶೀಲತೆಯ ಸಿಂದ್ರುಚಂದ್ರಾಂಕವಿಂ ವ್ಯಾಕರಣಮಂ ವಿಲಸಿತಧ್ವನಿಗಳಿಂ || ಲಾಲಿತಾಲಂಕಾರಮಂ ಚಂಪಕೋತ್ಪಲವಿ | ಶಾಲತ್ವದಿಂ ಛಂದಮಂ ಮಹಾಶ್ರೀಹರ್ಷ | ದಾಲಂಬದಿಂ ಕಾವ್ಯಮಂ ಪೋಲ್ತುರಂಜಿಸುವುದಾನಂದನಂನಂದನಂ || 26 ||

ಪಗಲಬಲ್ಲವನಕೆಂಗದಿರ್ಗಂಗಲಿಸಿಸು ಪುಗ | ದೆಗಘೀರಮಾಗಿಕಳ್ತಲಿಸಿದತಮಾಲದತ | ರುಗಳ ತಣ್ಣೆಳಲೊಳಿಳಿಪಾಳಿಯೆಲೆಗಳ ಪಚ್ಚೆಡಿಸಿ ತಳಿರಹರಹಿಯಲ್ಲೀ || ಮುಗಮುಗಿಪ ರಲಮುಡಿದು ಚಂದನಂಬೊರೆದು ಚೀ | ನಿಗಳಪೊದೆದಿಸಿದುಂಡುಸವಿ ದಂಬುಲಂಗೊಂಡು | ಸೊಗಸುಗಾತಿರ್ಯರೊಡನೆ ಜೀಸಗಿಗಳಿವಘೋಗಿಜನಪಾವನನೊಳಿಸೆದುದು || 27 ||

ನುತಪಲ್ಲವಮೆದೋತ್ರಮುಂ ಬಿವರ್ಗಸಮುಂ | ತತಪಿಕಸ್ವರಮೆವೇದಸ್ವರಂ ಮೆರೆವ ಪಂಡಿತವಕ್ಕಿಯೊಳ್ನುಡಿ ಪುರಾಣಪಠನಂ ಭ್ರಮದ್ಭ್ರಮರೀಪಿಲಾಸವಿರುತಿ || ಪಿತಪಾದ ಮಂಗಲಾಶೀರ್ವಾದಮಂತ್ರಂ ಪ | ತಿತಮಪ್ಪಕುಸುಮಕೇಸರವೆ ಮಂತ್ರಾಕ್ಷರದ | ತತಿಯಾಗೆ ಮಧುಪಿಸವುರೋಹಿತನೊ ಎನೆಯೊಂದಶೋಕವೃಕ್ಷಂಮೆರೆದುದೂ ||28||

ಮೊದಲಿಂದೆ ತುದಿವರಂ ಜೀರೊಂದು ರೀತಿಯಾ | ಗದೆಯೊಂದೆ ಚಂದದ ಸಫಲಗುಣವ ನಾಂತು ನಿಜ | ಹೃದಯದೊಳ್ಪಂ ಬಹಿಷ್ಕರಿಸಿ ಕಾಣಿಸದೆ ಸದ್ವಾಸನೆಯನೀ ಪೀರುತೆ || ಒದವಿಕೊಯ್ವಂ ಕೊರೆದುವುಂ ಪಿಕ್ಕಿನೋಡಿದೊಡೆ | ಸದಮಲಾಮೃತವನೇ ಕಾಣಿಸುತೆ ಪಲಸುಗ | ಳ್ವಿದಿತ ಸಜ್ಜನರಂತೆಮೆರೆದುವು ಮಹಾಫಲಾಂಕ ಗರ್ದೇಂ ಸ್ವೈಐಮುತ್ತೆ ||29||

ಫಳರಸವೆಮದಧಾರೆ ಚಳಿಪ ತಳಿಗೊರ್ಂಚಲು | ಜ್ವಳಕರ್ಣಾಮುರೆನೀಳ್ದ ಕುಸುಮಪುಂಜವಿದಂತ | ವಳವಟ್ಟದಕ್ಕರ್ಗರಗುವಳಿಮಾಲೆಬರಿಕಯ್ವರಝುಂಕೃತಿಯೆ ಬೃಂಹಿತಂ || ಗಿಳಿಗಳಿಟ್ಟೆಳವೆಪಚ್ಚೆಯ ಪಕ್ಕರಕ್ಕೆಕೋ | ಕಿಳರವಂ ಮುಂದುವಲಿಪಾವೆಯಾಗಲ್ಕತನು | ಗೆಳಸಿಮಧುಯೋಧನನಲಂಕರಿಸಿ ಪಿಡಿದಮದಗಜದಂತೆ ಚೂತಮೆಸೆಗುಂ ||30||

ತಳಿರಕೊಂಗಲ್ಕೆಂಜೆಡೆಯ ಬಿಂಕಮಂ ಬೀರೆ । ಪೊಳೆವ ಕೆಂಗಾಯ್ಗೊಸಲಕಣ್ಣದೇಸಿಯ ಸೂಸೆ । ಮಿಳಿರ್ವ ತನಿ ವಣ್ಗೊರಲ ಬಿಸದತೇಜವ ನೋಜೆಗೆಯ್ಕೆಳಿದುಗುವಲರ್ವುಡಿ ॥ ತಳೆದ ಭಸಿತದಸೊಗಸನುಗಿಸೆ ತುಂಬಿಗಳ ಸವಿ । ಮೊಳೆವ ಝುಂಕೃತಿ ಕಿವಿದೊಡವುವಾವುಗಳಪಾಡಿ । ನಳವಡಿಕೆದುಡುಕೆ ಶಿವಚಿಹ್ನವಾಂತಂತೆ ಸೇರಿಲ್ವರಂಜಿಲ್ಪಾದುದು ॥31॥

ಕೆಂಪುವಡೆದೆಸಳಿಂ ರಜೋಗುಣಯುತಬ್ರಹ್ಮ । ನಂಪೊಳೆವಬೆಳ್ಪ ಮರ್ದಕೇಸರದೆ ಸತ್ವಗುಣ । ಸಂಪನ್ನವಿಷ್ಣುವಂಕ ಷ್ಪಿಡಿದತೊಟ್ಟಿಂತವೋಗುಣಾನ್ವಿತರುದ್ರನಂ ॥ ತಾಂಪೇಳ್ವುದರಿಸೊಂದೆ ಕುಸುಮದೊಳ್ತ್ರಿಗುಣಾತ್ಮ । ಕಂಪುವಿದದೇವತೆಗಳಾಂತ ವೊಲ್ಮುತ್ತಗಂ । ಸಂಪುವಡೆದುವು ಫಲಪದಂಗಳ ನಳಿದಮುಕ್ತಕಾವಳಿಗಿದೇಂ ಚೋದ್ಯಮೋ ॥32॥

ಸುರಲೋಕದಮೃತಕೀ ನರಲೋಕದಿನಿದುಗ । ಳ್ಸರಿಯಲ್ಲವೆಂದುರಿಕ್ಕಟಮೆ ನಿಂದಿಸದೊಮೆ । ಪರಿಕಿಸುವುದೆಂದಮರ್ದುಗಳ ಸಗಳಪಲಗಯ್ಯೊಳಾಂತುದ್ದಕೆತ್ತಿಭೂಮಿ ॥ ಸುರಗಿರ್ವನುವೊ ಕಿಂಚಿದುಪಕಾರಿ ಗಧಿಕತರ । ಪುರುಷಾರ್ಥಮಂಮಾಡುವ ಸ್ಸುಜನರೆಂದುತಿಳಿ । ದರರೆನೀರೆರೆದಂಗೆ ಪರಮಾಮೃತಂಬೊತ್ತಪರಿಯೊ ಎನೆತೆಂಗೆಸೆದುವು ॥33॥

ಮಿಗೆಪಸುರಿಡಿದಕಳಿಕೆ ತುರುಗಿಕಾವನಕೂರ್ಗ್ಗ । ಣೆಗಳಮೂಡಗೆಗಳಂತಿರೆಪರಿದಪೊಂಬಾಳೆ । ಸೆಗಪಿಸೇರುವೆಗೆಯ್ದು ಬಾಳ್ಗಳೀಳ್ಗೆಯಬೀರೆನೀದ್ರ್ದುಂಬಿಯುಳ್ಳರಲ್ದೂ ॥ ಸೊಗಸಡಕೆವಿಡಿದನವ ಕುಹಳಿಯೊರೆಯುಗಿದಸುರ । ಗಿಗಳಸುಗ್ಗಿಯಸೂರೆದೋರೆ ಪಂಚಾಯುಧಂ । ಬಗೆಯೆಪಂಚಾಯುಧಂ ತಾನಲ್ತುಪಂಚಾಯುಧನೆ ಎನಿಸಿಕೌಂಗೆಸೆದುದು ॥34॥

ಉಗುವಮಕರಂದ ರಸದಿಂದಭಿಷವಂಗೆಯ್ಸಿ । ಮಿಗೆಯುದಿರ್ವಕುಸುಮವಿಸರಂಗಳಿನಲಂಕರಿಸಿ । ಜಗುಳ್ದುತಾವೇಬೀಳ್ವ ಕಳಿವದದಪಣ್ಗಳಿಂ ನೈವೇದ್ಯಮಂವಿರಚಿಸೀ ॥ ಸೊಗಸಿತಂಗಾಳಿಗೊಳೆ ವೆಲೆಯಿಂದೆ ಬಿಜ್ಜಣಮು । ಸಗಿನಿಜಜನನಿಯಾದ ಭೂದೇವಿಯುಂಮನಂ । ಬುಗೆಪೂಜೆಗೆಯ್ದು ತಲೆವಾಗಿನಿಂದನುವೋ ಯೆನಿಸಿಬಾಳೆಗಳ್ಮೆರೆದುವು ॥35॥

ಪೊಳೆವಲರಸಿಂದೂರತಿಲಕದಿಂ ತತ್ಕುಸುಮ | ಕೆಳಸಿಬಂದೆರಗಿದಳಿಗಳ ಕುಂತಳದಿನವರ | ಕಳರುತಿಯಸವಿಪಾತಿನಿಂ ತೋರದೋರೆಗಾಯ್ಗಳ ಕುಚಂಗಳಿನೊಪ್ಪುತೆ || ಕಳಿವಣ್ಬಿರಿಯಬಾಯ್ದೆರೆಯೊಳೊಂದಿ ದೊಳ್ವಿತ್ತು | ಗಳಮಿಳಿರ್ಪಕೆಂಬಲ್ಲ ಸೊಗಸಿನಿಂದಾಡಿ ಮಿಾ | ಲಲನೆಶುಕನುಮನೊಲಿಸಿ ಕೊಂಡಳೆನೆ ಸುದತಿಯುರದಾರಂ ವಶೀಕರಿಸರೋ ||36||

ಈಳಿಕಿತ್ತೀಳೆಜೆಂದೆಂಗು ಕೌಂಗುತಮಾಲ| ಜಾಲಜಂಬೀರಜಂಬೂಪನಸ ಪಾಟಲ ರ | ಸಾಲಸಾಲಲವಂಗ ತುಂಗಸರ್ಜಾರ್ಜುನ ತಿಲಕವಕುಳಮುಖ್ಯಭೂಜಾ || ಜಾಲವಂಮಾಧವೀ ಮಲ್ಲಿಕಾಯೂಥಿಕಾ | ಮಾಲತೀದ್ರಾಕ್ಷಾಸದೇಲಾದಿಲತೆಗಳಂ | ಭೂಲೋಕಪಾವನಂ ನೋಡುತುಂ ಕೊಂಡಾಡುತುಂ ವನದ ಮಧ್ಯಕೆಯ್ದೆ ||37||

ನಲ್ಗಂಪುವೀರಿ ಮೋಹಿಸುವ ಚಂಗಣಿಗಿಲೆಯ | ರಲ್ಗೊಳಂಸೊಗಸುವಾವಲ್ಗೊಳಂ ಪೊಳೆವನೆ | ಯ್ದಿಲ್ಗೊಳಂತಾವರೆಗೊಳಂ ತಣ್ಗೊಳಂಮೆರೆದು ವೆಂತೆನಲ್ಬಿಮಿವನದ || ಬಲ್ಗಾಡಿಯಂ ನೋಡಲೆಂದೆಳಸಿಪಲಗಣ್ಮ | ರಲ್ಗಳಂಪಡೆದೀಕ್ಷಿಪನುವೊ ಬಳಿಕೆಕಮ್ಮ | ರಲ್ಗಯ್ದುಗಾರನೆಂದೆಂಬ ಪಟುಭಟನಕಣೆಗಳ ಡೊಣೆಗಳೋ ಎಂಬಿನಂ || 38 ||

ಅಲರ್ವಂಡನುಂಡು ಸೊಕ್ಕೇರಿಯೊಂದಿಸಿಸು ಮೆ | ಲ್ಲುಲಿನುಣ್ಗೊರಲೊಳುಣ್ಮಲಿಂಚರಂಗೆಯ್ವು ತಿ | ರ್ಪಲರ್ವಕ್ಕಿವಳಗದಿಂ ತಾಮರಸ ತಂಡುಲಂಗಳ ಜಕ್ಕುಲಿಸಿಕೊಕ್ಕಿನಿಂ || ನಲಿದುವಧುಗೂಡಿ ಸೇವಿಪಬಿಸಿಲ್ವಕ್ಕಿಗಳಿ | ಸೊಲವಿಂ ಶಿಶುವನಬ್ಜ ಪತ್ರದಲ್ಲಿರಿಸಿ ಯುದ | ರೊಲೆದಾಟಕುರ್ವಿ ಸಂಚರಿಸುವರ ಸಂಚೆಗಳಿನಾಕೊಳಂಗಳ್ಮೆರೆದುವು ||39||

ಕಮಲೋಲ್ಲಸಿತಮಾಗಿ ಹರಿಯಂದದಿಂಚಕ್ರ | ರಮಣೀಯಮಾಗಿತತ್ಕರದವೋಲಬ್ಜಯೋ | ನಿಮಹತ್ವದಿಂ ಚತುರ್ಮುಖನಂತೆ ಹಂಸದೀಪಿತಮಾಗಿ ದಿವಸದಂತೆ || ಅಮಿತಾಳಿಶೋಭಿಯಿಂ ಗಣಿಕೆವೋಲ್ಮಧುಸಂಗ | ತಮದಾಗಿಮಾಕ್ಷಿಕಪಟಲದಂತೆ ಕುವಲಯವ್ಯ | ತಮುಮಾಗಿಶರಧಿಯಂ ತಮ್ಮತಯೋಗದೆ ಕಾದುದುಘದಂತೆ ಸರಸಿಯೆಸೆಗುಂ ||40||

ತಾವರೆಮೊಗದ ಕೈರವಾಂಬಕದ ಪದ್ಮಪ | ತ್ರಾವಲಿಪರಿಧ್ವಸ್ತ್ರದುಡಿಗೆ ಯಸರೋಜವ | ಲ್ಲೀಪಿಪ್ಪಲಿಬಲಹುಗಳ ಜಳದಳಿಕುಳಾಳಕದಜಳಪಕ್ಷಿಕುಳ ದುಲುಪಿನಾ || ರಾವದರಥಾಂಗಸ್ತನದರಸಹೃದಯುದಸರ | ಸೀವಧುಗಳನಘಗುರುವಂಕಂಡು ಸಾತ್ವಿಕದಿ | ಸೋವ್ರೊಕಟ್ಟನೆಕರಗಿ ಜಲಮಯಾಂಗಿಯು ರಾದರೋ ಎನಿಸಿಕಣ್ಗೊಪ್ಪಿರೆ || 41 ||

ಅಲ್ಲಿತಣ್ಗೊಳಗಳೊಳ್ಕಂದು ಪೊಂದಾವರೆಗ | ಳಿಲ್ಲರಪರಾಗಮೆಂದೆಂಬಭಸಿತಂಬೊರೆದು | ನಲ್ಲದುಂಬಿಯ ಪಾಡುಗೂಡಿಸೀರ್ವೂವುಗಳ ಸೌಸವದ ಕಯ್ಗಾಣ್ಕೆಯಿಂ || ಸಲ್ಲೀಲೆಯಿಂ ಪಿಡಿದು ಕೊಂಡುಶುಚಿವೃತ್ತಿಯಿಂ | ಮೆಲ್ಲನೊಂದೆಳೆಗಾಳಿಬಂದೆರಗಿ ಗುಣಮಣಿಯು | ಮೆಲ್ಲದೆ-ಗೊಡಂಬಡಿಕೆಯಾದುದು ಜಗತ್ಪ್ರಾಣರಿರವದೇಂ ಹೃದ್ಯಮಲ್ತೆ || 42 ||

ಆಕೊಳದ ಮರುತನಂಮನ್ನಿಸುತೆಸೇವಕಾ | ಸೀಕಮಂ ನೋಡಿ ಜಲಕೇಳಿಗೀಸರಸಿಗಳ | ಜೋಕೆಮಾಡುವುದೆನೆಯುವಪೋಗಿಪ ನಿಸೀರನಪಿಳಗಂಧದ್ರವ್ಯಮಂ || ಶ್ರೀಕುಸುಮಪತ್ರಪಲ್ಲವಮನೊಡವೆರಸಿದಿ | ವ್ಯಾಕಾರಮಪ್ಪಂತಲಂಕರಿಸಿ ತೋಲಿಸೆಗು | ಣಾಕರಂ ಸುತಸುಮು ಭಕ್ತರಂ ತತ್ತತ್ಸರೋವರಂಗಳ್ಗೆ ಕಳಿಪಿ || 43 ||

ಜನ್ನಮರೆತೀರ್ಥೋದಕಂಗೆಯ್ದು ತನ್ನಮನ | ದನ್ನೆಕೆಳದಿಯ ರೊಡವೆರಸಿಯಾಕೊಳನಪೊಕ್ಕು | ರನ್ನದಂಡೆಗಳು ಮುಂಚೀಕೊಳವಿಗಳು ಮನವರ್ಗಿತ್ತು ಪೊಯ್ಯಾಡಿಮೆಂದು || ಚಿನ್ನಧಿಯೊರೆವುದುಂಮೊಲೆಗಳಲುಗೆ ನಡುಬಳ್ಕೆ | ಬೆನ್ನಂಮುಸುಂಕಿ ಮುಡಿಯಲೆಯೆ ಕಣ್ಬೆಳಗೊಲೆಯೆ | ಚಿನ್ನೆಯಕರ್ಾವನ ಪೊಣಕ್ಕೆಯಾಗ್ಗಳವ್ರೊಲಿಟ್ಟಾಡಿದತ್ತಿರ್ಳಿಸೀಗ್ಗಳಿಂ || 44 ||

ಮುಡಿಸಡಿಲ್ದಾವರಿಸೆ ರಾತ್ರಿಯಾಯ್ತೆಂದುಸಿಡಿ | ಮಿಡಿಗೊಳ್ವಚಕ್ರವಕ್ಕಿಗಳ ನಾಚಿಲ್ವಮೊಗ | ದಡವುಗಂಡಿಂದು ಮಂಡಲಮುದಯವಾಯ್ತೆಂದು ನಸುಮುಗಿವಜಸಜಂಗಳಂ || ಕುಡಿತೆಗಣ್ಬೆಳಗುಗಂಡಿದೆ ಜೊನ್ನಮೆಂದು ಬಾಯ್ಬಿಡುವ ತಣ್ಗದಿರ್ವಕ್ಕಿಗಳನೀಕ್ಷಿಸುತ್ತೋರ್ವ | ಳೊಡನೆ ಸೀರ್ಮೊಗೆದವಳಸಿಟ್ಟವರಸಂಶಯಮನುಡಿಗಿಸಿದಳೇಂಜಾಣೆಯೋ || 45 ||

ಮಗುಳೋರ್ವಳಾಟದೋಳ್ಮತ್ತೋರ್ವಳಂ ತನ್ನ | ಬಗಸೆಗಣ್ಣಿಂಮುರಿದುನೋಡೆಯಾಬಳ್ಳಿವೆಳ | ಗೊಗೆದು ಒರೆಬೆಳ್ಳಿಚೀರ್ಕೊಳವಿಯಿಂದೆಚ್ಚನೀರೆಂದುಕೆಂದಳವನೊಡ್ಡೆ || ಬಗೆಯದಿವಳಾಂ ನೋಡೆಯರುಣಾಬ್ಜವಾಂತವ | ಲ್ಲಿಗಳಿಂಬರಿದೆ ಪೊಯ್ಯಲಿರ್ದ್ದಪಳ್ನೋಡಿಮೆಂ | ದು ಗುರೂತ್ತಮಂಗರಿಪೆ ತನ್ಮುಗ್ಧೆಯರಬಗೆಗೆನಗುತೆ ಮನ್ನಿಸಿದನಾರ್ಯಂ || 46 ||

ಕೊರಲುದ್ದವಾದನೀರೋಳ್ನಿಂದಬಲೆ ಯೋರ್ವ | ಳಿರೆ ಮರುಳ್ದುಂಬಿಯೊಂದಲರ್ದ ಪೊಂದಾವರೆಯ | ಸಿರಿಗೆತ್ತುವೊಗಕೆರಗೆ ಕಯ್ಯೆತ್ತಿಪೊಯ್ಯೆಕೆಂದಾವರೆಯರಲೆನುತ್ತದಂ|| ಭರದಿಂಮುಸುಂಕೆ ಭಯದಿಂನೋಡೆ ಬಿಳಿಯತಾ|ವರೆಯೆಸಳಿದೆಂದು ಕಣ್ಗಮರೆ ವುಖವಲುಗೆ ನು | ಣ್ಗುರುಳೆಡೆಗೆ ಪಾರಿಬೀಳ್ದುದು ಶಿವಶಿವಾ ಭ್ರಾಮಕರಬುದ್ಧಿಯೇಗೆಯ್ಯದೊ || 47 ||

ಮಂದಗಾಮಿನಿಯರೀರ್ವರ್ಕಂಠ ಗತಜಲದೊ | ಳೊಂದಿ ತಿಳಿನೀರಸಿಟ್ಟಾಡು ತಬ್ಜಕ್ಕಬ್ಜ| ಮೆಂದುಂ ವಿರುದ್ಧಮೆಂದೀ ಜಗಜ್ಜನಮುಲಿವುದಿಂದುಶೇಖರರೂಪನೇ ||ಒಂದಾಗಿಪುಟ್ಟಿಯೊಪ್ಪೆ್ೞಸರಾಂತವಂ ಪಗೆಗ|ಳೆಂದೊರೆವವರ ಮಾತುಪುಸಿನೋಡಿಮೆಂದು ಪೂ | ರ್ಣೇಂದುಮುಖಿಯುಂ ವಿಕಸಿತಾಬ್ಜಮುಖಿಯುಂನಗುತ್ತೊಂದೆಡೆಯೊಳೆಸೆದರಲ್ಲೀ || 48 ||

ಎಳೆವಳ್ಳಿಮೆಯ್ಯರಂಭೋರುಗಳ ಕುಂದಕು | ಟ್ಮಲರದಾವಳಿಯ ಚಂಪಕನಾಸಿಕೆಯ ಸಮು | ಜ್ವಳ ಕೋಕಿಳಸ್ವರದ ಪೊಂಬಾಳೆಗಂಪಿನವಯುವದ ತೆಂಗಾಯ್ಮೊಲೆಗಳಾ || ತಳಿರಡಿಯಬಿಂಬಾಧರದ ನವಶಿರೀಷ ಕೋ | ಮಲತೆಯಶುಕೀಮೃದೂಕ್ತಿಗಳ ಕೆಳದಿಯರಂದು | ಕೊಳದೊಳಗೆ ವನವಾಡುವಂತೆಸೆಯೆ ಗುರುನೋಡುತುಂ ವಿನೋದಿಸುತೊಪ್ಪಿದಂ || 49 ||

ನಳಿನಮಕರಂದದಿಂ ಮಜ್ಜನಂಗೆಯ್ಸಿ ತ | ಜ್ಜಳಜಧೂಳೀಗಂಧವಿಟ್ಟುತತ್ತಂಡುಲಾ | ವಳಿಯಕ್ಷತಂದಳಿದು ತತ್ಕುಸುಮಕುಲದಿಂದಲಂಕರಿಸಿ ತತ್ಪತ್ರದಾ || ತಳೆವಿಡಿದು ತನ್ಮರುದ್ವ್ಯಜನವನೆಸಗಿತದು |ಜ್ವಳ ಸೌಖ್ಯನೈವೇದ್ಯವಿತ್ತುತತ್ಸುರಭಿಯುಂ| ಡಳಿನಿನದ ಮಂತ್ರದಿಂ ಕಮಲೆಯರ್ಚಿಸಿದಳೋಎನೆ ಕೊಳದೊಳಾರ್ಮನೆಸೆದಂ || 50 ||

ಬಳಸಿಮಿಂದಾಡಿಬಂದಬಲೆಯರ ಕುಂತಳಾ | ವಳಿ ಮೇಘದಂತೆ ಯಾನ ವಿರ್ಗಳಿಂ ಬೀಳ್ವನೀ| ರ್ಗಳಿವೃಷ್ಟಿಯಂತೆ ಸರ್ವಾಂಗದಮಯೂಖಲೇಖೆ ಸುರೇಂ ದ್ರಚಾಪದಂತೆ || ಪೊಳೆವನೇತ್ರಾಂಚಲಂ ಕುಡುಮಿಂಚಿನಂತಾಗೆ | ಮಳೆಗಾಲ ದಂತೆಸೆವ ತತ್ಕಾಂತೆಯರ್ವೆರಸು | ಜಲಕೇಳಿಗೆಯ್ದುಕೊಳದಿಂದೆ ಪೊರಮಟ್ಟನು ಜ್ವಳತೆಯಿಂದೇಶಿಕೇಂದ್ರಂ || 51 ||

ಕದಡಿದಕ್ಷಿಗಳಿಂಹಿಮಾನಿಲನಿನೇಳ್ದ ಪುಳ|ಕದಸಾಲ್ಗಳಿಂ ಬೆಳ್ಪುಮುಸುಕಿ ದಿಂದುಟಿಗಳಿನ | ಳಿದುಮೆರೆವ ಕೇಶಪಾಶಂಗಳಿಂ ದಿವ್ಯತನುಗಳಿಗಿಳಿವ ನೀರ್ವನಿ ಗಳಿಂ || ಪುದಿದಬ್ಜನಾಳಕಂಟಕತತಿಯಿನೊದವಿದಂ | ಗದಕಲೆಗಳಿಂ ಜಲ ಕ್ರೀಡೆಗೆಯ್ದೆಯ್ತಪ್ಪ | ಸ್ಮರದತಿಯಸ್ಮರತಾಂತ ಸುದತಿಯರಿರವನರಿಯಿಸುತೆ ನಡೆದರಾರ್ಯನೊಡನೆ || 52 ||

ಅತಿಹರ್ಷದಿಂಬಂದು ಮುಂದೆಸಿಂಗರಿಸಿರ್ದ | ಲತೆವನೆಯಪೊಕ್ಕುತಳಿ ರ್ವಾಶಿನೋಳ್ಕಿವಭಕ್ತ|ತತಿಗೂಡಿ ಕುಳ್ಳಿರ್ದ್ದವರ್ವೆರಸು ವಸ್ತ್ರಭೂಷಣಗಂಧಮಾ ಲ್ಯಂಗಳಂ|| ಪಿತಮಾಗಲಂಕರಿಸಿ ಯಾಮಾಳ್ಕೆಯಿಂದೆ ನಿಜ | ಸುತಸತೀಪ್ರಮು ಖರ್ಗ್ಗೆಕೊಟ್ಟು ಶಿವಪೂಜೆಗು|ದ್ಯತನಾಗಿ ಕುಸುಮಾಳಿಯಂ ತಿರಿದುತನ್ನಿಮೆನೆ ಕೆ ಳದಿಯರ್ಗಳಿಲಸೆಯ್ದಿ || 53 ||

ಓವ್ರೊಗಣಿಕಾನಾಮದೋಷವಳಿವುದು ಶಿವಂ | ಗಾವುಸಲಲೆಂದು ಬಹು ಮುಖದಿನಲರ್ದಂತಿರ್ಪ್ಪ | ಸೇವಂತಿಯಂ ದೇಶಿಕಂಮುಡಿವಭಾಗ್ಯವಾಯ್ತೆಂದು ಸಂತಸದೆನಗುವಾ || ಭಾವದಿಂಪಿರಿದಮಲ್ಲಿಗೆಯ ನಳಿಯಾಸೆಪುಗ | ದೀವನಶ್ರೀ ಯಿಟ್ಟ ವಿಾಸಲೊಯೆನಿಪ ಚಂಪ | ಕಾವಳಿಯ ನುರುಜಾತಿಯಂಬುದಂ ಮೃ ದುವಿಂದರಿವುವಂತೆಸೆವ ಜಾತಿಯಂ || 54 ||

ಸ್ಮರನಿಂಹರನಪದಮುಮಂಕಾಣದೆಮಗಿಂದು |ಗುರುಮುಡಿಯಕಾಣೆಸು ವನೆಂದುವಿ ಪುಳಕಿಸಿದ | ಪರಿಯಂತೆ ಪೂತುಮೆರೆವಿರವಂತಿಯಂ ಲಿಂಗಮಂ ತಾಳ್ದ ಭಕ್ತರಂತೆ || ಸ್ಫುರಿಪಕರವೀರಮಂ ನಾಮದಿಂದೇಂಗುಣವೆ | ವರವೆಂ ಬುದರ್ಕಾವೆ ಸಾಕ್ಷಿಯೆಂಬಂತೆಸೆವ | ಸುರಗಿಯಂ ಶಿವನಪೆಸರಾಂತವೋಲ್ ದೇವವಲ್ಲಭವೆನಿಪ ಸುರಹೊಂನೆಯಂ || 55 ||

ಅಂತರಿಂಪರ್ಯಜೇಂದ್ರಾದಿಸಕಲಗ್ರ್ಗಮಾ | ಕಾಂತನೊಲವಿಂ ಜ್ಞಾನ ಮಂಕೊಟ್ಟೊಡರಿವರದ | ನಂತವಂ ಕುಡದೊಡೆಮರುಳರಪ್ಪರಿನ್ನೊರೆವುದೇಂ ಶಂಭುವೇಜ್ಞಾನದಂ || ಇಂತೆಂದುನಾನಾಪ್ರಮಾಣಮುಂಟಾಗಿದನು | ಜಾಂತ ಕಂಜ್ಞಾನಪ್ರದಂದಲಲ್ಲುಲ್ಲುಬಿಡು | ಮುಂತೆಕೇಳ್ಸರ್ವಜನಕಂ ವಿಷ್ಣುವೆಂಬನಿ ನ್ನುಕ್ತಿಗೆಲೆನಿರ್ವಾಹಮಂ || 96 ||

ಘನದೆ ‡ ಸೋಽಮೋಽಯೆನುತೆ ಪವತೇರೆನುತೆಮತ್ತೆ | ಜನಿತಾಮತೀನಾ ಮೆನುತ್ತೆ ಜನಿತಾದಿವೋಽ | ಜನಿತಾಪೃಥಿವ್ಯಾಯೆನುತ್ತೆ ಜನಿತಾಗ್ನೇರೆನುತ್ತೆ ತಾ ನಂತೆಜನಿತಾ || ಎನುತೆಸೂರ್ಯಸ್ಯಜನಿತೇಂದ್ರಸ್ಯ ಜನಿತಾಥ| ಯೆನುತೆ ವಿಷ್ಣೋರೆ ನಲುಮೇಶಂ ಪವನಮತಿ ಗ | ಗನ ಭೂಮಿಶುಚಿರವೀಂದ್ರಾಚ್ಯುತಾದ್ಯರ್ಗೆ ಪಿತೃವೆಂದುಃಉಕ್ಕುಲಿವುತ್ತಿದೇ || 97 ||

ಮತ್ತೆ * ಯಸ್ಯೇದಮೆನೆ ವೀರ್ಯಾದೆನುತೆಜಗದೆ|ನುತ್ತುದ್ಭಭೂವಯಸ್ಮಾ ದ್ಬ್ರಹ್ಮವಿಷ್ಣೂಯೆ | ನುತ್ತೆ ತಾಂಜಾತವೇದಾನಮಸ್ತಸ್ಮೈಯೆನುತೆ ರುದ್ರ ಯೆಂದೆನುತ್ತೆ || ಒತ್ತಿರೂಪಾಯ ತುಭ್ಯಮೆನೆ ತನ್ಮೇಯೆಂದೆ | ನುತ್ತುಂ ಮನಃ ಶ್ಶಿವಯೆನುತ್ತೆ ಸಂಕಲ್ಪಂಯೆ| ನುತ್ತಸ್ತುಯೆನಲಾವವನ ವೀರ್ಯದಿಂದೀಜಗತ್ತೊಗೆ ದುದಂತಲ್ಲದೆ|| 98 ||

ಆವನತ್ತಣಿನುದಯಿಸಿದರಬ್ಜಭವವಿಷ್ಣು | ಪಾವಕಾದಿಗಳಂತೆಸಿವ ರು ದ್ರರೂಪನಾ | ದಾವಿಮಲಶಂಭುಗೆ ನಮಸ್ಕರಿಪೆನೆನ್ನ ಮನವೀಪ್ರಕಾರದೊಳೊ ಪ್ಪುವಾ || ಪಾವನಶಿವನನೆನೆಪನುಳ್ಳುದಕ್ಕೆಂದು ಸ | ದ್ಭಾವದಿಂದೊಲ್ದು ಶಿವ ಸಂಕಲ್ಪನಾಮದಿಂ | ದೋಽಪ್ಪೊರಂಜೆಸುವುಪನಿಷತ್ತುಸಾರುತಿದೆ ಸಾಂಬನೇಸರ್ವ ಜನಕನೆಂದು || 99 ||

---

‡ ಸೋಮಃಪವತೇಜನಿತಾ ಮತೀನಾಂಜನಿತಾ ಪೃಥಿವ್ಯಾಜನಿತಾಸೂರ್ಯಸ್ಯ ಜನಿತೇಂದ್ರ ಸ್ಯ ಜನಿತಾಥವಿಷ್ಣೋಃ— ಋಕ್ಕು.

* ಯಸ್ಯೇದಂವೀರ್ಯಾಜ್ಜಗದುದ್ಭಭೂವ—ಯಸ್ಮಾದ್ಬ್ರಹ್ಮ ವಿಷ್ಣೂ ಜಾತವೇದಾನಮಸ್ತ ಸ್ಮೈ ರುದ್ರರೂಪಾಯತುಭ್ಯಂ ತನ್ಮೇಮನಶ್ಶಿವಸಂಕಲ್ಪಮಸ್ತು—ಶಿವಸಂಕಲ್ಪೋಪನಿಷತ್.

ಭರದಿಂ † ಪರಾತ್ಪರತರರಂಚಾಹುರೆನೆ ಪರಾ | ತ್ಪರತರಂ ಧ್ರುವಮೆನಲ್ಬ್ರಹ್ಮಣೋಜನಕಮೆನು | ತಿರದೆ ವಿಷ್ಣೋರೆನುತೆ ವಹ್ನೇರೆನುತ್ತೆ ವಾಯೋಸ್ಸದಾಶಿವಮೆನಲ್ಕೆ || ಪರಕೆಪರತರಪರಮನಂ ನಿತ್ಯನಂ ಶಿವನ | ನುರುಸುರ ಜ್ಯೇಷ್ಠಂಗೆಹರಿಗಗ್ನಿಗನಿಲಂಗೆ | ವರಜನಕನೆಂದುಪೇಳ್ವೆರ್ದವಿದರೆಂದು ಸಾರುತಿದೆ ರವಿಪುರಾಣಂ || 100 ||

ಅದು * ಮುಯಾಸಹಿತೋ ಯೆನುತ್ತೆದೇವ್ಯೋಯೆನೆ ಮು | ದದೆಸೋಮ ಇತ್ಯುಚ್ಯತೇಬುಧೈ ಸ್ಸಯೆನೆಥಂ | ದದಿನೇವಕಾರಣಂನಾನ್ಯೋಯೆನುತ್ತೆವಿಷ್ಣೋರಪಿಜವೈಶ್ರುತಿರೆನೆ || ಪದಪಿನಿಂದುಮೆಯೊಡನೆಸೆವ ದೇವನೆವಿಶಾ | ರದಜಯ್ಯದೆಸೋಮನೆಂದಂಕಿಸಲ್ಪಟ್ಟನವ | ನೆದಲುಪೇಂದ್ರಂಗಮುಳಿದವರ್ಗೆ ಕಾರಣಮುಸ್ಯರಲ್ತೆಂದುಮತ್ತಮೊರೆಗುಂ || 101 ||

ಮತ್ತಂಮತೀನಾಂಜಯೆನೆದಿವಃ ಪೃಥ್ವ್ಯಾಯೆ | ನುತ್ತೆ ವಹ್ನೇರೆಂದೆನುತ್ತೆ ಸೂರ್ಯಸ್ಯಯೆನು | ತೆತ್ತಿತಾಂ ವಜ್ರಿಣಃಸಾಕ್ಷಾದಪಿಜಯೆಂದೆನುತ್ತೆ ವಿಷ್ಣೋರ್ವೈಯೆನೆ || ಸುತ್ತೇನೊಸೋಮೋಜನಯಿತೇಶ್ವರೋ ಯೆಂದೆ | ನುತ್ತಿರಲ್ಮತಿಗಗನಭೂಜಿ ರವೀಂದ್ರಪ್ರರು | ಷೋತ್ತಮಜಯುಕ್ಕುಮಾಪತಿ ಜನಕನೆಂದು ಕಾಶೀಖಂಡಮುಲಿವುತ್ತಿದೇ || 102 ||

ಇರದೆಮೇಣ್ †† ದ್ಯಾವಾಪೃಥಿವ್ಯೋರೆನುತ್ತೆ ಮ | ತ್ತರರೆ ಇಂದ್ರಾಗ್ನ್ಯೋರ್ಧಿಯಾಂ ತಪಯುಮಸ್ಯಯೆನು | ತಿರದದು ಜವರುಣಸ್ಯಯೆಂದೆನುತ್ತುಂ ಶಶಾಂಕಸ್ಯ ಜನಿತಾಯೆನುತ್ತುಂ || ಪರಮೇಶ್ವರೋಯೆನಲ್ವಾಕಕ್ಷಿತೀಂದ್ರಾಗ್ನಿ | ವರಮತಿತತಿಗೆ ನಿನಗೆಯುಮುವರುಣಶಶಿಗಳ್ಗೆ | ಪರನೆಪಿತೃವೆಂದಶರಭೋಕ್ತಿ ನರಸಿಂಹಂಗೆ ಕಾಳಿಕಾಖಂಡದೊಳಿದೇ || 103 ||

---

† ಪರಾತ್ಪರತರಂಚಾಹುಃ ಪರಾತ್ಪರತರಂಧ್ರುವಂ| ಬ್ರಹ್ಮಣೋಜನಕಂವಿಷ್ಣೋ ರ್ವಹ್ನೇರ್ವಾಯೋಸ್ಸದಾಶಿವಃ || ಆದಿತ್ಯಪುರಾಣ.

* ಉಮುಯಾಸಹಿತೋದೇವ ಸ್ಸೋಮಇತ್ಯುಚ್ಯತೇಬುಧೈಃ | ಸಏವಕಾರಣಂನಾನ್ಯೋ ವಿಷ್ಣೋರಪಿಚವೈಶ್ರುತಿಃ—ಮತೀನಾಂಜದಿವಃಪೃಥ್ವ್ಯಾ ವಹ್ನೇಸ್ಸೂರ್ಯಸ್ಯವಜ್ರಿಣಃ | ಸಾಕ್ಷಾದಪಿಚವಿಷ್ಣೋರ್ವೈಸೋಮೋಜನಯಿತೇಶ್ವರಃ—ಕಾಶೀಖಂಡ.

†† ದ್ಯಾವಾಪೃಥಿವ್ಯೋರಿಂದ್ರಾಗ್ನ್ಯೋರ್ಧಿಯಾಂತಪಸುಮಸ್ಯಚ | ವರುಣಸ್ಯಶಶಾಂಕಸ್ಯ ಜನಿತಾಪರಮೇಶ್ವರಃ—ಕಾಳಿಕಾಖಂಡ.

ಕೂರ್ಮೆಯಿಂ * ಬ್ರಹ್ಮವಿಷ್ಣ್ವರ್ಕಶಕ್ರಾಗ್ನಿಜಲ | ಧರ್ಮಾಯೆನುತುಂ ತದುಪುರೋಗವಾಃಯೆನುತೆತ | ನ್ಮರ್ಮವೆತ್ತಿ ಸುರಾಸುರಾಃಸಂಪ್ರಸೂತಾಯೆ ನುತ್ತೆದಲ್ತ್ವತ್ತೋಯೆನೆ || ಪೇರ್ಮೆಯಿಂಸರ್ವೇದಿವೌಕಸೋಯೆಂದೆನೆ ಜ | ತುರ್ಮುಖಾಚ್ಯುತರವೀಂದ್ರಾಗ್ನಿವರುಣಾಂತಕರಿ | ವರ್ಮೊದಲೆನಿಪ ಸುರಾಸುರರೊಗೆದರೀಶ ನಿನ್ನಿಂದೆಂಗುಮಾಸ್ಕಾಂದಮುಂ || 104 ||

ವಿನಯುದೆ † ವಿನಾಕಾಶವೆನೆ ಜಗನ್ನೇಹಯೆಂ | ದೆನೆವಿನಾಕ್ಷ್ಮಾಂವಾಯುನಾವಿನಾತೇಜಸಾ | ಯೆನೆ ವಾರಿಣಾಚ್ಯೈವಯೆನುತೆ ಯಜಮಾನೇನಭಾವಿನಾಯೆನೆಭಾನುನಾ || ಎನುತೆಶಶಿನಾಯನುತೆ ಲೋಕೋಯೆನುತೆ ತಸ್ಯ | ಯೆನುತು ಮೇತ್ತೇಯೆಂದೆನುತ್ತೆ ಶಿಶವಃಪ್ರಭೋ | ರೆನೆ ಶಿವವ್ಯಾಪಾರದಿಂದಿಲ್ಲಿ ಸರ್ವಜಗಮುಂಪ್ರತಿಷ್ಠಿತಮೆನಿಕ್ಕುಂ || 105 ||

ಏನನೊರೆದಪೆನಿಲ್ಲಿ ಶಿವನಷ್ಟಮೂರ್ತಿಮಯ | ವೀನಿಖಿಲಜಗಮೆಂತೆನಲ್ ಗಗನಭೂವಾ | ರುತಾನಲಜಲಾತ್ಮರವಿಶಶಿಗಳಿಲ್ಲದೊಡೆ ಲೋಕಮದುಂಟೆಯದರಿಂದಮುಂ || ಆನಿಜಪ್ರಭುವಿನ ಶಿಶುಗಳೆಂದು ಲೈಂಗ್ಯಮಿದೆ | ನೂಸಮಂ ತಲ್ಲಿಯೇ ‡ ಸ್ತ್ರೀಲಿಂಗಮಖಿಲ ಮೆನು | ತಾನಂದದಿಂ ಸರ್ವಮೆನುತುಂ ಪ್ರಕೃತಿರೆನುತೆಮುಮದೇಹಜಾಯೆನುತ್ತುಂ || 106 ||

ಪುಲ್ಲಿಂಗಮೆನುತೆ ಪುರುಷೋಎಂದೆನುತ್ತೆ ಮ | ತ್ತಲ್ಲಿ ವಿಪ್ರಾಮಮುಮೆನುತ್ತೆ ದೇಹಯೆನುತ್ತೆ ಸಲ್ಲೀ | ಲೆಯಿಂದಂ ಸಮುದ್ಭವೋಯೆನುತುಭಾಭ್ಯಾಮೇವವೈಯೆನುತ್ತುಂ || ನಿಲ್ಲದದು ಸೃಷ್ಟಿರ್ಮಮಯೆನೆ ವಿಪ್ರಾಯೆನುತು | ಮುಲ್ಲಾಸದೆ ನಸಂಶಯೋಯೆನಲ್ವಾದಿ ಕೇ | ಳಿಲ್ಲಿ ನಿಸ್ಸಂದೇಹವೆಂದು ಋಷಿಗಳ್ಗಖಿಲ ಜನಕಶಿವನೊರೆದಪರಿಯುಂ || 107 ||

---

* ಬ್ರಹ್ಮವಿಷ್ಣ್ವರ್ಕಶಕ್ರಾಗ್ನಿ ಜಲಧರ್ಮಾಪುರೋಗವಾಃ | ಸುರಾಸುರಾಸ್ಸಂಪ್ರಸೂತಾಸ್ತ್ವತ್ತಸ್ಸರ್ವೇದಿವೌಕಸಃ—ಸ್ಕಾಂದ.

† ವಿನಾಕಾಶಂಜಗನ್ನೇಹ ವಿನಾಕ್ಷ್ಮಾಂವಾಯುನಾವಿನಾ | ತೇಜಸಾವಾರಿಣಾಚೈವ ಯಜಮಾನೇನಭಾವಿನಾ || ಭಾನುನಾಶಶಿನಾಲೋಕೋ ತಸ್ಯೈತೇಶಿವಃಪ್ರಭೋಃ | ಲೈಂಗ್ಯ.

‡ ಸ್ತ್ರೀಲಿಂಗಮಖಿಲಂಸರ್ವಂ ಪ್ರಕೃತಿರ್ಮಮದೇಹಜಾ | ಪುಲ್ಲಿಂಗಂಪುರುಷೋವಿಪ್ರಾಮಮದೇಹಸಮುದ್ಭವಃ || ಉಭಾಭ್ಯಾಮೇವವೈಸೃಷ್ಟಿ ರ್ಮಮವಿಪ್ರಾನಸಂಶಯಃ ||

ನಿಯತಮಿಾಸ್ತ್ರೀಲಿಂಗ ಮಯವಾದುದೆಲ್ಲವೆ | ನ್ನಯೆದೇಹಜಪ್ರಕೃತಿ ಯಾತೆರದೆಪುಲ್ಲಿಂಗ | ಮಯವಾದುವಲ್ಲವೆನ್ನಯ ಶರೀರೋದ್ಭವಪುರುಷನಕ್ಕು ಮಾಯೆರಡರಿಂ || ಪ್ರಯುತಂಜಗತ್ಸೃಷ್ಟಿಯೆಂದೆಂಗುಮದರಿನಾ | ರಯೆವಿಷ್ಣು ಸರ್ವಜನಕಂದಲಲ್ತೀವಚನ | ಮಯಥಾರ್ಥವಿನ್ನಾಲಿಸೈಸುಕರನಜ್ಞಾಕ್ಷನೆಂದೊರೆಗೆನಿರ್ವಾಹಮಂ || 108 ||

ಸತತ § ಮಥನವಮೇಯೆನುತ್ತೆ ಮಾಸೇಯೆಂದೆ | ನುತೆ ಸರ್ವಲಕ್ಷಣ ಯೆನುತ್ತೆ ಸಂಪೂರ್ಣೋಭ |ವತಿ ಪೂರ್ವಜಾತಿಂಸ್ಮರತಿ ಯೆನಲ್ಬಳಿಕೆ ಕೃತ್ಯಾಕೃತ್ಯಮೆನೆಚಯೆನುತೇ || ಅತಿಶಯದೆಕರ್ಮಜಾನಾತಿಯೆಂದುರದೆ ಸಂ | ಮತಿಸುತೆ ಶುಭಾಶುಭಮೆನೆಚಕರ್ಮವಿಂದತಿಯೆ | ನುತದು ನಾನಾಯೋನಿಯೆನೆ ಸಹಸ್ರಾಣಿಗತ್ವಾಚೈವತುಯೆನುತ್ತೆತಾಂ || 109 ||

ಮತ್ತೆಯುಂಯನ್ಮಯಾಯೆನುತು ಮಾಹಾರಾಯೆ | ನುತ್ತೆ ವಿವಿಧಾಯೆಂದೆನುತ್ತೆ ಭುಕ್ತ್ವಾಎಂದೆ | ನುತ್ತೆ ಪೀತಾಶ್ಚವಿವಿಧಾಸ್ತನಾಯದಿ ಯೆಂದೆನುತ್ತೆ ಯೋನ್ಯಾಃಯೆನುತ್ತೆ || ಸುತ್ತೇಂಪ್ರಮುಂಚಾಮಿತಂ ಪ್ರಪದ್ಯೇಯೆಂದೆ |ನುತ್ತುಂ ಮಹೇಶ್ವರಮೆನಲ್ಬಳಿಕ ಮಾತೆರದಿ |ನೆತ್ತಿಯದುವಾಯುನಾ ವೈಷ್ಣವೇನಾಪಿಸಂಸ್ಪೃಷ್ಟೋಎನುತ್ತೆಕೂಡೇ || 110 ||

ಅದುಜಾಯತೇತದಾಯೆನಲೊಂಬತನೆಯ ಮಾ | ಸದೊಳರ್ಭಕಂ ಗರ್ಭದೋಳ್ಸರ್ವಲಕ್ಷಣಾ| ಭ್ಯುದಿತಾಂಗನಕ್ಕುಮಾಕಾಲದೋಳ್ಪೂರ್ವಜಾತಿ ಸ್ಮೃತ್ಯವಕ್ಕುಮಲ್ಲಿ || ಪುದಿದಕೃತ್ಯಾಕೃತ್ಯಕರ್ಮಂಗಳಂ ತಿಳಿಗು | ಮೊದವಿದಶುಭಾಶುಭವ್ಯಾಪಾರಮುಮನರಿಗು | ಮುದಯಿಸಿಸಕಲಯೋನಿಗಳೊಳಲ್ಲಿಗಲ್ಲಿಗೆ ಸೇವಾಹಾರವುಂಡೆನೆಂಗುಂ || 111 ||

ಪಲತೆರದವೊಲೆಗಳಿನ್ನಿಂದುಣಲ್ಪಟ್ಟವಾ | ನಲಿವೆತ್ತಿನೆತ್ತಾನುಮಿಾಹೀನ ಯೋನಿ ಮಂ | ಡಲದಿಂದೆ ಪೊರಮಡುವೆನೇಗಳಾಶಿವನನಾಶ್ರಯಿಸಿ ಸನ್ಮಾರ್ಗಿಯಾಗಿ || ಸಲೆಬಾಳ್ವೆನೆಂದು ಚಿಂತಿಸುತಿರ್ಪನಂ ಹರಿಯ | ನಿಲರೂಪದಿಂದೆತದ್ಗರ್ಭಮಂ ಪೊಕ್ಕದಂ| ತಲೆಕೆಳಗುಮಾಡಿತಜ್ಞಾನವಳಿದಜ್ಞಾನಮೆಸಗಿಭವಭವಕೆ ಬರಿಸಂ || 112 ||

§ ಅಥನವಮೇಮಾಸೇಸರ್ವಲಕ್ಷಣಸಂಪೂರ್ಣೋಭವತಿ | ಪೂರ್ವಜಾತಿಂಸ್ಮರತಿ | ಕೃತ್ಯಾಕೃತ್ಯಂಚಕರ್ಮಜಾನಾತಿ | ಶುಭಾಶುಭಂಕರ್ಮವಿಂದತಿ | ನಾನಾಯೋನಿಸಹಸ್ರಾಣಿಗತ್ವಾಚೈವತುಯನ್ಮಯಾ | ಆಹಾರಾವಿವಿಧಾಭುಕ್ತಾಃಪೀತಾಶ್ಚವಿವಿಧಾಸ್ತನಾಃ | ಯದಿಯೋನ್ಯಾಃಪ್ರಮುಂಚಾಮಿತಂಪ್ರಪದ್ಯೇಮಹೇಶ್ವರಂ|.ವಾಯುನಾವೈಷ್ಣವೇನಾಪಿಸಂಸ್ಪೃಷ್ಟೋಜಾಯತೇತದಾ|| ಗರ್ಭೋಪನಿಷತ್.

ಎಂದು ಗರ್ಭೋಪನಿಷದುಕ್ತಿಯಿದೆ ಮತ್ತಮಾ। ಚಂದದಿಂಕೇಳ † ಯದಿಯೋನ್ಯಾಃ ಪ್ರಮುಂಚಾಮಿ । ಯೆಂದೆನುತ್ತುಂ ತಂಪ್ರಪದ್ಯೇ ಮಹೇಶ್ವರಂ ವಿರಜಾನಲಜಮೆನುತ್ತುಂ ॥ ಮುಂದೆಭಸ್ಮಯೆನುತ್ತೆ ಮೇಣ್ಗೃಹೀತ್ವಾಚ ಯೆನೆ । ಸಂದಗ್ನಿಹೋತ್ರಜಮೆನುತ್ತುಂ ಸಮುದ್ಧೂಳ್ಯ । ಯೆಂದದುಸದಾಚಾರ್ಯ ಮೆನುತ್ತೆತಾಂ ಪ್ರಣಿಪತ್ಯಯೆನುತಾತ್ಮಯೆಂದೆನುತ್ತುಂ ॥ 113 ॥

ಓರಂತೆವಿದ್ಯದಾ ಸಂಸಾರಸಾಗರಂ । ಘೋರಮೆನೆಲಂಘಯಾಮ್ಯ ಹಮಾತ್ಮನೋಎನು । ತ್ತಾರೀತಿಯಿಂದಿತ್ಥಮೆನುತೆ ಗರ್ಭಗತೋಎನುತ್ತೆತಾಂ ಸ್ಮೃತ್ವಾಯೆನೆ ॥ ಆರಯಲ್‍ಯೋನಿಯಂತ್ರ ಪ್ರಯೆನೆಮತ್ತಂವಿ । ಚಾರದಿಂ ಪೀಡನಾಜ್ಜಾಯತೇ ಯೆಂದೆನುತ । ದೇರಭಸದಿಂ ವಾಯುನಾಯಾತಿವಿಸ್ಮೃತಿ ಮೆನುತೆ ವೈಷ್ಣವೇನಜಯೆನೆ ॥ 114 ॥

ನವಮಾಸದೊಳ್ವಿವಜ್ಞಾನಂ ಸ್ಫುರಿಸೆಪಿಂದೆ । ವಿವರಿಸಿದವ್ಪೋಲೆಲ್ಲವರಿದು ಮೇಣಾಯೋನಿ । ವಿವರದಿಂದೆಂತಕ್ಕೆ ಪೊರಮಡುವೆನಾಗಳಾ ಘನಮಹೇಶನ ನೆಯ್ದುವೆಂ ॥ ತವದೆವಿರಜಾನಲಜ ಭಸಿತವಕ್ಕಗ್ನಿಹೋ। ತ್ರವಿಹಿತಾಗ್ನಿ ಜಭಸಿತ ವಕ್ಕದಂಗ್ರಹಿಸಿ ಯವ । ಯವಕೆ ಲೇಪಿಸಿಸದಾಚಾರ್ಯಂಗೆನಮಿಸಿಯಾತ್ಮಜ್ಞಾನ ಸಾಮರ್ಥ್ಯದಿಂ ॥ 115 ॥

ಘೋರಸಂಸಾರಾಬ್ಧಿಯಂದಾಂಟುವೆಂದಲೆಂ। ದೀರೀತಿಯಿಂಗರ್ಭಗತಜಂತುನೆನೆದವ। ಸ್ಥಾರಸದೊಳಾಳ್ವನಿತರೋಳ್ವಿಷ್ಣು ವಾಯುಸ್ವರೂಪದಿಂಪೊಕ್ಕುದರ ಮಂ॥ ಘೋರನಾಯೋನಿಯಂತ್ರ ಪ್ರಪೀಡನದಿಂದೆ । ಸಾರಸುಜ್ಞಾನಮುಂಮಸುಳಿಸಿಯವಿದ್ಯೆಯಂ । ಪೂರಿಸಿ ಭವಾಂತರಕ್ಕೆಯ್ದುಸುವನೆಂದೊರೆವುತಿದೆ ಸೂತಸಂಹಿತೆಕರಂ ॥ 116 ॥

---

† ಯದಿಯೋನ್ಯಾಃ ಪ್ರಮುಂಚಾಮಿತಂಪ್ರಪದ್ಯೇಮಹೇಶ್ವರಂ । ವಿರಜಾನಲಜಂಭಸ್ಮಗೃಹೀತ್ವಾ ಚಾಗ್ನಿಹೋತ್ರಜಂ।ಸಮುದ್ಧೂಳ್ಯ ಸದಾಚಾರ್ಯಂ ಪ್ರಣಿಪತ್ಯಾತ್ಮವಿದ್ಯಯಾ । ಸಂಸಾರಸಾಗರಂಘೋರಂ ಲಂಘಯಾಮ್ಯಹಮಾತ್ಮನಃ । ಇತ್ಥಂಗರ್ಭಗತೋಸ್ಮೃತ್ವಾಯೋನಿಯಂತ್ರ ಪ್ರಪೀಡನಾತ್ । ಜಾಯತೇಃ ವಾಯುನಾಯಾತಿವಿಸ್ಮೃತಿಂವೈಷ್ಣವೇನಚ—ಸೂತಸಂಹಿತೆ.

ಅಂತರಿಂನೀನೆಪೇಳ್ವೈವಾದಿ ಸುಜ್ಞಾನ | ಸಂತೋಷಮಂಕೆಡಿಸಿ ಜೀವಿಸಂಘಕೆದುಃಖ | ಸಂತಾನಬೀಜಮಾದುರುಭವಕ್ಕೀಡುಮಾಳ್ಪಜ್ಞಾನಮಂ ಪ್ರಕಟಿಸಿ|| ಸಂತತಂಗರ್ಭಶತ್ರುವೆನಿಪ್ಪಧೋಕ್ಷಜನ| ದೆಂತು ಶುಭಕರನಾದನಲ್ತಲ್ತು ಬಿಡುಬಿಡಿಂ | ಮುಂತುಸಿದ್ಧರ್ಪಂ ಕೇಳಯೋನಿಜಂ ವಿಷ್ಣುವೆಂಬುಕ್ತಿಗೆಲೆನಿರ್ವಾಹಮಂ || 117 ||

ತೋಯಜಾಕ್ಷಂಕಶ್ಯಪನ ಸುದತಿಗದಿತಿಗೊಗೆ | ದಾಯವಸರದೊಳಗಿಂದ್ರಾವರಜನೆಂಬ ನಾ | ಮಾಯತ್ತನಾಗನೇ ಸ್ಕಾಂದದಲ್ಲಿದು ಸುಪ್ರಸಿದ್ಧಕಥೆ ಮತ್ತೆ † ದತ್ತಾ || ತ್ರೇಯಸ್ಯಯೆನುತೆಯಃ ಪತ್ನ್ಯಾಯೆನುತ್ತೆ ಮ | ತ್ತೊತ್ತ್ಯಾರದಿಂದಂ ಸಮಾರಾಧಿತಯೆನುತ್ತು | ಮಾಯುತದೆವಾನ್ಪುರಾಬ್ರಹ್ಮಾಚ ಭಗವಾನೆನುತ್ತೆ ವಿಷ್ಣುರೆನುತ್ತೆತಾಂ || 118 ||

ಅಸುವಿನಿಂಯಸ್ಯಾಯೆನುತ್ತೆ ಜಾತೌಸುತೌ | ಯೆನೆ ಪುರಾಯೆನುತ ಸೌದೇವಃಕ್ರಮಾತ್ಪುತ್ರ | ಯೆನೆ ಕಾರಣಪ್ರಾಪಿತೇತಯಾ ಪುಷ್ಪಾಂಜಲೌತದಾಯೆನುತೆಪೂತೇ || ಎನುತೆವಿಸಸರ್ಜಾಂಶಕಂ ಸ್ವಕಮೆನುತ್ತದೇ | ಮನವಾರೆಯಂತರಾಂಜಲಿಯೆನುತೆ ಪುಷ್ಪೇಷು | ವೆನುತೆಮತ್ತಂ ಪ್ರವಿಶ್ಯಾಂತಃ ಪಿನಾಕಿನೋಗರ್ಭವಾಸೋತಿಯೆನುತುಂ || 119 ||

ಉರ್ವುತದುತಾನೆದುರ್ವಾಸೋಯೆನುತೆ ಮತ್ತೆ| ಸರ್ವವಾಸೇಪ್ಸಿತಿಯೆನುತ್ತೀರಯನ್ನೆನುತೆ | ದುರ್ವಾಸನಾಮಾಯೆನುತ್ತೆ ಪುತ್ರೋಭೂದ್ಧತಯೆನೆ ಸಂಸಾರಯೆನುತುಂ|| ನಿರ್ವಹಿಸಿವಿಗ್ರಹೋಎನಲತ್ರಿಯಂಗನೆಯ | ಖರ್ವಭಕ್ತಿಯೊಳರ್ಚಿಸಲ್ಕಜಹರೀಶ್ವರರ | ವರ್ವರದರಾಗಿಬೇಡೆಲೆತಾಯೆ ನಿನಗಾವುದಿಷ್ಟವೆನೆನುಡಿದಳೊಂದಂ || 120 ||

---

† ದತ್ತಾತ್ರೇಯಸ್ಯಯಃಪತ್ನ್ಯಾ ಸಮಾರಾಧಿತವಾನ್ಪುರಾ | ಬ್ರಹ್ಮಾಚಭಗವಾನ್ವಿಷ್ಣುರ್ಯಸ್ಯಾಂಜಾತೌಸುತೌಪುರಾ || ಅಸೌದೇವಃಕ್ರಮಾತ್ಪುತ್ರಕಾರಣಪ್ರಾಪಿತೇತಯಾ | ಪುಷ್ಪಾಂಜಲೌತದಾಪೂತೇವಿಸಸರ್ಜಾಂಶಕಂಸ್ವಕಂ | ಅಂತರಾಂಜಲಿಪುಷ್ಪೇಷು ಪ್ರವಿಶ್ಯಾಂತಃಪಿನಾಕಿನಃ | ಗರ್ಭವಾಸೋತಿದುರ್ವಾಸ ಸ್ಸರ್ವವಾಸೇಪ್ಸಿತೀರಯನ್ | ದುರ್ವಾಸನಾವಪುತ್ರೋಭೂದ್ಧತಸಂಸಾರವಿಗ್ರಹಃ—ಕಾಶೀಖಂಡ.

ತನಯರಾಗೆನಗೆನೀವಿನಿಬರೊಗೆಯಲ್ವೇಳ್ಕು| ಮೆನೆಯಂತೆಗೆಯ್ವೆವೆಂದಜ ಪರಿಗಳೊಗೆದರಂ | ದನಸೂಯೆಗಭವನಾನಂತೊಗೆಯುಲರಿಯೆನೆಂದಾ ಪುತ್ರ ಕಾಮಿಯಾಗಿ || ಮುನಿಯತ್ರಿಯರ್ಚಿಸಿತನಗೀವ ಪುಷ್ಪಾಂಜಲಿಯೊ | ಳಿನಿಸುತ ನ್ನಂಶಮಂ ಸೃಜಿಸಲ್ಕದಾ ಶಿವಾ | ರ್ಚನ ಕುಸುಮದಿಂದೊಗೆವುವೆಲ್ಲರ್ಕೆ ಗರ್ಭ ವಾಸವತಿದುರ್ವಾಸಮೆನುತೇ || 121 ||

ಜನಿಸೆದುರ್ವಾಸಾಖ್ಯಮನ್ವರ್ಥಮಾಗೆ ಭವ | ವನಧಿವಾಡಬನೆನಿಸಿ ಮೆ ರೆದನಿಂತೆಂದು ಬುಧ।ವಿನುತ ಕಾಶೀಖಂಡಮಿದೆ ‡ ಮಯಾಜಯೆನುತ್ತೆ ವಿಷ್ಣು ನಾಕ್ಯೈವಯೆನುತೆ || ಅನುವಿನಿಂ ಬ್ರಹ್ಮಣಾಜ ಮಹಾತ್ಮನಾಯೆನುತೆ | ವಿನಯ್ಯ ನಿನಯೋನಿಜಂ ಮೃತ್ಯುಹೀನಮೆನುತ್ತು | ಮನಿಶಂನಸಾಮರ್ಥ್ಯಮೆನುತುಂ ನಿವೇ ದಿತುಮೆನುತ್ತೊರೆದು ಮತ್ತಲ್ಲಿಯೇ || 122 ||

ಯಜ್ಞಾಂಕಣಂಚಕರ್ಷಾಥಪುತ್ರಾರ್ಥಮೆನೆ | ಯಜ್ಞಯೆನುತುಂ ವಿತ್ತ ಮಸ್ತತಃಯೆಂದೆನ | ಲ್ಪ್ರಜ್ಞೆಯಿಂದಂ ಕ್ಷಣಾದಹಮೆನುತೆ ಶಂಭೋರೆನೆ ತನುಜ ಸ್ತಸ್ಯಯೆನುತುಂ || ಚಾಜ್ಞಯಾಯೆನೆ ಪುತ್ರನಂಬಯುಸಿತಪಮಿಪ್ಪ್ವತಜ್ಞಂಗೆ ತಚ್ಚಿಲಾದಂಗೆ ಶತಮನ್ಯುವಧಿ | ಕಜ್ಞಾನದಿಂ ದೊರೆದನಾನುಮಜಹರಿಮುಖರು ಮುದಯಿಸುವೆವಕಿವೆವದರಿಂ || 123 ||

ನಿಜಮಿದಾವಿತ್ತಸುತರೆಂಮವ್ರೊಲೊಗೆವರಯೋ | ನಿಜನಾಗಿ ಮೃತ್ಯು ವಿರಹಿತನಪ್ಪ ಮಗನನಾ | ಭುಜಗಧರನಲ್ಲದೀಯಲ್ ಶಕ್ತರಿಲ್ಲೆನಲೊಡಂ ಶಿವ ನನಾಮುನೀಂದ್ರಂ || ಭಜಿಸುತುಂಭರ್ಗಪೂಜಾಗಾರ ಕುಟ್ಟಿಮ | ವ್ರಜವನು ಳುವಾನೇಗಿಲೋಳ್ನಂದಿಯೊಗೆದನಾ| ನಜಶಿರಃಕರತನುಜ ನವನಾಜ್ಞೆಯಿಂಬಂದೆ ನೆನುತಿಂತುಲೈಂಗ್ಯಮುಲಿಗುಂ || 124||

---

‡ ಮಯಾಜಃವಿಷ್ಣುನಾಕ್ಯೈವ ಬ್ರಹ್ಮಣಾಜಮಹಾತ್ಮನಾ | ಅಯೋನಿಜಂಮೃತ್ಯುಹೀನಂ ನಸಾಮರ್ಥ್ಯಂ ನಿವೇದಿತುಂ|| ಯಜ್ಞಾಂಕಣಂಚಕರ್ಷಾಥಪುತ್ರಾರ್ಥಂ ಯಜ್ಞಸಿತ್ತಮಃ | ತತಃ ಕ್ಷಣಾದಹಂಶಂಭೋ ಸ್ತನುಜಸ್ತಸ್ಯಚಾಜ್ಞಯಾ || ಲೈಂಗ್ಯ.

ಚಂದದಿಂ ‡ ಮತ್ಸ್ಯಕಚ್ಛಪಯೆನುತೆ ರೂಪಸ್ತ್ವ|ಮೆಂದುಮಾಂಸಾಸ್ಯಗೆನೆ ಕ್ರೋಢಭುಗ್ಭವತಥಾ | ಯೆಂದು ಸೂಕರಯೆನುತೆ ರೂಪೇಣಜಗದೆನುತೆ ವಿಷ್ಣೋಕ್ಷಯಮೆನುತೆಕುರು || ಎಂದುನರಸಿಂಹಾದಿಭಿರೆನೆ ದೇಹೈರೆನುತು | ಮೊಂದಿ ತಾಂಕುತ್ಸಿತೈಸ್ತ್ವಮಸ್ಯೈರೆನೆತದಾ | ಯೆಂದನೇಕಯೆನೆ ದುಃಖಬಹುಳೈರ್ಯುರ್ಗ ಕ್ರೋಧಭವಚಿರಂಪರೇಯೆನುತ್ತುಂ || 125 ||

ಸುಗತಿಯಿಂಯದ್ಯಹಂ ತ್ರ್ಯಂಬಕಾನ್ನಾನ್ಯಮೆನೆ | ಸೊಗಸಿದೇವಮೆನೆ ವೇದ್ಮಿ ಮಹೇಶ್ವರಾದೆನುತೆ | ಮಿಗೆತೇನ ಸತ್ಯೇನ ಗೋವಿಂದನರಕಾರ್ತದಶಯೆನೆ ಯಾಸ್ಯಸಿಯೆನಲ್ಕೆ || ಭೃಗುಪತ್ನಿಯಾದ ದಿವ್ಯಾದೇವಿಯುಂ ಪೆಣ್ಗೊ | ಲೆಗೆ ಹೇಸದಕಟತಲೆಯರಿಯೆ ಹರಿ ಕೂಡೆ ತ | ದ್ಭೃಗುಬಂದು ಕಂಡುಸುಜ್ಞಾನದಿಂ ವಿದು ಹರಿಯಕಪಟವೆಂದರಿದಾತನಂ || 126 ||

ಸಮ್ಮುಖೀಕರಿಸಿಕೊಂಡೆರ್ದೆಯಮೇಲೊದೆದು ಮುಳಿ | ಸಿಂಮತ್ತಮೆಂ ವನೆಲೆದೋಷಿಪೆಣ್ಣಂಕೊಂದೆ | ಕೆಂಮನದರಿಂಮತ್ಸ್ಯಕೂರ್ಮ ಸೂಕರನೃಸಿಂ ಹಾದಿ ಕುತ್ಸಿತರೂಪದಿಂ || ನೀಂಮಗುಳೆಹೀನದಶಯೋನಿಗಳೊಳೊಗೆದವರ | ಸೊಂಮೆನಿಸುವಾಹಾರಮುಂಕೊಂಡು ಜೀವಿಸೆಂ | ದಮ್ಮಮ್ಮ ಶಿವನಿಷ್ಠನಾದ ಭೃಗುಮುನಿವಿಷ್ಣುವಂಶಪಿಸಿ ಮತ್ತಮೆಂದಂ || 127 ||

ಮನದೊಳಭವನನಲ್ಲದನಿಶವಾನಿತರರಂ | ನೆನೆದರಿಯೆನಿದು ಸತ್ಯವಾ ನೊಡೆಲೆ ಗೋವಿಂದ| ನಿನಗೊದವುಗೀಶಾಪ ವೆನಗದಲ್ಲದೊಡೊದವುಗೆಂದು ಭೃಗುಶಪಿಸೆನೊಂದು || ಘನಶಾಪಮುಂಕಳೆಯೆ ತಾಂತ್ರಿಕೋಟ್ಯಬ್ದ ವೀ | ಶನನೆ ಲಕ್ಷ್ಮಿಸಿತಪಂಗೆಯ್ದು ಹರಿಗಿತ್ತನುಮೆ | ಯಿನಿಯಂ ವರಮನಿವುಜಗತ್ರಸ್ತುತಂಗ ಳಾಗೊಪ್ಪುಗೆಂದಧಿಕಕೃಪೆಯಿಂ || 128 ||

---

‡ ಮತ್ಸ್ಯಕಚ್ಛಪರೂಪಸ್ತ್ವಂ ಮಾಂಸಾಸ್ಯಕ್ರೋಢಭುಗ್ಭವ|ತಥಾಸೂಕರರೂಪೇಣ ಜಗದ್ವಿಷ್ಣೋಕ್ಷಯಂಕುರು || ನರಸಿಂಹಾದಿಭಿರ್ವೇಷೈಃ ಕುತ್ಸಿತೈಸ್ತ್ವಮಸ್ಯೈಸ್ತದಾ | ಅನೇಕದುಃಖಬಹುಳೈರ್ಯುಗೈಃ ಕ್ರೋಧಭವಚಿರಂಪರೇಃ || ಯದ್ಯಹಂತ್ರ್ಯಂಬಕಾನ್ನಾನ್ಯಂ ದೇವಂವೇದ್ಮಿಮಹೇಶ್ವರಾತ್|ತೇನಸತ್ಯೇನಗೋವಿಂದ ನರಕಾರ್ತದಶಯಾಸ್ಯಸಿ || ಕಾಶಿಕಾಖಂಡ.

ಇಂತೆಂದುಕಾಳಿಕಾಖಂಡಮಿದೆ ಮೇಣೀ ಕ | ಥಾಂತರಕೆ ಕಪಟಭೂಸು ರನಾಗಿಬಂದಂಗ | ಜಾಂತಕಂ ಗಗಜೆದೃಷ್ಟಾಂತಮಾಗುಸಿರ್ದುಕ್ತಿ ಪದ್ಮಪೌ ರಾಣದೊಳದೆ || ಅಂತರಿಂಮತ್ಸ್ಯಾದಿ ಯೋನಿಗಳೊಳುದ್ಭವಿಸಿ | ಮುಂದೆ ರೇ ಣುಕೆಗೆ ಜಮದಗ್ನಿಗೊಗೆಯನೆ ದಾನ | ವಾಂತಕಂ ಪರಶುರಾಮಾಖ್ಯದಿಂ ದಶ ರಥಂಗಾಕೌಸಲಾದೇವಿಗಂ || 129 ||

ರಾಮಾಹ್ವಯದೆಜನಿಸನೇ ಮೇಣ್ಪರಾಶರಂ | ಗಾಮತ್ಸ್ಯಗಂಧಿಗಂ ಬಾದರಾಯಣನೆಂಬನಾಮದಿಂಪುಟ್ಟನೆ | ಮಹಾಭಾರತೋಕ್ತಿಯಿದು ಬಳಿಕ ಥೊ † ದ್ವಾರಾದೆನೆ || ಆಮಾಳ್ಕೆಯಿಂ ವಿನಿಷ್ಕ್ರಾಂತೋಭವಾಮಿಯೆನು | ತೇ ಮಾತಹಮಧೋಕ್ಷಜೋಎನೆ ಶಿವರಹಸ್ಯ | ವಾಮುಕುಂದಂ ಪಿತಾಮಹನಧೋ ದ್ವಾರದಿಂದೊಗೆದಧೋಕ್ಷಜನೆನಿಸನೇ || 130 ||

ದೇವಕೀನಂದನಶ್ಶೌರಿರೆನುತುಂ ಮತ್ತ | ಮೋವೊವಸುದೇವೋಸ್ಯಜನ ಕೋಎನುತ್ತಿಂತು | ಟೀವೇಳ್ದನಮರ ಸಿಂಹಾದಿಗಳಿರಲ್ಕೀಗಳುಂ ವರ್ಷವರ್ಷ ಕೋರ್ಕೆ || ಆವಿಷ್ಣುವೊಗೆದದಿನವೆಂದಾಜಯಂತಿಯಂ | ನೀವೆಮನ್ನಿಸುತಿರ್ದ್ದ ಯೋನಿಜಂಹರಿಯೆಂಬು | ದಾವವಿವರಂಬಿಡಿನ್ನವನ ನಚ್ಯುತನೆಂಬನುಡಿಗೆ ಕೇಳ್ದೆ ವಾಹಮುಂ || 131 ||

ಮತಿಹೀನ ‡ಕೇಶ ವೋಯಂಚ್ಯುತೋಭವಿತು ಮ | ರ್ಹತಿಜನನವತ್ವಾ ಜ್ಜನನವದ್ಯದೇವತ | ಚ್ಯುತಿಮತ್ವಟೋಯಥಾಯಂ ತಥಾತಸ್ಮಾತ್ತಥೇತಿಸ ತ್ವಂಜರೂಪ || ಯುತಮಾದಕತದೆ ಹೇತ್ವಾಭಾಸಪಂಚಕರ | ಪಿತಮಾದವಿಮ ಲಾನುಮಾನಮಿರೆ ವಿಷ್ಣುವ | ಚ್ಯುತನೆ ಪೇಳಾದೊಡಂ ಪೇಳ್ವಾಗಮಮುಖದೆ ಸಭೆಪರೀಕ್ಷಿಸುತಿರ್ಪನಂ || 132 ||

---

† ಅಧೋದ್ವಾರಾದ್ವಿನಿಷ್ಕ್ರಾಂತೋ ಭವಾಮ್ಯಹಮಧೋಕ್ಷಜಃ—ಶಿವರಹಸ್ಯ.

‡ ಕೇಶವೋಯಂಚ್ಯುತೋಭವಿತುಮರ್ಹತಿ—ಜನನವತ್ವಾಜ್ಜನನವದ್ಯ ದೇವತಚ್ಚ್ಯುತಿ ಮತ್ವಟೋಯಥಾಯಂತಸ್ಮಾತ್ತಥೇತಿ—

ಭರದೆ † ಪಾಣೌಬ್ರಹ್ಮಯೆನೆ ಕಪಾಲಮೆನೆ ಕರ | ಸರಸಿಜದೊಳಜಶಿರಂ
ಸ್ಕಂಧೇಮುರಾರೇರ್ವ | ಪುರೆನೆ ಪೆಗಲೋಳ್ವಿಷ್ಣುವಿನಪೆಣಂ ದೇವಾಸ್ಥಿವೃಂದಸ್ರ
ಜೋಽನಲ್ಕೆ || ಸುರರಸ್ಥಿಮಾಲೆಯಂಗದೊಳಹೋ ಪ್ರಳಯಾವ| ಸರದೊಳಿಂತೊ
ಪ್ಪುವಶಿವಂ ಸಲಹುಗೆಂಬುಕ್ತಿ | ಹರ ನಿಷ್ಠ ಬೋಧಾಯನಾರ್ಯ ಕೃತತನ್ಮಹಾ
ನಾಟಕದನಾಂದಿಯೊಳಿದೆ || 133 ||

ಮತ್ತೆಕಲ್ಪಾಂತೇಶಮಿತಯೆನುತ್ತೀಪರಿಯೊ | ಳೆತ್ತಿಗಾಳಂ ತ್ರಿವಿಕ್ರಮ
ನಸ್ಥಿನೇಣಹಿಪ | ನುತ್ತುಂಗನರಹರಿಯುಗುರೆ ಕೊಂಕಿ ಯಾದಿಕೋಲನಮಾಂ
ಸವೆರೆಯಾಗಿರೆ || ಸುತ್ತೇಂಪ್ರಳಯಕಾಲದೇಕಾರ್ಣವದೊಳಗು | ನ್ಮತ್ತ ಕಚ್ಛ
ಪಮತ್ಸ್ಯಯುಗಮಂ ತೆಗೆದಧೀವ | ರೋತ್ತಂಸರೂಪಂಹರಂ ಸುಜನರಜ್ಞಾನ
ಮಂ ಕೆಡಿಸುಗೆಂಧ ನುಲಿಗುಂ || 134 ||

ಅಂದದಿಂ ‡ ಬ್ರಹ್ಮಾಣಮಿಂದ್ರಮೆನೆ ವಿಷ್ಣುಂಚ | ಯೆಂದು ಯಮಮ
ನ್ಯಾನ್ ಸುರಾಸುರಾನೆನೆ ಯತೋ| ಯೆಂದದುನಿಗೃಹ್ಯಹರಸಿಯೆನೆ ಪರಇತ್ಯುಚ್ಯ
ಸೇತತೋಽನೆಬೊಮ್ಮನಂ || ಇಂದಿರನ ನಚ್ಯುತನ ನಂತಕನ ನುಳಿದಸುರ | ರಂ
ದನುಜರಂ ಪರಿಸಿದುದರಿಂದೆ ಹರನೆನಿಪ | ನಿಂದುಧರನೆಂಗುಮಾಸ್ಕಾಂದಮೆಲೆ
ಪಾದಿಯಚ್ಯುತನೋರ್ವನಿಂದಳಿವನೇ || 135 ||

ಘನಗುರುವರಂಮತ್ತಮಿಂತೆಂದೊರೆದ ನಚ್ಯು| ತನ ವಿಧಿಯಪರಿಯನ §
ವ್ಯಾಪಿತವ ವಸ್ತ್ವತ್ವ | ಮೆನೆ ಕಪಾಲಂಕೂರ್ಮರೂಪಿಣೊ ಹರಹಾರಯೆನೆ ಲತಾ
ಯೆನುತೆಮಧ್ಯೇ || ಎನೆಮುಗ್ಧಕಸ್ಮಾನ್ನ ಬುಧ್ಯಸಿಯೆನಲ್ಕೂರ್ಮ| ವೆನಿಸಿದಭವ
ತ್ಕಪಾಲವನೀಶಪಾರದ | ಲ್ಲಿ ನೃಸಿಂಹಮೂಘನೋಹೇಂ ತಿಳಿಯೆಯೆಂಬಶರಭೋ
ಕ್ತಿಯಾಸ್ಕಾಂದದೊಳಿದೇ || 136 ||

---

† "ಪಾಣೌಬ್ರಂಹಕಪಾಲಂಸ್ಕಂವೇ ಮುರಾರೇರ್ವಪುಃ | ಧೇವಾಸ್ಥಿವ್ರಂದಸ್ರಜಃ" ಬೋಧಾಯನಾರ್ಯಕೃತ ಮಹಾನಾಟಕದ ನಾಂದಿ.

‡ ಬ್ರಹ್ಮಾಣಮಿಂದ್ರಂವಿಷ್ಣುಂಚ ಯಮಮನ್ಯಾನ್‌ಸುರಾಸುರಾನ್ | ಯತೋಽನಿಗೃಹ್ಯಹರಸಿಹರಇತ್ಯುಚ್ಯಸೇತತಃ-ಸ್ಕಾಂದ.

§ ಅವ್ಯಾಪಿತವಪರ್ವತ್ವಂ ಕಪಾಲಂಕೂರ್ಮರೂಪಿಣಃ | ಹರಹಾರಲತಾಮಧ್ಯೇ ಮುಗ್ಧಕಸ್ಮಾನ್ನಬುಧ್ಯಸಿ-ಸ್ಕಾಂದವಲ್ಲಿನ ಶರಭೋಕ್ತಿ.

ಭರದಿಂ † ತ್ರಿಯಂಬಕೋಯೆನೆ ಬಕೋನಾಮಯೆನು | ತರರೆರುದ್ರೋ ಯೆನುತೆ ನಾರಾಯಣಯೆನುತ್ತು | ಮಿರದದುಶಿರಶ್ಛಿಂಚುನಾ ಚಕರ್ತಯೆನೆ ಕಲ್ಪಾಬ್ಧಿಯೋಳ್ಮತ್ಸ್ಯನಾಗಿ || ಚರಿಪಾಹರಿಯ ಕೊರಲನೊತ್ತಿಕೊಕ್ಕಿಂದೆ ಕ |ತ್ತರಿಸಿದಂಬಕರುದ್ರನಾಗಿಹರನೆಂದಥ | ರ್ವ ರಸೋಕ್ತಿಯಿದೆ ಯಚ್ಯುತಂಗಡಳ್ವಂಗಡಾಕೇಳಿವಲ್ಲಾಚೋದ್ಯಮಂ || 137 ||

ಪ್ರಾಕಟದಿ ‡ ನುತ್ಪಾಟ್ಯದಂಷ್ಟ್ರಾಮೆನುತ್ತೆ ತ | ಸ್ಯೈಕಾಂದಧಾರೋರಸಿಯೆನೆ ಭೂಷಣಮೆನುತು | ಮೇಕಶೃಂಗೋವರಾಹೋ ಭೂತ್ತದಾಪ್ರಭೃತಿ ಮಾಧವೋಯೆನೆದಂಷ್ಟ್ರಿಯಾ || ಅಕ್ಕತಿಯಹರಿಯಂಹರಿಸಿಯೊಂದುದಾಡೆಯನು | ಮಾಕಾಂತನುರೆಕೀಳ್ತುರೋಭೂಷಣಂಗೆಯ್ದು | ನಾಕಾಲದಿಂ ಪಂದಿಗಾಯ್ತೊಂದುದಾಡೆಯೆಂಗುಂ ಸ್ಕಾಂದಮುಂ ಲೈಂಗ್ಯಮುಂ || 138 ||

ಸಾಹಸದೆ § ಪುತ್ರಪೌತ್ರಾವೃತಂ ಸ್ಕಂದೋವ | ರಾಹಂ ವ್ಯವಧದೆಂಡೆನುತ್ತುಂ ಬಲೀಯೆನು | ತ್ತಾ ಹತಾಮದ್ಯಾಪಿಸೂಕರಾರೋಹ ತೀರ್ಥಮೆನೆ ಗಂಗಾಯೆನುತ್ತುಂ|| ನೇಹದೆತಟೇಸ್ಥಿತಮೆನುತೆವಲಂ ಸ್ಕಂದ ಶ | ಕ್ತ್ಯಾಹತಂ ಯತ್ರಯಂದೆನೆ ವರಾಹಾಖ್ಯೋಮ್ಯ | ತೋಹರಿರೆನಲ್ಕೆ ಹರಿಸೂಕರತ್ವವನಾಂತು ಪುತ್ರಪೌತ್ರಾಳಿಸಹಿತಂ || 139 ||

ಇರೆಗುಹಂಗಂಗಾತಟದೊಳೆ ತಕ್ಕೋಲಸಂ | ಹರಿಸಲದರಿಂದಲ್ಲಿ ಸೂಕರಾರೋಹಮಂ | ಬುರು ತೀರ್ಥಮಿಪ್ಪುದೀಗಳುಮೆಂದು ಕಾಳಿಕಾಖಂಡಮಿಡೆಯೆಂತಚ್ಯುತಂ || ಭರದಿಂ †† ಪುರಾಹಿರಣ್ಯಾಕಶಿಪುಂ ದೈತ್ಯಯೆಂ | ದೊರೆದು ರಾಜಂ ಮಹಾಬಲಮೆನುತೆ ಹತ್ವಾಯೆ | ನೆರಸೋಕ್ತಿಯಿಂತದೆಂದನುತೆ ರುಧಿರಾಪಾನಯೆನುತುಂ ಪ್ರಮತ್ತಮೆನುತೆ || 140 ||

---

† ತ್ರಿಯಂಬಕೋಬಕೋನಾಮ ರುದ್ರಃ ನಾರಾಯಣಶಿರಶ್ಛಿಂಚುನಾಚಕರ್ತ--ಅಥರ್ವ.

‡ ಉತ್ಪಾಟ್ಯದಂಷ್ಟ್ರಾಂತಸ್ಯೈಕಾಂ ದಧಾರೋರಸಿಭೂಷಣಂ | ಏಕಶೃಂಗೋವರಾಹೋ ಭೂತ್ತದಾಪ್ರಭೃತಿಮಾಧವಃ—ಸ್ಕಾಂದ—ಲೈಂಗ್ಯ.

§ ಪುತ್ರಪೌತ್ರಾವೃತಂಸ್ಕಂದೋ ವರಾಹಂವ್ಯವಧದ್ಬಲೀ | ಅದ್ಯಾಪಿಸೂಕರಾರೋಹ ತೀರ್ಥಂಗಂಗಾತಟೇಸ್ಥಿತಂ-ಸ್ಕಂದಶಕ್ತ್ಯಾಹತೋಯತ್ರವರಾಹಾಖ್ಯೋಮ್ಯತೋಹರಿಃ-ಕಾಳಿಕಾಖಂಡ.

†† ಪುರಾಹಿರಣ್ಯಕಶಿಪುಂ ದೈತ್ಯರಾಜಂಮಹಾಬಲಂ | ಹತ್ವಾತಮ್ರುಧಿರಾಪಾನ ಪ್ರಮತ್ತಂಯಾಚಿತಸ್ಸುರೈಃ | ರುದ್ರಶ್ಶರಭರೂಪೇಣ ನೃಸಿಂಹಂತಮಪೀಡಯತ್ | ತದ್ವಕ್ತ್ರಶೇಷಂತದ್ಗಾತ್ರಂ ಧೃತ್ವಾಶರಭವಿಗ್ರಹಃ | ನೃಸಿಂಹಕೃತ್ತಿವಸನಸ್ತದಾಪ್ರಭೃತಿಶಂಕರಃ || ಹರಿಂಹರಂತಮನುಯಾಂತಿ ದೇವಾವಿಶ್ವೇಶ್ವರೇಶಾನಂವೃಷಭಂವಮತೀನಾಂ | ಸ್ಕಾಂದ—ಲೈಂಗ್ಯ—ಯಜುಸ್ಸು.

ವಿಮಲೋಕ್ತಿಯಿಂ ಯಾಚಿತಃ ಸುರೈರುದ್ರೋಯೆ | ನೆ ಮುದದಿಂ ಶರಭ ರೂಪೇಣಯೆಂದೆನೆ ನೃಸಿಂ | ಹಮೆನೆ ತಮಪೀಡಯದೆನಲ್ಬೇರೆ ತದ್ವಕ್ತ್ರಶೇಷ ಮೆಂದೆನುತೆಕೂಡೆ || ಅಮರ್ದುತದ್ಗಾತ್ರಮೆನೆ ಧೃತ್ವಾಶರಭಯೆನು | ತ್ತಮದು ನಖವಿಂ ವಿಗ್ರಹೋನೃಸಿಂಹಯೆನೆ ಸಂ |ಭ್ರಮಿಸುತುಂ ಕೃತ್ತಿವಸನಸ್ತದಾಪ್ರಭೃತಿ ಯೆನೆ ಶಂಕರೋಯೆನುತೆ ಬಳಿಕಂ || 141 ||

ಭರದಿಂಹರಿಂಹರಂತಮನುಯಾಂತಿಯೆನುತ್ತು | ಮರರೆದೇವಾಯೆನುತೆ ವಿಶ್ವಸ್ಯಯೆಂದೆನು | ತ್ತೊರೆವುತೀಶಾನಂ ವೃಷಭಮೆನೆ ಮತೀನಾಮೆನಲ್ಕೆ ಬಲ ವಂತನಾದಾ || ಸುರರಿಪುಶ್ರೇಷ್ಠಂ ಹಿರಣ್ಯಕಶಿಪುವನಹೋ | ನರಸಿಂಹನುರೆ ಕೊಂದು ತದ್ರಕ್ತಪಾನದಿಂ | ಕರಮೆಸೊಕ್ಕಿ ಜಗತ್ತನಿರಲೀಯದಿರೆ ಶಿವಂಗ ಮರರ್ವೊರೆಯನಿಡಲೊಡಂ || 142 ||

ಶರಭರೂಪದೆತನ್ನೃಸಿಂಹನಂಕೊಂದಾತ|ನುರುಚರ್ಮಮಂ ಶಿರಸ್ಸಂಧರಿಸೆ ಯಿಂದಿಂದೆ | ನರಸಿಂಹಚರ್ಮಧರನಾದನಂತಪ್ಪಹರಿ ಹರನನಿಚ್ಛಾದಾತ್ಮವಂ|| ವರಮತಿಗೆವಿಶ್ವಕ್ಕಧೀಶನಂ ಜಯಜೀಯು | ಹರಹರ ನಮೋಯೆನುತ್ತೆಯ್ದಿ ನುತಿ ಸಿದರಖಿಲ | ಸುರರೆಂದುತಾಂ ಸ್ಕಾಂದಮುಂ ಲೈಂಗ್ಯಮುಂ ಯಜುಸ್ಸುಮಿದೆ ಹರಿಯೆಂತಚ್ಯುತಂ || 143 ||

ಚಕ್ರೇಶಸಂಹಯನಂಮುಬಂಧಿಸಿ ದಾತ್ರಿ | ವಿಕ್ರಮನನುರೆಮೆಟ್ಟೆ ಮು ರಿಯನೆಪರಂ ಭೃಗುವಿ | ನಾಕ್ರೂರಶಾಪದಿಂ ಜನಿಸಿನಾರದನಶಾಪದೆ ಜಾನಕಿ ಯ ನಗಲ್ದು || ವಕ್ರತೆಯನೆಸಗಿದುರ್ವಾಸರಿಂಪಡೆದ ಶಾ | ಪಕ್ರಿಯೆಯಿನಿರದೆ ತೊರೆಯೊಳ್ಬೀಳನೇರಾಮ | ನೀಕ್ರಮದಿನಳಿವನಚ್ಯುತನೆ ಪೇಳೆಂತೆಂದು ಸಾರು ಗುಂಸ್ಕಾಂದಮೊಲವಿಂ || 144 ||

ವಿನನೆಂಬೆಂವಾದಿಯಚ್ಯುತಂಗಾದ ದುಃ | ಖಾಸೀಕಮಂ ಯೌವನೋ ನ್ಮತ್ತಚಿತ್ತರ | ಜ್ಞಾಸಿಗಳ್ಯಾದವೇಶನ ಕುಮಾರರ್ಕೊಬ್ಬಿಯೊಂದು ಪಗ ಲೆಖಿಳ್ಬಿನದದಿಂ || ಮಾಸಿತೋಜ್ವಲ್ಯಪಿಂಡಾರಕ ಮಹಾತೀರ್ಥ | ದಾನಿಕಟಕೆ ಯ್ದಿತತ್ತೀರದೊಳ್ತಪಮಿರ್ಪ | ನೂನವಿಶ್ವಾಮಿತ್ರ ಕಣ್ವದುರ್ವಾಸ ಪ್ರಮುಖ ಮುನಿಗಳಂ ಕಾಣುತೇ || 145 ||

ಸಾಂಬನಂ ಜಾಂಬವತಿಯಣುಗನಂ ಸ್ತ್ರೀವೋಲ್ತೆ | ಠಂಬೊಳೆಯೆ ಸಿಂ
ರಿಸಿತನ್ನುನಿಗಳೆಡೆಗೆ ತಂ | ದೇಂ ಬಣ್ಣಿಪೆಂನಮಿಸಿ ಭಾವಿಕಾರ್ಯಂಗೇಳ್ವೆವೆನುತೆ
ಬಲ್ಗನ್ನದಿಂದೆ || ಡಂಬಕರ್ಕೇಳ್ದರೀಪುತ್ರಕ್ಕಾಮಿಯ ಬಭ್ರು | ವೆಂಬವನ ಪೆಂಡಿ
ರಿವಳೀನಂಪೆರುವಳೆಂಬು | ದಂ ಬೆಸಸಿದರ್ಪೆರುವಳೀಕೆಯೊನಕೆಯವದರಿನಳಿವುದ
ಚ್ಯುತನವಂಶಂ || 146 ||

ಎಂದುದುರ್ವಾಸಾದಿಮುನಿಮುಖ್ಯರತಿಕೋಪ | ದಿಂದೊರೆಯೆಕೇಳ್ದು
ಗಹಗಹಿಸುತುಂ ದ್ವಾರವತಿ | ಗಂದಯ್ದುವುದುಮುವನಧೊಂದು ಪೇರೊನಕೆ
ಯಂಪೆರೆಹರಿಯೊಳಾಳೋಚಿಸಿ || ಇಂದಿದಂವಾರ್ಧಿಯೊಳ್ತೀದು ಬಿಸುಟೊಡೆಮು
ನಿಗ | ಳೆಂದಮಾತೆಮ್ಮನೇಗೆಯ್ವುದೆಂದದನವ | ರ್ತಂದಬ್ಧಿಯೋಳ್ತೀದದರ ಶೇಷ
ಮಿನಿತನಾನೀರ್ಗಿಟ್ಟುಬಂದಿರ್ಪ್ಪಿನಂ || 147 ||

ಅಂತದಂಮಿಾನೊಂದು ನುಂಗಿವಿಹರಿಸುತಿರೆ ಸ | ಮಂತುಜರ ಕಾಪ್ವಯಂ
ಗಾಳವನಿಡಲ್ಕದೋ | ರಂತೆ ಸಿಲ್ಕಲೊಡಂತೆಗೆದು ಸೀಳ್ವೆಡೆಯೊಳದರ ಪೊಡೆಯೊ
ಳಾಮುಸಲಾಂಶಮಂ || ಮುಂತೆಕಂಡಿದು ಚಿತ್ರವೆಂದೊಂದು ಬಾಣವನ | ವಂ
ತುರಿಪದಿಂಮಾಡಿಸಿದನದಂತೇದ ನೀ | ರ್ಝಂ ತಡವಿಡದುಗೇಕೆನಿಸಿ ಪುಟ್ಟಿತಿಂತಿರ್ಪ್ಪ
ತಿರಲ್ಕಿತ್ತಲೊಂದುದೆವಸಂ || 148 ||

ವನಮಾಲಿಸಾಂಬಸತ್ಪ್ರದ್ಯುಮ್ನ ಕೃತವರ್ಮ | ರನಿರುದ್ಧ ಚಾರುವರ್ಮ
ಕ್ರೂರವರ್ಮಯದು | ಜನಿತರೆಲ್ಲಂ ಮದ್ಯವೀಂಟಿಯಾಸೊಕ್ಕಿಂದೆ ಮೆಯ್ಮರೆ
ದುತಂತಮ್ಮೊಳೆ || ಘನವೈರಮುಣ್ಮೆ ಪೊಯ್ದಾಡಿ ವಪ್ರಪ್ರಾಯ | ಮೆನಿಸಿದ
ಗೇಕಿಂದಳಿಯೆ ಪುರಂಪಾಳಾಗೆ | ದನುಜರಿಪು ಭಾರ್ಯಾಗ್ರಜಾದಿಗಳ್ವೆರಸಬ್ಧಿಯಂ
ಪಾಂಟಿನೊಂದುಬಂದು || 149 ||

ಮುನಿಯಷ್ಟವಕ್ರನುಂಕೊಟ್ಟ ಶಾಪಂಬರ್ಪ್ಪ | ದಿನಮೊದವಲೊಂದಡವಿ
ಯೊಳ್ಪಳಲ್ದಚ್ಯುತಂ | ವಿನುಪೆಡದ ಮೊಳಕಾಲಮೇಲೆ ದುವಾಸ್ವನುಂಡಿರಿಸಿ
ದುದ ನಖಿಲಾಂಗಕೆ || ಮನವಾರೆಪೂಸಿಪೂಸ ಬಿಟ್ಟ ಕಾಲ್ಪಳವ | ನನುವಾಗಿ
ತಾನಿಟ್ಟುಪಟ್ಟಿರಲ್ಕದ ನೇಣ | ನೆನುತಾಜರಕನೆಸಳೊಡಂ ಕೃಷ್ಣನಳಿಯೆ ರಾಮಂ
ಪೆಣಸಿತಾನುಮಳಿದಂ || 150 ||

ಅತಿಪಥಾಕ್ರಮಿಪಾರ್ಥನುಂ ನೋಡುತಿರೆ ಹರಿಯ | ಸತಿಯರಂ ಪದಿನಾ ರುಸಾವಿರಮನಾ ಶಬರ | ತತಿಕೊಂಡುಪೋದುದಾಕಾಲದೊಳಗೋ ವರ್ ವಾಸಂಕಾಯ್ದುದಿಲ್ಲಕ್ಕಟಾ || ವಿತತರಥಚಕ್ರ ಶಾರ್ಙ್ಗಗದಾಸ್ತ್ರ ಶಂಖಂಗ | ಳ ತುಳಶಕ್ತಿಗಳೆತ್ತಸರಿದವು ಗರುತ್ಮನಾ | ಪ್ರತಿಯೆತ್ತಮುಸುಳಿಸಿತುನೀನೀಗಳೊರೆ ವಚ್ಯುತತ್ವವಾವೆಡೆಗೆಪೋಯ್ತು || 151 ||

ಆಪರಬ್ರಹ್ಮವೆನಿಸುವಹರಿಯನಸಮಮುನಿ | ಶಾಪವಂಡಲೆದಡವಿ ಯೋಳ್ಕೆಡಪಿತಾಪೆಣ | ಕ್ಕೋಪರಿಲ್ಲದೆ ಪಾರ್ಥನರವುಳ್ಳಿನ್ನೊತ್ತ ಸಲೆಗೆಯ್ದುತಲೆಗಿರಿದು ಪರಿಗೇ || ತಾಪಿಸುತೆತಲೆಗೊಳ್ಳಿಯಿರಿಯೆ ತದ್ರುಕ್ಮಿಣೀ | ಸ್ತ್ರೀಪೂರ್ವಮಾದಷ್ಟ ಮಹಿಷಿಯರ್ ಕೃಷ್ಣನೊಡ | ನೇವೇಳ್ವೆನಂದು ತೋಳ್ಗೈಗೊಟ್ಟರಂತೆ ಸಂದಳ್ಳಲನೊಳಾರೇವತೀ || 152 ||

‡ ಪ್ರೇತಕಾರ್ಯಂಪರೇಃಕೃತ್ವಾಪಯೆನುತ್ತೆ ಮ | ತ್ತೋತುಪಾರ್ಥಃಪರಮವೀರ್ಯವಾನೆನುತೆ ಮೇ | ಸಾತೆರದೆ ರಾಮಸ್ಯಚತಥಾಯೆನುತ್ತು ಮನ್ಯೇಷಾಮೆನಲ್ಕೆ ಲೈಂಗ್ಯಂ || ಪ್ರೀತಿಯಿಂಮೇಲೆ ನರನಸ್ಥಿಸಂಧಾನಪುಮ | ನಾತತಶ್ರಾದ್ಧಮಂ ತತ್ಸಪಿಂಡಕಮಾಗಿ | ಮಾತೇಂ ಯಥಾವಿಧಿಯಿನಚ್ಯುತ ಬಲಾಂಗನಾಳಿಗೆನೆಗಳ್ದನೇನಾಪ್ತನೋ || 153 ||

ಅಂದುಕೊಲೆಯಿಂಸತ್ತಹರಿಗೆ ಬಲಿಕಾರ್ಶ್ಯಕೆ ಧ | ನಂ ದೊರಕದಿರೆ ಫಲ್ಗುನಂಕಂದಮೂಲಫಲ | ವೃಂದದಿಂಬಲಿಗೊಟ್ಟು ಸಗ್ಗಕೆಯ್ದಿದನಂತರಿಂ ದೀಗಳುಂ ಕೈದುವಿಂ || ಹೊಂದಿದರ್ಗವನಿನಾರಾಯಣ ಬಲಿಯನೆಸಪು | ದೆಂದಿದೆಲ್ಲವನೆಯ್ದೆ ವಿಷ್ಣುಪೌರಾಣಮುಂ | ಸ್ಕಾಂದಮುಂ ಲೈಂಗ್ಯಮುಂ ಕೌರ್ಮಮುಂ ಸಾರುತಿವೆ ಯಂತಳಿವನೆಂತಚ್ಯುತಂ || 154 ||

ವಿನಯದಿಂ § ವಿಷ್ಣುಸಂಜ್ಞಾಹ್ಯ ಸಂಖ್ಯಾತಾಪಿ | ಯೆನುತ ಸಂಖ್ಯಾತಾಃಪಿತಾಮಹಾಃಯೆಂದೆನುತೆ | ಘನದಸಂಖ್ಯಾತಾಃ ಸುರೇಂದ್ರಾಶ್ಚನಿತ್ಯಏಕೋಏನುತ್ತೆಮಹೇಶ್ವರೋ || ಎನಲಸಂಖ್ಯಾತವಿಷ್ಣುಗಳ ಗಣಿತಾಂಬುಜಾ | ಸನರನೇಕೇಂದ್ರಪ್ರಮುಖ ರಳಿದರೀಶನೋ | ರ್ವನೆ ನಿತ್ಯನೆಂಗುಮಾಸ್ಕಾಂದ ಮಾಪ ರಿಘ್ಲೊಳ್ಳೈಲೈಂಗ್ಯ ಪೌರಾಣದೊಳಿದೇ || 155 ||

---

‡ ಪ್ರೇತಕಾರ್ಯಂಪರೇಃಕೃತ್ವಾಪಾರ್ಥಃ ಪರಮವೀರ್ಯವಾನ್ | ರಾಮಸ್ಯಚತಥಾನ್ಯೇಷಾಂ— ಲೈಂಗ್ಯ.

§ ವಿಷ್ಣುಸಂಜ್ಞಾಹ್ಯಸಂಖ್ಯಾತಾಹ್ಯ ಸಂಖ್ಯಾತಾಃಪಿತಾಮಹಾಃ | ಅಸಂಖ್ಯಾತಾಸ್ಸುರೇಂದ್ರಾಶ್ಚನಿತ್ಯಏಕೋಮಹೇಶ್ವರಃ—ಸ್ಕಾಂದ | ಲೈಂಗ್ಯ.

ಈನಿಮಿತ್ತಂವಿಷ್ಣುಗಚ್ಯುತತ್ವಂ ಸಲ್ಲ | ದೇನಾನು ಮಚ್ಯುತಾಖ್ಯಮದು ಟ್ಟೊಡಂನಭಕ | ನೂನಾಂಬರಾಖ್ಯಂಪ್ಲವಂಗೆಹರ್ಯಾಖ್ಯಂ ದ್ವಿಜಾಹ್ವಯಂಬಲಿಭು ಜಂಗೇ || ಏನೆಂದಪೆಂಭೋಗಿನಾಮಂ ಫಣಿಗೆಶರ್ಕ |ರಾನಾಮವಾಕ್ಷುದ್ರಶಿಲೆಗೆ ಗಜಮದಜಲಕೆ | ದಾನನಾಮಂಬಂದವೊಲ್ವ್ಯರ್ಥದುರುನಾಮವೆಂದು ಸುಕವಿ ಪ್ರಯೋಗಂ || 156 ||

ಅಂತರಿಂವಿಷ್ಣುವಚ್ಯುತನಲ್ತು ಬಿಡುಬಿಡಿಂ | ಮುಂತೆಮುರರಿಪುವೇದ ವೇದ್ಯನೆಂಬುಕ್ತಿಗೋ | ರಂತೆ ನಿರ್ವಾಹಮಂತೀಳ್ವಾದಿ § ಮಾಯಿಮಾಯನುತ್ತೆ ಮಾಯಾಮಯಮೆನೇ || ಅಂತೆಶಾಸ್ತ್ರಗ್ರಂಥಮೆನುತೆ ಷೋಡಶಲಕ್ಷ | ಕಂತಾ ನೆನಲ್ ಶ್ರೌತವಾರ್ತಾವಿರುದ್ಧಮೆನು | ತುಂತವೆ ಜವರ್ಣಾಶ್ರಮವಿವರ್ಜಿತ ಮಿಹೈವಯೆನುತದೇ ಸ್ವರ್ಗನರಕಂ || 157 ||

ಎನುತದೆಪ್ರತ್ಯಯಂ ನಾನ್ಯಥಾಪುನರೆನ | ಲ್ಪನವೇದಮುಳ್ಳುದುಂ ಲಕ್ಕ ಮಿನಿತುಂ ಮಹೇ | ಶನ ಸೊಮ್ಮೆನಿಸಿತೆಂಬಸೂಯೆಯಿಂ ತದ್ವೇದವಂನಿಲಿಸಲೆಂದು ನೆವದಿಂ || ವನಮಾಲಿಪಾತಕನಬದ್ಧಬುದ್ಧಾಕೃತಿಯ | ನನುಕರಿಸಿನಿಂದು ವೇ ದವಬದ್ಧವಂ ತದಂ|ನೆನೆಯಲಾಗದುಬಿಡಿಂ ವರ್ಣಾಶ್ರಮಾಚಾರವೆಂಬ ವೆತ್ತಣವೆ ನುತ್ತುಂ || 158 ||

ಇಲ್ಲಿಯೇಸ್ವರ್ಗನರಕಂಗಳ್ಪ್ರಮಾಣ ವಿ | ನ್ನೆಲ್ಲಿಯದು ಬೇರೆಮತ್ತೊಂದೆಡೆ ಯೊಳೆಂದಿಂತು | ತಲ್ಲಣಿಸದಕಟ ಷೋಡಶಲಕ್ಷಸಂಖ್ಯೆಯಿಂ ರಚಿಸಿ ಬೌದ್ಧ ಗ್ರಂಥಮಂ || ಉಲ್ಲಾಸದಿಂವೇದವೈರಮಾಗಾವೇಷ | ದಲ್ಲಿ ಬೋಧಿಸಿ ವೇದ ಮಂಕೆಡಿಸೆ ಬೌದ್ಧಮೊಗೆ | ದಿಲ್ಲಿ ವರ್ತಿಪುದೆಂದು ಲೈಂಗ್ಯಮಿದೆ ವೇದದೂಷಕ ನೆಂತುವೇದವೇದ್ಯಂ || 159 ||

§ ಮಾಯಿಮಾಯಾಮಯಂ ಶಾಸ್ತ್ರಗ್ರಂಥಂ ಷೋಡಶಲಕ್ಷಕಂ | ಶ್ರೌತವಾರ್ತಾವಿರುದ್ಧಂ ಚವರ್ಣಾಶ್ರಮವಿವರ್ಜಿತಂ | ಇಹೈವಸ್ವರ್ಗನರಕಂಪ್ರತ್ಯಯಂನಾನ್ಯಥಾಪುನಃ| ಲೈಂಗ್ಯ.

ಸಾಹಸದೆವಿದ್ಯಾ ‡ ಯೆನುತ್ತೆ ಚೋರೋಗುರು| ದ್ರೋಹೀಯೆನುತ್ತೆ ವೇದೇಶ್ವರಯೆನುತ್ತೆ ಸ । ದ್ವ್ಯಾಹಾರದೆ ವಿದೂಷಕಸ್ತ ಏವಬಹುಪಾಪ್ಮಾನೋಽ ನುತ್ತೆಮತ್ತಂ ॥ ಆಹಸದ್ಯೋಽಎನುತೆ ದಂಡ್ಯಾ ಇತಿಯೆನುತ್ತು । ಮೋಹೋಽಶ್ರುತಿರೆನೆ ವಿದ್ಯಾಚೋರನುಂಗುರು । ದ್ರೋಹಿಯುಂ ವೇದೇಶದೂಷಕರತೀವಪಾತಕರವರ್ದಂಡ್ಯರೆಂದು || 160 ||

ಶ್ರುತಿಯಿಂತುಟೆಂಗು ಮೆಂದಾವಾಯವೀಯ ಸಂ । ಹಿತೆಯುಲಿವುತಿದೆ ವೇದದೂಷಕಂ ಹರಿ ವೇದ । ನುತನದೆಂತಪ್ಪನೈ ಮತ್ತೆ ವೇದ * ದ್ರೋಹಯೆನೆ ಪರಸ್ಯಾನ್ನ ಮೆನುತುಂ ॥ ಅತುಳಪಾರಾಶರಮಿರಲ್ ಶ್ರುತಿದ್ರೋಹಸಂಯುತರನ್ನವಂ ಕೊಂಡವಂ ಪತಿತನಪ್ಪನಾ । ಕತದಿಂ ಶ್ರುತಿದ್ರೋಹಿಯಚ್ಯುತನವಂ ವೇದವೇದ್ಯತೆಗದೇಂಸಲ್ವನೇ || 16 ||

ಅಂತಾದಬುದ್ಧರೂಪಿಯು ಪರಿಯದುರ್ಬೋಧ । ದಿಂತಿಳಿದ ಬೌದ್ಧರುಂ ವೈಷ್ಣವಾಂತರ್ಭೇದ । ಮಂತರಿನವೈದಿಕಂ ಮತ್ತಗಜೆಯೋಳ್ಸಿಣಸಿ ಮಡಿಯೆರಕ್ತಾಸುರಬಲಂ || ಅಂತವರೊಳೋಡಿದರ್ಕೆಲಬರ ಹರ್ವ್ರತವ । ನಾಂತುತಲೆದರೆದು ನಾಣ್ಗೆಟ್ಟುವೇದಾಚಾರ । ಮಂತನ್ಮಹಾವೇದವೇದ್ಯ ಶಿವನಂಪಳಿವರಾಪೂರ್ವವೈರದಿಂದೆ || 162 ||

ಇದುವೆಸೌರಾದಿ ಪೌರಾಣಂಗಳೋಳ್ಸಿದ್ಧ । ಮದರಿನಾಸವಣರುಂ ವೈಷ್ಣವದಭೇದವೆಂ । ದೊದರುವಪುರಾಣಮುಂಟಾಗಿಯುಂ § ಹಸ್ತಿ ನಾಹನ್ಯಮಾನೋಽಪಿಯೆನುತುಂ || ಪದೆದುನವಿಶೇಜ್ಜ ಯೆನುತುಂ ಜಿನಾಲಯಮೆನ । ಲ್ಮದಗಜಂಸೀಳ್ವೊಡಂ ಜಿನಗೃಹಂಬುಗಲಾಗ । ದಿದುದಿಟಂ ಸ್ಮೃತಿವಾಕ್ಯಮಾಹರಿಗದಿತಮಾದವೈದಿಕದೆ ನಡೆವಕತದಿಂ || 163 ||

---

‡ ವಿದ್ಯಾಚೋರೋಗುರುದ್ರೋಹೀ ವೇದೇಶ್ವರವಿದೂಷಕಃ|ತಏವಬಹುಪಾಪ್ಮಾನಃ ಸದ್ಯೋ ದಂಡ್ಯಾ ಇತಿಶ್ರುತಿಃ—ವಾಯುವೀಯಸಂಹಿತಾ.

* ವೇದದ್ರೋಹಪರಸ್ಯಾನ್ನಂ—ಪಾರಾಶರ.

§ ಹಸ್ತಿನಾಹನ್ಯಮಾನೋಽಪಿ ನವಿಶೇಜ್ಜಿನಾಲಯಂ

ಎಂತೆನಲ್ದೇವತೆಗಳಂಗೆಲ್ದು ದನುಜಪ್ರ | ಶಾಂತಮಾನಸರಾಗಿ ವೈದಿಕಾಚಾರಮುಮ | ಸಾಂತೆಲ್ಲಯಜ್ಞಮಂನೆಗಳ್ದು ತದ್ಯಜ್ಞಾಂಶಮಂ ಸುರರ್ಗೆಕುಡದಿರುತಿರೆ || ಅಂತವರ್ವಿಷ್ಣುವಿಂಗುಸಿರೆ ಮಾಯಾರೂಪ | ಮಂತಾಳ್ದು ಬರ್ಹಿಪಿಂಛಂಪಿಡಿದು ಲೋಚಂಗೆ | ಯ್ದುಂತೆ ನಗ್ನತೆಯಿನಸುರರಪೊಳೆಗೆ ಗಮಿಸಿವೇದಾಚಾರಮಂದೂಷಿಸಿ || 164 ||

ಶ್ರುತಿಬಹಿಷ್ಕೃತಮಾರ್ಗಮಂಬೋಧಿಸಲ್ಕವ | ರ್ಮತಿಗೆಟ್ಟುತದ್ವೇದಸಿದ್ಧಪದ್ಧತಿಯನುಳಿ | ದತಿಪಾಪಿಹರಿಯಿದೇ ಅರ್ಥಮೆಂದುದರಿ ಸಾರೂಪನಧಿಕರಿಸಿಕೊಂಡು || ಕ್ಷಿತಿಯೊಳಾಚರಿಸಿ ಯರ್ಹತರಾದರೆಂದು ಸ | ನ್ನುತ ವಿಷ್ಣುಪೌರಾಣಮುಲಿವುದದರಿಂ ವೇದ | ಮತವನಿಳಿಕೆಯ್ವವಂ ವೇದವೇದ್ಯನೆ ಮತ್ತಮಂ ಪಾಂಚರಾತ್ರಮೆಸಗೇ || 165 ||

ಶಾಂಡಿಲ್ಯನೆಂಬವಿಪ್ರಂ ವೇದಪದ್ಧತಿಯ | ನಂಡಲೆದು ವಿಷ್ಣೂಕ್ತಪಾಂಚರಾತ್ರಾಚಾರ | ಮಂಡಿತನೆನಿಸಿತದನುಸಾರದಿಂ ಶಾಂಡಿಲ್ಯಸಂಹಿತೆಯನೆಸಗಿದುದರಿಂ || ದಂಡಧರನಾತ್ಮಕಿಂಕರರಿನವನಂತರಿಸಿ | ದಂಡಿಸಿನರಕದೋಳ್ಕೆಡಪಿದನೆಂದುಲಿವುದು | ಚ್ಚಂಡ ವಾಸಿಷ್ಠಲೈಂಗ್ಯಂಮತ್ತೆ ಸಂಗಿರನೆನಿಪ್ಪನೋರ್ವಂ ಬ್ರಾಹ್ಮಣಂ || 166 ||

ಶಿವಶಿವಾದುರ್ಬೋಧದಿಂವೇದ ವಿಹಿತಮಾ | ರ್ಗವನುಳಿದು ಪಾಷಂಡದೀಕ್ಷೆಯಂಪಡೆದಿರ | ಲ್ಕವನಂ ಯಮಂತನ್ನಭಟರಿನತಿಬಂಧನಂ ಬಡಿಸುತೆತರಿಸಿಶಿಕ್ಷಿಸೀ||ತವೆನರಕದೋಳ್ಕೆಡಪೆ ಯೊಂದುಕೋಟ್ಯಬ್ದವದ| ನವನುಂಡು ಮೇಣ್ ಶತಾನಂದರ ಕೃಪಾಕಟಾ | ಕ್ಷ ವಿಶೇಷದಿಂಬಾಳ್ದನೆಂಗುಮಾಯಜ್ಞವೈಭವಖಂಡಮಂತಲ್ಲದೇ || 167 ||

ಉಸಿರ್ವೆನಾಪಾಂಚರಾತ್ರಾಚಾರಮಂ ಕಲ | ತ್ರಸಮಾನತೆಯ ಜಾತಿಭೇದಮುಚ್ಚಿಷ್ಟ ಪಾ | ದಸಲಿಲ ಸ್ವೀಕೃತಿಸುವೇದಾರ್ಥವಿಪ್ಲಾವನಂ ಶಂಭುನಿಂದೆಯೆಂಬಾ || ಪೆಸರ್ವಡೆದಪಂಚವ್ರತಂಗಳಿವು ವೈಷ್ಣವ | ಗ್ಗೆಸೆವವೆಂಪಾಪುರಾಣೋಕ್ತಿಯಿರಲಿನಿತನೊರೆ | ದಸುರಾರಿ ವೇದವೇದ್ಯನೆ ಆತನಲ್ತೆನಲವನಭೃತ್ಯರೇನಪ್ಪರೈ || 168 ||

ಓವ್ರೊಪೇಳ್ವಾದಿನೀಂಶ್ರೌತಪರನಾದೊಡೆನ । ಮೋವಿಷ್ಣುವೇಯೆ ನುತೆಮುಪತೇಕರೋಮಿಯೆಂ । ಬೀವೈದಿಕಾಣುವೈಷ್ಣವತಂತ್ರನುಂತ್ರಮಾಲೆಯೊಳಗಿಲ್ಲಿದುನಿಮಿತ್ತಂ ॥ ಭಾವಿಸಲ್ವೇದವೇನಿಮತಲ್ಲಮುವರೊಳಗ । ನೇವೆಳ್ದಪೆಂ * ಪಾಂಚರಾ ತ್ರಾದಯೋಏನು ।ತ್ರೋವಿಸರ್ವೇನಪ್ರಮಾಣಮಿತಿಯೆನುತೆ ತಾಂಸ್ಥಿತಿರೆನಲ್ಪಾರಾಶರಂ ॥ 169 ॥

ಪಾಂಚರಾತ್ರಾದಿಗಳಹೋಪ್ರಮಾಣಮೆಅಲ್ತು। † ಪಾಂಚರಾತ್ರಾದಿಮಾರ್ಗಾಣಾಮೆನುತ್ತೆಮ । ತ್ತಂಜೆಲ್ಪಮರೆವೇದಮೂಲತ್ವ ಮಾಸ್ತಿಕೇನಪಿಯೆನುತೆ ಸತ್ಯವಾಕ್ಯಂ ॥ ಮುಂಚಲ್ಸ್ವತಂತ್ರಾಯೆನುತ್ತೆ ತೇತೇನಯೆನು । ತುಂಚದುರರೊಪ್ಪುವೋಲ್ ಭ್ರಾಂತಿಮೂಲಾಯೆನು । ತ್ತುಂಚಮತ್ಕೃತಿಯಿಂನಿರೂಪಣೇಯೆನೆಪಾಂಚರಾತ್ರಮಾರ್ಗಂಗಳೆಂದುಂ ॥ 170 ॥

ವೇದಮೂಲಂಗಳಲ್ತುದರಿಂಸ್ವತಂತ್ರಗ । ಳಾದವಂತರಿನವಂಪೆಸರ್ಗೊಂಬುದೇಭ್ರಾಂತಿ । ಗಾದಿಯೆಂದಾಮುಕ್ತಿಖಂಡಮಿದೆಯುವನೊರೆದ ಪರಿಯೆಂತೊ ವೇದವೇದ್ಯಂ ॥ ಪಾದಿಕೇಳಶ್ರಾತರಾರಯಲ್ಪಾಷಂಡ । ರಾದುರಾಚಾರಿಗಳ ಮುಖವನೀಕ್ಷಿಸಲಾಗ । ದೋದಲೇಂಶತಧನುರ್ನೃಪತಿನಿಜಸತಿಶೈಂಬೆಸಹಿತಮಾಕಾಶಿಯಲ್ಲಿ ॥ 171 ॥

ಸ್ನಾನಮುನೊಡರ್ಚಿಕಾರ್ತಿಕಮಾಸದೊಳ್ಶ್ರುತಿವಿ । ಧಾನತಾಚರಣನಾಗಿರೆಯೋರ್ವಪಾಷಂಡಿ । ಯಾನಿಶ್ಚಲಿತಕರ್ಮನಿಷ್ಠರೆಡೆಗೆಯ್ತರಲೊಡಂತದಂಗನೆಕಾಣುತೇ ॥ ಭಾನುವಂನೋಡಿತದ್ದೋಷಮುಂಕಳೆದಳಾ । ಭೂನಾಯಕಂವಿಪ್ರನೆಂದು ಮನ್ನಿಸಿತಿಳಿದ । ನೂನಪಾಪಂಸಂಭವಿಸೆತೆಂದುಬೆಟ್ಟೇರಿ ಜೀಳ್ದು ಶಾರ್ಜ್ಗಲಿಯಾಗಿ ॥ 172 ॥

---

* ಪಾಂಚರಾತ್ರಾದಯಸ್ಸರ್ವೇನ ಪ್ರಮಾಣಮಿತಿಸ್ಥಿತಿಃ । ಪಾರಾಶರ.

† ಪಾಂಚರಾತ್ರಾದಿ ಮಾರ್ಗಾಣಾಂವೇದಮೂಲತ್ವಮಾಸ್ತಿಕೇ? । ನಹಿಸ್ವತಂತ್ರಾತೇತೇನ ಭ್ರಾಂತಿಮೂಲಾನಿರೂಪಣೇ :–ಮುಕ್ತಿಖಂಡ.

ಅದನನುಭವಿಸಿತೋಳನಾಗಿಪದ್ಧಾಗಿ ಮೂ | ಣದೆ ಕಾಗೆಯಾಗಿ ಮೇಕ್ಷನವಿಲಾಗಿರಲ್ಕವನ | ಸುದತಿ ತತ್ತದ್ರೂಪದಿಂಪುಟ್ಟಿ ಜಾತಿಸ್ಮರಣದಿಂದೆ ಬೋಧಿಸುತ್ತೇ || ಪುದಿದುಜನಕನಯಾಗದವಭೃಥದೊಳಗೆಮುಳುಗಿ | ಸಿದೊಡವನು ದರದೊಳಾತಂಪುಟ್ಟಿ ಯುದ್ಧದಿ | ನಳಿದು ತದಘಮಂಕಳೆದನೆಂದುಲಿವುತಿಪೆ ವಿಷ್ಣುಪೌರಾಣಮಂತಲ್ಲದೆ || 173 ||

ಮತ್ತೆಯೆತ್ತೆಂ ‡ ದ್ರೋಯೆನುತೆ ದೇವತಾಪರಿಯೆ | ನುತ್ತುಂ ವ್ರಜಂ ವಿಶ್ವರೂಪಮೆಂದೆನುತೆತಾ | ನೆತ್ತಿಮೇಣ್ ತ್ವಷ್ಟ್ರಾಯೆನುತು ಮಭ್ಯಮಂಸ್ತಯೆ ನೆ ವೃತ್ರಮಸ್ತ್ರಯತಿನ್‌ಯೆನೆ || ಸುತ್ತೇನೊಮುದದಿಂದೆ ಸಾಲಾವೃಕೇಭ್ಯೋಯೆ | ನುತ್ತೆದಲ್ ಪ್ರದದಾತಿದುರ್ಮಘಾನವಧೀದೆ| ನುತ್ತುಂ ಬೃಹಸ್ಪತೇಃ ಪ್ರತ್ಯವದದೆಂದೆನುತು ಮಿಂದ್ರೋಯತಿನ್‌ಯೆನುತ್ತುಂ|| 174 ||

ಘನದೆಸಾಲಾವೃಕೇಭ್ಯೋಯೆನಲ್ ಪ್ರಾಯಚ್ಛ| ದೆನುತೆ ವಿಜ್ಞಾನಸ್ಯಯೆ ನೆ ಬಲೇನ್ಯವಖಲು|ಯೆನುತೊಲ್ದು ಸಾಕ್ಷಾತ್ಪುರಂದರ ಸಾಲಾವೃಕೇಭ್ಯೋಯೆನುತ್ತಂತದೆ || ವಿನಯದಿಂಪ್ರಾಯಚ್ಛದೆಂದೆನುತ್ತುಂ ಯತೀನ್ | ಯೆನುತೆ ಸಲೆದೇಹಾಭಿಮಾನಿಸೋಯೆಂದೆನ | ಲ್ಮನವಾರೆಕೇಳ್ ತ್ವಷ್ಟೃಪರಮೇಷ್ಟಿಜಂ ಸುಧನ್ವತಿಯುಪತಿವಿಶ್ವರೂಪಂ || 175 ||

ಸುರಲೋಕಕೆಯ್ದಿಮರ್ತ್ಯಕೆಬರುತೆ ಸುಖಮಿರ್ದು | ಕರಮೆದುವರ್ೋಧದಿನವೈದಿಕಾಚಾರದಿಂ | ದಿರುತೊರ್ಮೆ ನಗ್ಗಕೆಂದಿನವ್ರೊಲ್ಗಮಿಸೆಕಂಡು ಸುರಪತಿಯುವಜ್ಞೆಗೆಯ್ಯೆ || ತಿರಿಗಿಭೂಮಿಗೆಬಂದು ನೊಂದಾಭಿಚಾರಿಕಾ | ಧ್ವರಮನಾಕಾರಿಯೊಳೆಸಗಿ ಬೇಳುತಿರಲೊಡಂ | ಸ್ವರಹೀನಮಾಗೆಯಾಗಳ್ ಪ್ರುತಿರಪಿತ ಯತಿಗಳಾದಮಟ್ಟಿಗರನಿಂದ್ರಂ || 176 ||

---

‡ ಇಂದ್ರೋದೇವತಾಪರಿವ್ರಜಂ ವಿಶ್ವರೂಪತ್ವಷ್ಟ್ರಾಭ್ಯಮಂಸ್ತ ವೃತ್ರಮಸ್ತ್ರಯತೀನ್‌ಸಾಲಾವೃಕೇಭ್ಯೋಪ್ರದದಾತಿದುರ್ಮಘಾನವಧೀತ್‌ಬೃಹಸ್ಪತೇಃಪ್ರತ್ಯವದತ್ ಇಂದ್ರೋಯತೀನ್ ಸಾಲಾವೃಕೇಭ್ಯೋಪ್ರಾಯಚ್ಛತ್ ವಿಜ್ಞಾನಸ್ಯಬಲೇನ್ಯೈವ ಖಲುಸಾಕ್ಷಾತ್ಪುರಂದರಃ ಸಾಲಾವೃಕೇಭ್ಯೋ ಪ್ರಾಯಚ್ಛತ್‌ಯತೀನ್‌ದೇಹಾಭಿಮಾನಿನೊತ್ವಷ್ಟೃ ಪರಮೇಷ್ಠಿಜಂ |

ಕೊಂದುಕೆಂನಾಯ್ವಳಗಕಿಕ್ಕಿದಂ ಕೋಪದಿಂ | ದೆಂದು ಋಕ್ಕುಂಯಜುಸ್ಸುಂ ಸೌರಸಂಹಿತೆಯು | ಮಂದದಿಂಸಾರುತಿವೆ ಯದರಿಂದವೈದಿಕಂ ಹರಿದಂಡ್ಯನೇನಲ್ಲವೇ || ಚಂದದಿಂ † ವೇದಬಾಹ್ಯೇಷುಯೆನೆ ಮಾರ್ಗೇಷು | ಯೆಂದು ತಾಂ ಸಂಸ್ಥಿತಾಯೆನೆಯೇನರಾಸ್ಸುರಾಃ |ಯೆಂದೆನುತ್ತುಂ ತೇಹಿಪಾಷಂಡಿನೋಯೆನುತೆ ಸಾಕ್ಷಾತ್ತಥಾತ್ಯೈರೆನೆ || 177 ||

ತಾನೆಸಹವಾಸಿಎನೆ ವೇದಬಾಹ್ಯಮಾ | ರ್ಗಾನುವರ್ತಕರಾದ ಮನುಜರ್ಕಳುಂ ದೇವ | ತಾನೀಕಮುಂ ಮತ್ತಮವರಸಹವಾಸಿಗಳ್ ಪಾಷಂಡರೆಂದ್ರುಲಿವುತೇ || ಮಾನಿತಂಸೂತಸಂಹಿತೆಯಿರಲ್ ಶ್ರುತಿಬಾಹ್ಯ | ತಾನಿಪ್ನನಾದಕತದಿಂ ದೇವಕುಲವೂದೊ | ಡೇನೊ ಹರಿಪಾಷಂಡಿಯಾ ವೈಷ್ಣವರುಮಂತೆಯವನೆಂತೊ ವೇದವೇದ್ಯಂ || 178 ||

ಇಂತೆನಲೊಡಂವಾದಿಯೆಂದನೆಲೆ ಶೈವಕೇಳ್ | ಕಂತುತಾತಂ ವೇದವೇದ್ಯನಲ್ತೆಂಬುದನ | ದೆಂತೊಡಂಬಟ್ಟಪೆಂ ‡ ನಾರಾಯಣಂ ಪರಂಬ್ರಹ್ಮತತ್ವಮೆನುತ್ತದು || ಮುಂತೆನಾರಾಯಣಃ ಪರಮೆನುತ್ತತಿಮಾತ್ರ | ದಿಂತವದೆ ನಾರಾಯಣಃಪರಂಜ್ಯೋತಿ ರೆನು | ತುಂತಾನೆ ಆತ್ಮಾಯೆನುತ್ತೆ ನಾರಾಯಣೋಯೆನುತುಂ ಪರೋಯೆನುತ್ತುಂ || 179 ||

ಮತ್ತೆನಬ್ರಹ್ಮಾಯೆನುತ್ತೆ ಸಶಿವೋಯೆಂಬೆ|ನುತ್ತೆ ಸೇಂದ್ರಃಸೋಕ್ಷರೋಯೆನುತೆ ಪರಮೋಯೆ | ನುತ್ತುಂ ಸ್ವರಾಡೆನಲ್ ಬಳಿಕಮುಂ ಯಚ್ಚಕಿಂಚಿಜ್ಜಗತ್ಸಸ್ಮಿನ್ನೆನೆ || ಪತ್ತರಿಸಿದೃಶ್ಯತೇ ಶ್ರೂಯತೇಪಿಯೆನುತ್ತ | ದೆತ್ತಿವಾಯೆನುತು ಮಂತರ್ಬಹಿಶ್ಚಯೆನುತ್ತು | ಮೊತ್ತಿತತ್ಸರ್ವಮೆನುತುಂ ವ್ಯಾಪ್ಯನಾರಾಯಣಸ್ಥಿತೋಯೆಂದೆನುತ್ತುಂ || 180 ||

---

† ವೇದಬಾಹ್ಯೇಷುಮಾರ್ಗೇಷು ಸಂಸ್ಥಿತಾಯೇನರಾಸ್ಸುರಾಃ | ತೇಹಿಪಾಷಂಡಿನಸ್ಸಾಕ್ಷಾತ್ತಥಾತೆಸ್ಸಹವಾಸಿನಃ—ಸೂತಸಂಹಿತೆ.

‡ ನಾರಾಯಣಂ ಪರಂಬ್ರಹ್ಮತತ್ವಂ—ನಾರಾಯಣಃಪರಂಜ್ಯೋತಿಃ—ಆತ್ಮಾನಾರಾಯಣಃಪರಃ—ಸಬ್ರಹ್ಮಾ ಸಶಿವಸ್ಸೇಂದ್ರಸ್ಸೋಕ್ಷರಃ ಪರಮಸ್ಸ್ವರಾಟ್ |ಯಚ್ಚಕಿಂಚಿಜ್ಜಗತ್ಸರ್ವಂ ದೃಶ್ಯತೇಶ್ರೂಯತೇಪಿವಾ|ಅಂತರ್ಬಹಿಶ್ಚತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ ||ನವೋವಿಷ್ಣುವೇ,

ಸಲೆನವೋವಿಷ್ಣುವೇಯೆನೆ ಪರಬ್ರಹ್ಮಮುಮು | ಮಲಿನ ಪರತತ್ವಮುಂ ಘನಪರಂಜ್ಯೋತಿಯುಂ | ಜ್ವಲಿಪ ಪರಮಾತ್ಮನುಂ ನಾರಾಯಣಂದಲವನೇ ಪರಬ್ರಹ್ಮನೀಶನಿಂದ್ರಂ || ವಲಮಕ್ಷರಂ ಪರಮನುದ್ಯತ್ಸ್ವರಾಜನವ|ನಲಘುತೆಯಿನೀವಿಶ್ವದೊಳಹೊರಗನೆಯ್ದಿ ಯವಿ|ಚಲಿತನಾಗಿರ್ಪ್ಪನಂತೊಪ್ಪುವ ಮಹಾವಿಷ್ಣುವಿಂಗೆವಂದಿಪೆನೆನುತ್ತುಂ || 181 ||

ಅನುವದಿಸಿಪಲವಂದದಿಂದ ನಾರಾಯಣೋ | ಪನಿಷತ್ತುವುಂ ಯಜುರ್ವೇದಾದಿಗಳು ಮಿಂತು | ವಿನುತಿಸುತ್ತಿರೆ ವಿಷ್ಣುವೇದವೇದ್ಯಂದಲತ್ತೆಂಬುದೆತ್ತಣ್ಣುಸಿರೆನೇ || ಘನಗುರುವರಂನಸುನಗುತ್ತೆಂದ ನೆಲೆವಾದಿ | ನಿನಗೆವೇದಾರ್ಥವಿನಿಸುಂ ಬಾರದೆಂತೆಂಬೊ | ಡನುಪಮಿತ ನಾರಾಯಣಾಹ್ವಯಂ ಶಿವನಾಮದೊಳಗೊಂದು ಗೌಣನಾಮಂ || 182 ||

ಎಂತೆನಲ್ನಾರಮೆನೆ ಜನಸಮೂಹಂದಲೋ | ರಂತಲ್ಲಿ ವರ್ತಿಪಂನಾರಾಯಣಂ ತಿಳಿವೊ | ಡಂತಪ್ಪವರ್ತನಂ ಶಂಭುವಿಂಗಲ್ಲದಾ ವಿಷ್ಣುಗಿಲ್ಲೆಂದುಸಿದ್ಧಂ || ಅಂತರಿಂನಾರಾಯಣಾಖ್ಯ ಶಬ್ದಕ್ಕರ್ಥ | ಮಂತರಾತ್ಮತ್ವವಾ ಪರಿಯಿನೆಸೆವೀಶ್ವರಂ | ಸಂತತಂನಾರಾಯಣಂ ಮೇಣವನೆಪರಬ್ರಹ್ಮಮುಂ ಪರತತ್ವಮುಂ || 183 ||

ವರಪರಂಜ್ಯೋತಿಪರಮಾತ್ಮಂ ಸುರಜ್ಯೇಷ್ಠ | ನೊರೆಯಲೇಸಾತನೇ ಶಿವನಸ್ವರಲ್ತು ವಿ | ಸ್ಫುರಿಪಿಂದ್ರನಕ್ಷರಂ ವರಮುಂಸ್ವರಾಜನವನೇ ವಿಶ್ವದೊಳಹೊರಗೆಯುಂ || ಪರಿಪೂರ್ಣನಾಗಿರ್ಪ್ಪನೆಂದು ಮರೆನುಡಿಯಿ ನು | ಚ್ಚರಿಸಿದಾಮ್ನಾಯದಂತಸ್ಥಮುಂ ತೆರೆದುಡಂ | ಗುರಿಸಿದಲ್ ವ್ಯಾಪ್ಯಯೆಂದೆನುತು ಮಾಸ್ತೇಸೌಮಹೇಶ್ವರೋಯೆಂದೆನುತ್ತೆ || 184 ||

ಸುತ್ತೇನೊಶಿವರಹಸ್ಯಮಿದೆ * ಈಶಾನೋವಿ | ನುತ್ತೆ * * * ಯನುತೆ ಕೃಷ್ಣೋವಿನುತೆ ಮುದಂ |ಬೆತ್ತು ವಿಷ್ಣುರೆನುತ್ತೆ ನಾರಾಯಣೊಹರಿ ಬ್ರಹ್ಮಾಯೆನಲ್ ಸ್ಕಾಂದಮೇ || ಮತ್ತಜೋವಿಷ್ಣುಃ ಪಿತಾಮಹೋಯೆಂದೆನು | ತೊತ್ತಂಬದಿಂ ಕೇಶವಃ ಕೇಶಿಹಂತಾಯೆ |ನುತ್ತಿದೆ ರವಿ * * * ಣದೊವಿಷ್ಣುನುತಿ ಮುಕುಂದೋಯೆನುತೆ ವಿಗತಜ್ವರೋ|| 185 ||

* ಈಶಾನೊ * * * ಕೃಷ್ಣೋವಿಷ್ಣುನಾರಾಯಣೋ ಹರಿಬ್ರಹ್ಮಾ|ಅಜೋವಿಷ್ಣುಃ ಪಿತಾಮಹಃ | ಕೇಶವಃಕೇಶಿಹಂತಾಚ ಮುಕುಂದೋವಿಗತಜ್ವರಃ |ನಾರಾಯಣಾಯಶರ್ವಾಯ—ಲ್ಯಂಗ್ಯ

ಎನುತಮಿದೆ ನಾರಾಯಣಾಯಶರ್ವಾಯ ಯೆಂ | ದನಘಳ್ವೆಂಗ್ಯದೊಳಿದೆ । ನಮೋಽಸ್ತುತೇಪ್ರಕೃತಯೇ| ಯೆನುತುಂವಲಂ ನಮೋಽನಾರಾಯಣಾಯುಚ ಯೆನುತಿದೆಯಜನುತಿವೇದಮುಂ ॥ ಘನದಿಂನಮೋ ಬ್ರಹ್ಮಣೇನಮೋ ಸ್ತ್ವಗ್ನಯೇ । ಯೆನುತುಂನಮಃ ಪೃಥಿವ್ಯೈನಮೋಽಎನುತೆ ಮ । ತ್ತನುವಿನಿಂದೋಷಧಿಭ್ಯೋಽನಮೋಽವಾಚೇಽನಮೋಽಯೆನುತೆ ವಾಚಃಽಎನೆ || 186 ||

ಅದರೊಡನೆಕೂಡಿಪತಯೇಽನಮೋ ಎಂದೆನು | ತ್ತದು ವಿಷ್ಣವೇಽನಮೋ ಮಹತೇಽಕರೋಮಿ ಯೆಂ | ದೊದರುತ್ತೆಪರಿಪರಿಯೊಳಿಪ್ಪ್ರವಂಗನ್ನರೋಳ್ಪಂದನ ಮನೆಸಗಿವಿವಿಧ || ಪದದಿಂದೆನುತಿಸಿದುವನೇಕ ಮುಂಟದರಿನ । ಭ್ಯುದಯಕರ ನಾರಾಯಣಾಹ್ವಯಂ ಪರಿಕಿಸಲ್ । ಸಗಮಲಶಿವನನಾಮುವಾಕತದೆ ಶಿವನನೆ ಪೇಳ್ವುದಾವೇದವಾಕ್ಯಂ || 187 ||

ಸೂಕ್ತಿಯಿಂದಾ ‡ ಪೋಽಯೆನುತ್ತೆ ನಾರಾಇತಿ | ಪ್ರೋಽಕ್ತಾಯೆನುತ್ತೆ ನಾರಾವೈನರಯೆನುತ್ತೆ । ಯುಕ್ತಿಯಿಂ ಸೂನವಸ್ತಾಯದಸ್ಯಾಯನಂತೇಽನಯೆನೆ ಸೂಕ್ತೋಽಕ್ತಿಯೇ ॥ ಪ್ರೋಽಕ್ತೋಽಎನುತ್ತೆ ನಾರಾಯಣಸ್ತ್ವಯಮೆನಲ್ । ವ್ಯಕ್ತಮೂಗಂಬುಗಳ್ । ಶಿವಶಿಶುಗಳಲ್ಲಿಯನುರಕ್ತಿಯಿನಿರಲ್ಕೆ ನಾರಾಯಣರವರತೆರದೆ ಹರಿಗೆನಾರಾಯಣಾಖ್ಯಂ || 188 ||

ವಿವರಿಸೆನಮೋಽವಿಷ್ಣವೇಽಯೆಂಬಸುಮನು ವೈ | ಷ್ಣವಮುಲ್ತದೆಂತೆನಲಾವೇದಂಗಳನ್ನದೇ | ವವಿಸರಕೆ ಮಂತ್ರಸಾಮ್ಯವನೀಯವಾಗಿ ವಂದನಮನಭವಂಗಲ್ಲದೆ || ತವೆವೊಡದುದ್ಯತ್ರತಿಜ್ಞೆಯಥವಾ ಪ್ರಣಾಮವನೆಸಗಿರಲ್ ಧಾತುಯೌಗಿಕಮನೀಶ್ವರಂಗವುವಂದಿಸಿದ ವಿಧಿಯದೇಕೆನೆ ನಮೋಽವಿಷ್ಣವೇಽಯೆಂಬ ಪಂಚಾಕ್ಷರಂ || 189 ||

---

† ನಮೋಽಸ್ತುತೇಽಪ್ರಕೃತಯೇಽ ನಮೋಽನಾರಾಯಣಾಯಚ|ನಮೋಽಬ್ರಹ್ಮಣೇಽನಮೋಸ್ತ್ವಗ್ನಯೇಽನಮಃ ಪೃಥಿವ್ಯೈನಮಓಷಧೀಭ್ಯೋಽನಮೋಽ ವಾಚೇಽನಮೋಽ ವಾಚಸ್ಪತಯೇಽನಮೋಽ ವಿಷ್ಣವೇಽ ಮಹತೇಽಕರೋಮಿ.

‡ ಆಪೋಽನಾರಾಇತಿಪ್ರೋಽಕ್ತಾ ನಾರಾವೈನರಸೂನವಃ | ತಾಯದಸ್ಯಾಯನಂತೇನ ಪ್ರೋಽಕ್ತೋಽನಾರಾಯಣಸ್ತ್ವಯಂ.

ಎಲೆಲ್ಲೆವೈಷ್ಣವಕೇಶವೋರುಭಾಗವತಸಂ | ಚಲ ಪಂಚರಾತ್ರತಂತ್ರಾಣುವಮೂಲೆಗಳೊಳಿ | ಲ್ಲಲಿಯಬೇಡೆಂದು ಮೊದಲೇಸಿದ್ಧಿಸಿದೆವೆಮ್ಮ ಶಂಭುಗಾವಿಷ್ಣುನಾಮಂ ‖ ಸಲೆವಿಷಲ್ ವ್ಯಾಪ್ತೌಎನಿಪ ಧಾತುವಿಂದಾದ | ಬಲದೆಸದ್ವ್ಯಾಪಕಶಿವಂಗೆರಗಿದರ್ಥವೀ | ಚಲವಿಡಿದಪುತ್ರಿಕಧನದವೊಲನ್ಯರ್ಗೆಸಲ್ಲದು ಮತ್ತಮೀಪರಿಯೊಳೇ ‖ 190 ‖

ತೈತ್ತಿರೀಯಮದು § ನಮಇಂದ್ರಾಯಯೆಂದೆನುತೆ | ಮತ್ತಂ ಮಖಘ್ನೇಯೆನಲ್ಕಿಂದ್ರನೇ ಮಖವ| ನೊತ್ತಿ ಸುಟ್ಟವನಿಂದಿಧಾತು ಪರಮೈಶ್ವರ್ಯದೋಳ್ವರ್ತಿಸುವುದಂತರಿಂ ‖ ಕೃತ್ತಿವಾಸಂಗದುನಮಿಸಿದುದಾಶ್ರುತಿಯಲ್ಲಿ | ಸುತ್ತೇಂ ನಮೋಎನುತೆ ಯಜ್ಞಾಯಯೆಂದು ವಚಿ | ಸುತ್ತುಂ ಮಖಘ್ನೇಯೆನುತೆ ನಮೋರುದ್ರಾಯಯೆನುತುಂ ಮಖಘ್ನೇಯೆನೆ ‖ 191 ‖

ಇಂತುಮೇಶಂಗನ್ಯನಾಮದಿಂದೆರಗಿದುವ | ನಂತವುಂಟೀತೆರದಿ ನಲಿವುದಾವೀಗಳುಂ |ಪಿಂತೆಯುಂಪೇಳ್ದವನಿತರಸುರಾಳಿಗೆ ಮಂತ್ರಸಾಮ್ಯಮಿಲ್ಲವೃಥಾತ್ವಯಂ || ಎಂತೆನಲ್ ಶ್ರುತಿ ಏಕಏವರುದ್ರೋಎಂದ | ನಂತರದೊಳುಳಿದಗ್ಗೆತೆರಹುಗುಡದಾಬಾಯೊ | ಳಂತೆ ನಾರಾಯಣನನಾಮ ಕೆರುವತ್ತನಾಲ್ಕರ್ಗುಸಾಮ್ಯವನೀಯದು ‖ 192 ‖

ಕ್ಷಿತಿಯೊಳಿತಿ † ಹಾಸಯೆನುತುಂ ಪುರಾಣಾಭ್ಯಾಮೆ | ನುತದು ವೇದಂ ಸಮುಪಬೃಂಹಯೇದೆನೆ ವೇದ | ತತಿಯರ್ಥಮಂ ಪುರಾಣೇತಿಹಾಸಂಗಳಿಂದಂ ಪೇಳ್ವುದೆಂದೊರೆವುತೆ || ಮತಿಸಿಥಂದೋವತ್ಪುರಾಣಾನಿ ಯೆಂದುಮುಲಿ | ವುತೆ ‡ ಪುರಾಣಂಎನುತೆ ಪಂಚಮೋವೇದೋಯೆ | ನುತೆ ಸಿದ್ಧಿಸಿದುವಾಗಿ ವೇದದೊಳಗರಿದು ಶಿವನನೆಪೇಳ್ದುದಾಪುರಾಣಂ || 193 ||

---

§ನಮಇಂದ್ರಾಯಮಖಘ್ನೇ ನಮೋಯಜ್ಞಾಯಮಖಘ್ನೇ ನಮೋರುದ್ರಾಯಮಖಘ್ನೇ

† ಇತಿಹಾಸಪುರಾಣಾಭ್ಯಾಂವೇದಂ ಸಮುಪಬೃಂಹಯೇತ್—

‡ ಪುರಾಣಂಪಂಚಮೋವೇದಃ.

ಆಯುಸಾದಿಯೊಳೆಮ್ಮ ಶಿವದತ್ತದಾನವಾ | ಮ್ನಾಯವೆಂತೆನೆವೇದದಾದಿ ಮಧ್ಯಾಂತದೊಳ|ಗಾಯುತಂಲಿಂಗಮುದ್ರೆಯ ಶಾಸನಮದಗ್ನಿ* ಮಾಹೇಪುರೋಹಿತಮೆನೆ || ನ್ಯಾಯದಿಂದೇಕಏವಯೆನೆ ರುದ್ರೋನದ್ವಿ | ತೀಯಾಯತಸ್ಥೇಯೆನೆ ಶಿವಏಕೋಯೆನಲ್ | ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ಯೆಂಬಿವನೀಕ್ಷಿಸಿ || 194 ||

ಕರ್ಮಭಾಗವನುಳಿದು ತಜ್ಞಾನಭಾಗಮಂ | ಮರ್ಮಜ್ಞನಾಗಿತಿಳಿಯೇಕೆನಲ್ ಶ್ರುತಿವಿಶ್ವ | ಕರ್ಮಾದ್ಯಖಿಲಮನೊರೆಯದೆ ವಾರ್ಧಿಯೋಳ್ಜಲಚರಾದ್ಯಖಿಲಮಿರ್ದೊಡೇನೋ|| ನಿರ್ಮಲಸುಮಣಿಗೆಣೆಯೆ ಈಶಿವಗೃಹಕ್ಷೇತ್ರ | ಧರ್ಮಿಯೆನಿಸುವವೇದತತಿ ಮಹೇಶನನಲ್ಲ | ದೋರ್ಮಯುಂ ನುತಿಸದುಳಿದವರನದರಿಂ ವೇದವೇದ್ಯನಲ್ಲುಲ್ಲುಕೃಷ್ಣಂ || 165 ||

ಮತ್ತೆಕೇಳ್ವದಿ ಹರಿಚರಣದೋಳ್ಗಂಗೆಯಂ | ಪೆತ್ತನೆಂದೆಂಬ ದುರ್ಭಾಷಿತಕೆನಿರ್ವಾಹ | ಕೋತ್ತರಮನೆಂತೆನಲ್ ಸಕಲಮುನಿಗಳ್ನೋತಸೆಡೆಗೆಯ್ದಿನಮಿಸಿನಿಂದು || ಸುತ್ತೇಸೊನೀನರಿಯದಂಶಮಿಲ್ಲಾಮ್ನಾಯ | ಏತ್ತಮನೆ ಗಂಗಾಜನನಮೆಂತದಂಶಿವಂ | ಪೊತ್ತಂದವೆಂತು ತನ್ನಾಮವೇನದರಧಿಕ ವೃತ್ತಿಯೆಂತುಸಿರೆಂದೆನೆ || 196 ||

ಘನಪುರಾಣಂಪೇಳ್ವುದಿಂತೆಂದು ಕೇಳ್ವುದೆಲೆ | ಮುನಿಗಳಿರ ಸೃಷ್ಟಿಸ್ಥಿತಿಪ್ರಭೃತಿಕಾರಿಗ | ಳ್ವನಜ ಭವಹರಿರುದ್ರರವರನಿಲಜಲ ಶಿಖಿತ್ರಯಮನಧಿಕರಿಸಿಕೊಂಡು || ಮಿನುಗುವರ್ಬ್ರಹ್ಮಾತ್ಮಕಂ ಪೃಥ್ವಿಯಾವಿಶ್ವ | ಜನನಕ್ರಿಯಾನ್ವಿತಮದರಿನವಂ ಸೃಷ್ಟಿಗಧಿ | ಪನೆನಿಪಂ ವಿಷ್ಣ್ವಾತ್ಮಕಂಜಲಮದೆಲ್ಲರಂ ಸ್ಥಾಪಿಪುದದರಿನಚ್ಯುತಂ || 167 ||

ಸ್ಥಿತಿಕರ್ತೃವೆನಿಸುವಂ ರುದ್ರಾತ್ಮಕಂನಾಡೆ | ಹುತವಹನದೆಲ್ಲರಂ ಸಂಹರಿಪುದದರಿನ | ಪ್ರತಿಮರುದ್ರಂಬಗೆಯೆ ಸಂಹಾರಕರ್ತೃವೆನಿಸುವನಾಧರಾಂಬುಯುಗಳಂ || ಪ್ರತಿಯಿಡಲ್ಸ್ಥೂಲಮವು ಮೇಣಧೋನ್ವಯಮೂದ | ಕತದಿನುತ್ಕ್ಷೇಪವಿಧಿಯಿಂ ದೂರ್ಧ್ವಕೆಯ್ದುಯುಂ | ಪತಿತವಾಗುವುವಾಶ್ರಯಾವಧಿಯೆನಿಸಿಯಂತುಟಪ್ಪರಾ ವಿಧಿವಿಧುಗಳಂ || 198 ||

---

* ಅಗ್ನಿರ್ಮಾಹೇಪುರೋಹಿತಂ ಏಕಏವರುದ್ರೋನ ದ್ವಿತೀಯಾಯತಸ್ಥೇ—ಶಿವಏಕೋಧ್ಯೇಯಶ್ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ.

ಅನಲಸೂರ್ಧ್ವವಿಜೃಂಭಿಯೆಂತೆಸೆವನಾಜ್ಞಾನ | ಘನರುದ್ರನುಲ್ಲಾಸ ಕೃತತಾಂಡವಾಡಂಬ | ರನೆನಿಸುತೆ ವಾಯುಗಗನಂಗಳಗ್ನಿ ವಶಂಗಳಾಯುಗ್ನಿ ಯುಂಪೆರ್ಚೀಪಂ || ಅನಿಲನಾಕಾಶವವಕಾಶಮುಂ ಕುಡುವುದುತ | ದನಘರುದ್ರಂ ವಾಯುಗಗನವಿಗ್ರಹನಾತ | ನನಿಶಂ ವರರುಧಿರಾವರಣೇಯೆನಿಪ ಧಾತು ವಿಂದಾವರಿಸಿಸಕಲಮುಂ || 199 ||

ತಾನೆತಡೆದಿಪ್ಪನದರಿಂ ರುದ್ರನೆನಿಪನೆಂ | ದೀನಿರುಕ್ತಂ ಶಿವಂಗಾಯ್ತು ರುಪ್ರಳಯಾವ | ಸಾನದೊಳಜಂ ಹರಿಯೊಳಾಕ್ಷಿತಿಯುದಕದೊಳಾ ಹರಿರುದ್ರನೋಳ್ತದುದಕಂ|| ಏನೆಂಬೆನಗ್ನಿಯೋಳ್ಕ್ರಮದಿಂದಡಂಗೆ ದಲ | ನೂನ ರುದ್ರಾತ್ಮಕಾಗ್ನಿಸಿರರ್ಗಲಸ್ವೈರ | ತಾನಿಷ್ನವೃತ್ತಿಯಿಂದಂ ಮಹೇಶಾತ್ಮಕಪವನನಿಂದ ಮೆಯ್ದಪೆರ್ಚಿ || 200 ||

ಸಕಲಮುಂಸಂಹರಿಸಿಯಾಸದೇಶಾತ್ಮಕ | ಪ್ರಕಟಿತಮಹಾಸ್ಮಶಾನೋಪಮಗಗನರಂಗ|ದಕನತ್ತ್ರದೇಶದೋಳ್ತದ್ಗಗನರೂಪ ನಾನಾಮತ್ರ್ಯಯಾನ್ವಿತೈಕಂ|| ಸುಕರಂಸದಾಶಿವಂ ನಿಜಪದಾಂಭೋಜ ಭ | ಕ್ತಕುಲಂಬೆರಸು ಮಹಾಸಂಹಾರ ತಾಂಡವ್ರೋ | ತ್ಸುಕನಾಗಿ ಸಿರವಗ್ರಹತ್ಪರಿಂ ಪಂಚಮುಖ ದಶಭುಜಭ್ರಾಜಿಯಾಗಿ || 201 ||

ಕೋಟಿಕೋಟಿಶಿರೋವದನನೇತ್ರ ಪಾಣಿಪದ| ಪಾಟವನೆನಿಸಿ ಯನೇಕಾಯುಧಾಭರಣೋದ್ಧ | ಶಾಟೀವಿಲಾಸಿ ಪರಮಾನಂದಭರಿತಂ ಮಹಾನಾದನುರುಮಹೇಶಂ || ನೋಟಕದ್ಭುತವಿಗ್ರಹಂ ಮಹಾದೇವನಾ | ಸ್ಫೋಟಿತಮಹಾಶಕ್ತಿ ದೀಪ್ತಿಮತಿಕೀರ್ತಿರಸ | ತಾಟಿತೋಲ್ಲಾಸಂ ಮಹಾಗ್ರಾಸನುದ್ಭಾಸಕಂ ಮಹಾಭೀಮಂಹರಂ || 202 ||

ಭರದೆನಟಿಸೆಡೆಯೊಳಂತಸ್ಸ್ವೈರಸಂಪನ್ನ | ನುರುಪರಮ ಗಗನಮಧ್ಯಸ್ಥಂಪರಾನಂದ | ತರಮೇದುರಂ ಮಹಾವಿಮಲಬೋಧಸುಧಾರಸಮಪಾರಮತುಲವಿಭವಂ || ಪರಮೈಂದವಕಲೋಪಮಂ ಗಾಂಗಮೂಗಿಪ | ಸ್ಫುರಿತಾತ್ಮಶಕ್ತಿಯಮೃತಪ್ಲವಂ ಪೂರ್ಣ್ಮೆಶಂ|ಕರನದಕ್ಕುಲ್ಲಾಸಿಸುತ್ತೆ ಶಿರದೋಳ್ಧರಿಸಿತೋರಿದಂ ಭಕ್ತಜನಕೆ || 203 ||

ಗಮೆನೆಗಗನಂಗಾಯೆನಲ್ಗಮಿಪುದೀಯುಭಯ | ಮಮರೆಗಗನದೊಳೆ ಗಮನಿಪುದರಿಂ ಗಂಗಾಹ್ವ|ಯಮದಾದುದೆಂದು ಗಂಗಾಶಬ್ದಕೊರೆವುದು ನಿರು ಕ್ತಿಯುಂವಿದ್ವಜ್ಞಯಂ || ಸುಮಹದಾನಂದಾಮೃತೋರುಧಾರಾಪೂರೆ | ವಿಮಲೆ ಯೆನಿಪಾಗಂಗೆ ತನ್ಮಹಾಪ್ರಳಯದೊ |ಳ್ಸಮಸಂದುಸರ್ವಮಂ ಸಂಹರಿಸಿನರ್ತಿ ಪಮಹಾಜ್ವಲನ ರೂಪಹರನಾ || 204 ||

ಪರಮಪ್ರಭುವಿನಧಿಕಗಗನಕೇಶಜ್ವಾಲೆ | ಯುರಿಯನತ್ತಿತ್ತಲುಂ ಚಲಿಸ ಲಾರದೆ ಜಟಾಂ | ತರದಲ್ಲಡಂಗಿದಳದರಿಸಾಯ್ತು ಗಂಗಾಧರಾಖ್ಯಮಿಾಶಂಗಿಂ ತುಟು || ಸ್ಫುರಿಸುವಮಹಾಗಂಗೆ ಯೊರ್ಮೆಯಾದ್ಯಚ್ಛಿಕದಿ | ನುರುವಿಭುವಿನಾ ಜಟಾಪಟಲರಂಧ್ರಾಂತರದಿ | ನಿರದೆ ಬಹುಮುಖಿಯಾಗಿತಳದುರ್ ನಿಜಧಾರೆಗಳಿ ನಾಶಿವನನಭಿಷೇಕಿಸಿ || 205 ||

ನಮಿಸಿಮುಂಗಡೆನಿಂದನಂತವಿಧದಿಂ ಯಜಿಸಿ | ಯಮಿತಮುದವಾಂತಿರ್ಪ ತದ್ದೇವಿಯಂನೋಡಿ | ಯುಮೆಯಾಣ್ಮನೆಂದನೆಲೆ ನೀನೆನ್ನಖಿಲಶಕ್ತಿಗಳ್ಗೆ ಪರ ಮಾನಂದಮಂ || ಕ್ರಮದಿನೀವಳ್ನಿನ್ನ ಸಾಮರ್ಥ್ಯಕೋಟಿಕೋ|ಟಿ ಮಿತಾಂಶದಿಂ ಜನಿಸಿದೊಂದು ಶಕ್ತಿಯನೀಗ | ಳಮಲಾಂಗಿ ಪರಮಕಲ್ಯಾಣಿ ಬೀಳ್ಕೊಡುನದೀ ರೂಪದಿಂವರ್ತಿಸುತ್ತ || 206 ||

ವ್ಯೋಮಗಂಗಾನಾಮದಿಂ ಬ್ರಹ್ಮಲೋಕದೊ | ಳ್ಪ್ರೇಮದಿಂ ಪರಿವಂತು ಟೆನೆ ಶಿವಂತದ್ಗಂಗೆ | ಯಾವೊಳ್ಕೆಯುಂ ಸೃಷ್ಟಿಕಾಲದೊಳೆಸಗಿ ಮಗುಳೆಸಂಹಾರ ಕಾಲದಲ್ಲಿ || ಶ್ರೀಮಹೇಶನತನುವಿನೊಳ್ಲೀನ ವಪ್ಪಳಂ | ತಾಮಹಾಗಂಗೆಯಾ ತ್ಮಜೆ ಗಗನಗಂಗೆಯು| ದ್ದಾಮಕಲ್ಲೋಲ ಬುದ್ಬುದಫೇನ ಶೀಕರಂಗಳಿನೆತ್ತಲುಂ ಮುಸುಂಕಿ || 207 ||

ಶರಧಿನದನದ್ಯಾದಿಗಳನದು ವಿವಿಧಮುಖದೆ | ಬೆರಸಿಮತ್ತಂತರ್ಬಹಿ ರ್ವ್ಯಾಪಿಯಾಗಿ ಕೆಡ | ದಿರವಿನಿಂ ಬ್ರಹ್ಮಲೋಕದೊಳಸುರ ಸುರಮುನಿಪ್ರಮುಖ ರಿಂ ಪೂಜ್ಯೆಯಾಗಿ || ಇರಲೊರ್ಮೆ ಸುರಪನೈರಾವತಾದಿಗಳಲ್ಲಿ |ಗುರುಮುದದಿ ನೆಯ್ತಂದು ತತ್ತೀರಮಂನೀಳ್ದು | ವರಕರದೆ ಸಂಕ್ಷೋಭಮಂಮಾಡೆ ಘನಕುಪಿತೆ ಯಾಗಿಘುಳಿಘುಳಿಸುತುರ್ವಿ || 208 ||

ಚಂಡೋರ್ಮಿತಾಂಡವ ವ್ಯೂಹಕಬಲೀಕೃತಾ | ಖಂಡದಿಬ್ಮ ಖಿಶೋಭಿ ಯಾಗಿ ವಿಶ್ವಾಂಡೋರು | ಪಿಂಡಗ್ರಸನ ತತ್ಪರತ್ವದಿಂಮೆರೆವ ತದ್ಗಂಗೆಯುಂ ಕಂಡು ವಿಧಿಯುಂ || ಪುಂಡರೀಕಾಕ್ಷೇಂದ್ರ ಮುಖ್ಯಾಖಿಳರ್ಭಯಂ | ಗೊಂಡು ವಿಶ್ವಾಂತರ್ಗೃಹನನಮಲ ಕೈಲಾಸ | ಮಂಡಿತನ ಸುರುಶಂಭುವಂ ಬಹುವಿಧ ಸ್ತುತಿಗಳಿಂತುಷ್ಟಿವಡಿಸಿನಮಿಸಿ || 209 ||

ಎಲೆಜಗನ್ನಾಥಚಿತ್ತವಿಸಕಾಂಡಪ್ರಳಯ | ವೊಲೆದುದೀ ವ್ಯೋಮಗಂಗಾಪ್ರವಾಹದಿನಿದಂ | ನಿಲಿಸೆನೆ ಶಿವಂನಸುನಗುತ್ತಗಜೆಯಂನೋಡಿ ನೆನೆಯಲೊಡನಾಗಂಗೆಯಾ || ಸಲಿಲವೀಶಂಗೊಂದುಬಿಂದುವ್ರೊಲೆಸೆಯೆತೆಗೆದ | ತುಲಜಟಾಗ್ರದೊಳಾಂತು ಚಿರಕಾಲದಿಂಮೇಲೆ | ಮಲಹರಂ ಲೋಕಶುದ್ಧ್ಯರ್ಥಂ ಹಿಮಾಚಲೋತ್ತುಂಗ ಶಿಖರಾಗ್ರದಲ್ಲಿ || 210 ||

ಈಗಗನಗಂಗಾಭವಾನಿಯಂ ನಿಜಜಟಾ | ಭಾಗದಿಂಬೀಳ್ಕೊಡಲೊಡಂ ಕೋಟಿಮುಖವಾಗಿ | ಬೇಗದಿಂ ಸಮ್ಯಗೂರ್ಧ್ವಾಧಃ ಸಮಂತಾತ್ಪ್ರದೇಶಂಗಳೋಳ್ಪರಿವುತೆ || ರಾಗದಿಂಮೇರುಮಂದರಪರಾದ್ರಿ ಮುಖಗಿರಿ | ಪೂಗಂಗಳೋಳ್ಪುಣ್ಯಭೂ ಪುಣ್ಯವನ ಸಪ್ತ | ಸಾಗರಂಗಳೊಳೆಲ್ಲಿಯುಂ ತೀವಿಭೋರ್ಗರೆವುತಿರೆಯದಂನೋಡಿ ಕೃಪೆಯಿಂ || 211 ||

ತೆಗೆದುಕೊಂಡೆಲೆಜಗತ್ಪಾವನೀಪುತ್ರಿ ಭೂ | ಗಗನತಳವೆಂಬೀ ತ್ರಿಪಥಗಾಮಿಯಾಗಿದನು | ಡುಗುಭೋಂಕನೆಂದಂಗಯಿಪಿ ಗಂಗೆಯನೀಕ್ಷಿಸುತ್ತಗಜೆಗೂಡಿಭರ್ಗಂ || ನಗಪತಿಗಳೋಳ್ ರಮಿಸುತಿರ್ದ ನಂದಿಂದೆ ಗಂ |ಗೆಗೆ ತತ್ತ್ರಿಪಥಗಾಖ್ಯಮೊಯ್ತುದರ ಸಂನಿಧಿಯೊ | ಳಗೆ ಮೆರೆವವುಪಗಂಗೆಗಳ ನುಪ್ರವಿಷ್ಟಂಗಳನುಗಂಗೆಗಳ್ದಲೆಸಿಕುಂ || 212 ||

ಎಂದುಗಂಗೆಯಮೂಲಸೃಷ್ಟಿಯಂ ಶಂಭುವದ | ನಂದು ತಳೆದುದನದಕ್ಕಾಖ್ಯೆಯಾದುದನದರ | ಸಂದಸರ್ವತ್ರವೃತ್ತಿಯನಖಿಳಮುನಿಗಳ್ಗೆ ಸೂತಂಪುರಾಣೋಕ್ತಿಯಿಂ || ತಾಂದಲೊರೆದಂತನ್ನಿಮಿತ್ತದಿಂ ಗಂಗೆಯುಂ | ಮಂದರಧರಾಂಘ್ರಿಭವೆಯೆಂಬುದಶ್ರಾವ್ಯವಾ | ಮಂದಾಕಿನೀನಾಮಗಂಗೆ ಸುರಲೋಕದೆ ಸಹಸ್ರಮುಖದಿಂದೆಬಂದು || 213 ||

ಹರಜಟಾಗ್ರದಭಸಿತದಿಂದಿಂಗಿಪ್ಪೋಗೆ ಶಂ | ಕರನಂಭಜಿಸ್ಟಿ ಭಗೀರಥ ನದನೆರೆಯೆ ಶಿವಂ | ಬೆರಲೆರಡರಿಂ ಪಿಡಿದೊರಸೆ ನಖಮುಖದೊಳಾ ಭಸಿತದಿ ನೊಗೆದಾವರ್ಣಮಂ || ಪರಿಮಳವನಾಂತೆಸೆವ ಗಂಗೆಯಂವುನ್ನೆನ್ನ | ಶಿರದಿ ನೊಗೆದಿಳೆಯಂ ಪೊರೆದಳಿಂದು ಮೇಣ್ಕಾಶಿ |ಗಿರದೆಯ್ದಿ ಪರಮಪಾವನೆಯಾದ ಳೆಂದಗಜೆಗೀಶ್ವರಂ ಪೇಳ್ದನೆಂದು || 214 ||

ಓತುಕಾಶೀಖಂಡಮುಳಿವುತಿದೆ ಹರಿಪದೋ | ದ್ಭೂತೆಯಾಗಂಗೆಯೆಂ ಬುದಬದ್ಧವೆನೆ ಬಳಿ | ಕ್ಕಾತನೆಂದಂ ವಿಷ್ಣುಪದಿಯೆಂದದರ್ಕ್ಕೆ ಪೆಸರಭಿಧಾನ ಶಾಸ್ತ್ರದಲ್ಲಿ || ಮಾತೇಂಪ್ರಸಿದ್ಧಮಿದನೆಂತು ಖಂಡಿಪೆಯೆಂಬ | ಪಾತಕಂಗುಸಿರ್ದ ರೆಲೆ ಮೂಢಕೇಳೀಬುಧ | ವ್ರಾತಮರಿವ್ರೋಳ್ನಭಕೆ ವಿಷ್ಣುಪದವೆಂಬ ಪರ್ಯಾ ಯಾಖ್ಯಮೆಸೆವುದಾಗಿ || 215 ||

ಅದರಸಂಬಧಿಯಾದದುನ್ನಿಮಿತ್ತಂ ವಿಷ್ಣು | ಪದಿಯೆಂದ್ಧು ಗಗನಗಂಗೆಗೆ ನಾಮವಾದುದ | ಲ್ಲದೆ ವಿಷ್ಣುಪದದಿಂದೆ ಸಂಭವಿಸಿದುದರಿನದು ವಿಷ್ಣುಪದಿ ಯಾದುದಲ್ತು || ಒದರುತಿವೆಯಿಂತೆಂದಖಿಲ ಪುರಾಣಂಗಳ್ಬಿ | ಡದೆಯಂತರಿಂ ಗಂಗೆ ಹರಿಪದೋದ್ಭೂತೆ ಯಂ | ಒದುರುಕ್ತಿಯಂ ಬಿಡಾಹರಿಭಂಗರಹಿತ ನೆಂ ದೊರೆಗೆಕೇಳ್ವಿರ್ವಾಹಮಂ || 216 ||

ಪರಮನೌರಸಪುತ್ರ ನಿಂದಲ್ಲದಳಿಯದುರು | ವರಯುಕ್ತತಾರಕವಧಾ ರ್ಥಂ ಸುರರ್ನುತಿಸೆ | ನಿರುತಮನ್ಯಾನನ್ಯೆಯುಮೆಯೊಡನೆ ಕಾಮಾರಿಕೈಲಾಸ ದೋಳ್ಕ್ರೀಡಿಸಿ || ಇರುತೂರ್ಧ್ವರೇತನದನುಳಿದು ಮಂದರದೊಳಾ | ಪರಿಯೊಳ ಯನೇಕ ವರ್ಷಮಿರೆ ಯುತ್ಪಾತಪ್ರ | ಕರ ಮೆಲ್ಲೆಡೆಯೊಳೊಗೆಯೆ ಹರ್ಯಜೇಂ ದ್ರಾದ್ಯರಚ್ಚರಿವಡುತ್ತಾಳೋಚಿಸಿ || 217 ||

ನಾರದನಿನರಿದು ವಿಮಲಂಗಹಿತ ಕಾಮಂಗ| ದಾರೊಕಾಮೂಸಕ್ತಿಯಂ ಪೇಳ್ವರಸ್ಮದುಪ | ಕಾರಾರ್ಥಮೂದ ಲೀಲೆಯುದೆಂದು ಸುರಸಭೆಗೆಹರಿಯೊರೆದು ಮತ್ತಮೆಂದಂ || ಗೌರಿಗೊಗೆದೊಡೆದುಸ್ಸಹಂದಲವನಿನಿಬರ್ಗ | ಮಾರೀತಿಯಂ ಕೆಡಿಸಿಯಾಮೆಲ್ಲರುಂ ಶಿವನ | ಚಾರುಕೃಪೆಯಂಪಡೆವುದೇ ಮಂತ್ರವೆಂದು ನಿಶ್ಚಯಿಸಿಸಲವಂದದಿಂದಂ || 218 ||

ಅನಲನೊಪ್ಪದೊಡೆಯುಂ ಮೊಡಂಬಡಿಸಿ ಶಿವನೆಡೆಗೆ। ವಿನಯದಿಂ ಕಳಿಪೆ ಯಾತಂಬಂದು ನಂದಿಕೇ। ಶನ ನೀಕ್ಷಿಸುತ್ತಳ್ಕಿ ಹಂಸರೂಪಂತಾಳ್ದದರ್ಕಂಜಿ ಸೂಕ್ಷ್ಮರೂಪಂ॥ ಅನುಕರಿಸಿಯೊಳಪುಗುತುಮೂವಾಹನಂ ಮ್ಮೃಗೇಂ। ದ್ರನಿರೆ ಕಂಡತಿಭೀತಿಯಿಂತಿರಿಗಿ ಮೇರುಶಿಖ। ರ ನಿವಾಸಿಗಳ್ಗೆ ವಿಷ್ಣ್ವಾದಿಗಳ್ಗೆ ಯಥಾ ಕಥನಮಂಪೇಳ್ಕೇಳ್ದು ॥ 219 ॥

ಮಂದರಕ್ಕೆಲ್ಲರುಂಬಂದು ವಿವಿಧಸ್ತುತಿಗ। ಳಿಂದೆ ವರದನನೆರೆಯೆ ಸಾನ್ನಿಧ್ಯವಾಗಿ ಶಿವ। ನೆಂದ ನೀವೇಂಬೇಡಿ ಮೂವುದಿಷ್ಟಮೆನೆ ಸುತನಗಜೆಯೊಳೊಗೆಯದಂದದಿಂ॥ಇಂದುಶರುಣಿಪುದೆನೆ ಭವಂನಗುತ್ತೆಮ್ಮ ವೀ।ರ್ಯಂದಲಾಧಾರಮಿಲ್ಲದೊಡೆಲ್ಲ ಭುವನಂಗ। ಳಂ ದಹಿಪುದುಮೆಗೆ ನೀವೆಂದಂತೆಕುಡೆನದಂ ನೀವೀಂಟಿಮೆಂದೆನಲೊಡಂ ॥ 220 ॥

ಹರಿಮುಖಸುರರ್ಭೀತಿಯಿಂ ನುಡಿಯುಡುಗಿ ಧೂಮ। ಕರನನೀಕ್ಷಿಸೆಕೊರಗುತುಂವಹ್ನಿನಮಿಸಿತ। ನ್ನೆರಡುಕಯ್ಯಂನೀಡಿಕುಡುಭವ ಭವದ್ವೀರ್ಯಮಂಸುರರ್ಕೀಡಿನವೊಲೆನೆ॥ ಹರನಾತ್ಮಲಿಂಗದಿಂಕುಂದೇಂದುವರ್ಣಮಾ।ಗುರುಜಾತಿನೀಲೋತ್ಪಲಾಮೋದವಾಗೆಸೆವ।ವರವೀರ್ಯಮಂ ತೆಗೆದು ಕುಡೆಭಾಸ್ಕರಪ್ರಭೆಯಿನುಜ್ವಲಿಪತದ್ವೀರ್ಯಮಂ॥ 221 ॥

ವರಸುಧಾಭಾವನೆಯೊಳೀಂಟಲೊಡನಗ್ನಿಯಂ। ಹರಿಪುರೋಗಮರರ್ಜನಂಗೆಯ್ದುತರತವೋ।ತ್ಕರದಿ ನಾಶಿಖಿಮುಖದೊಳೆಯ್ದರೇತಃ ಪಾನವಂಮಾಡೆತದ್ದಾಹಕೆ॥ ತರಹರಿಸಲಾರದನಲನಧೋಭುವನಕಿಳಿಯೆ। ಹರನನಿತರೊಳದೃಶ್ಯನಾಗಿ ಶಿವೆಯೆಡೆಗೆಯ್ದಿ।ಸುರರಸೂಯದೆನಿನ್ನಗರ್ಭದೋಳ್ಸುತ ನೊಗೆಯದಿರ್ಕೆಂದುನುತಿಸಿಯೆಮ್ಮಂ॥222॥

ತಾನೆಸೇವಿಸುವೆವೆನೆಶುಕ್ಲಮಂ ಶಿಖಿಮುಖದೊ। ಳಾವುಪೇಳಿದೆವದಂ ಹರಿಮುಖಸುರರ್ಕೊಂಡ। ರಾವಹ್ನಿಯಾಜ್ವಾಲೆಗಳ್ಕಿಪಾತಾಳ ಕಿಳಿದಲ್ಲನುಂನಿಲಲಾರದೇ॥ ದೇವಿಶರದಾವವನ ಸಾಮಗಂಗೆಯನೆಯ್ದಿ। ಯೋವೊಗರ್ಭಸ್ಥರೇತಃ ಶೇಷಮುಮನಲ್ಲಿ। ತೀವಿಬರಲಾನದಿಗೆ ಕೃತ್ತಿಕಾದಿಗಳುರುಸ್ನಾನಾರ್ಥಮಾಗಿಗಮಿಸೆ॥ 223॥

ಅವರಗರ್ಭವನಾಮಹಾವೀರ್ಯವೆಯ್ದೆತ | ದ್ಯುವತಿಯುರದಂಧರಿಸಲಾರದೆಮ್ಮಂಭಜಿಸೆ | ಯವರರುವರಲ್ಲಿದ್ದುದಂ ಶರವಣದೊಳಿರಿಸಿಮನೆಯಂತೆಗೆಯ್ಯಲಲ್ಲೀ || ತವೆಯಾರುಮೊಗಮಾಗಿ ಕೋಟಿಸೂರ್ಯ ಪ್ರಕಾ | ಶವನೇಳಿಸುತೆ ಒಳೆವುತಿರ್ದಪಂನಿನ್ನಂಗ | ಭವನೆನೆಶಿವಂಗಿರಿಜೆ ಕೇಳ್ದನ್ನೊಳೊಗೆಯದಿಕ್ಕೆಂದ ಹರಿಮುಖ್ಯರೆಲ್ಲಂ || 224 ||

ಸುತಹೀನರಕ್ಕೆಂದು ಶಪಿಸಿಶಿವನೊಡನಗಜೆ | ಯತಿಸುಖದೊಳಿರಲಿತ್ತ ಹರಿಪುರೋಗಮರೀಶ | ನತುಳರೇತಸ್ಸ ನೈವತ್ತೆಂಟುಸಾಸಿರಬರಿಸವಾಂತು ವಿಾಸೆಯುದಿರೆ || ಸತಿಯುರಂದದೆ ಗರ್ಭಚಿಹ್ನವಂಕುರಿಸಿ ಲ | ಜ್ಜಿತರಾಗಿ ತದ್ಗರ್ಭಮಂಧರಿಸಲಾರದ | ಪ್ರತಿಮಶಿವನಂ ದೈನ್ಯದಿಂ ಬಹುವಿಧದೆನುತಿಸೆ ಸಾನ್ನಿಧ್ಯನಾಗಿಶರ್ವಂ || 225 ||

ನೋಡಿನಗುತಗಜೆಯೊಳೊಗೆಯಲೀಯದಿನಿಬರುಂ | ಕೂಡೆಧರಿಸುವೆವೆಂದೆರೆಯೆ ನೋಡಲೆಂದಿತ್ತೆ | ವಾಡಲೇನೆನ್ನತುಳವೀರ್ಯಮಂ ಮಚ್ಛಕ್ತಿಯಿಲ್ಲದಾರ್ತಳೆವರೆನುತೆ || ಆಡಿಕರುಣಂಗೆಯ್ದು ಹರಿಮುಖಸುರಾಳಿಯಂ | ನಾಡೆಸಂತವಿಸಿ ಶರವಣನದಿಯೊಳುದರಮಂ | ತೋಡೆಬಸಿರಿಳಿವುದೆನೆ ನಮಿಸಿಬೀಳ್ಕೊಂಡಲ್ಲಿಗೆಯ್ದಿ ಶಿವನೆಂದಂದದಿಂ || 226 ||

ಬಸಿರಿಳಿದುತದ್ದುಃಖಮಂನೀಗಿ ಜೀವಿಸಿದ | ರಸುರಾರಿ ಮುಖ್ಯಸುರರರದರಿನಜರಾಮರರೆ | ನಿಸಿದರಾಪಶುಕಶ್ಮಲಂ ಸರ್ವಭಕ್ಷಕಂ ಪಾವಕನೆನಿಸಿದನನಲಂ || ಉಸಿರಲೇಂತದ್ವೀರ್ಯವೇಧೆಯಿಂ ಮೇರುವಿನೊ | ಳೆಸೆವಖಿಲವಸ್ತುಗಳ್ ಸ್ವರ್ಣವರ್ಣಂದಾಳ್ದ | ವಸಮತೇಜೋರಾಶಿ ಬಳೆದುನಿಜರೂಪದಿಂ ಸಾರ್ಥಕಾಖ್ಯಂಗಳಾಂತು || 227 ||

ಶಿವೆಯಿಂಶಿವನಿನಧಿಕಲಾಲನಂಬಡೆದು ಸುರ |ಧವನಭಂಗಿಸಿ ದೇವಸೇನಾಧವಂರಮೂ | ಧವಮುಖರ್ನುತಿಸೆ ತಾರಕನನಂವಧಿಸಿ ಜಗತ್ತ್ರಯಮನುರೆಕಾಯ್ದನೆಂದು || ತವೆಯಥರ್ವಂಸ್ಕಾಂದ ಲೈಂಗ್ಯರವಿಸೌರಾದಿ | ವಿವಿಧಪೌರಾಣಂಗಳುಲಿವುತಿರೆ ಶಿವನವೀ | ರ್ಯವನೀಂಟಿ ಬಸಿರಾಗಿಮೇಣ್ಬಜೆಸಿಜೀವಿಸಿದ ಹರಿಯೆಂತಭಂಗನುಸಿರ್ವೆ || 228 ||

ಮತ್ತೆಕೇಳ್ವಿವನಾಜ್ಞೆಯಿಂದಜಂ ಸೃಷ್ಟಿಯಂ | ಬಿತ್ತರಿಸಲೆಂದು ಸನಕಾದಿಸುತರಂ ಪಡೆದೊ |ದುತ್ತಮಜ್ಞಾನದಿನವರ್ತೊಲಗೆ ಮೇಣ್ಮರೀಚಿಪ್ರಭೃತಿನವ ಪುತ್ರರಂ || ಪೆತ್ತುತತ್ಸೃಷ್ಟಿಯನೊಡರ್ಚಿಸಿಯದರ ಮದೋ | ನ್ಮತ್ತತೆಯಿನಾತ್ಮ ಸಭೆಯೊಳ್ಜಗತ್ಕರ್ತೃವಾ | ನುತ್ತರವೆನಗೆದಲಿಲ್ಲೆನೆ ತದನೃತಾಲಾಪದೊಡನುರುಪ್ರಳಯಮಾಗೆ || 229 ||

ಏಕಾರ್ಣವಂದಲಾಗಲ್ಕಲ್ಲಿ ಹರಿಮುಳಿದು | ಲೋಕೇಶನೊಡನೆಂದನೆಲೆ ನೀನೆಪರವೆಂದ | ದೇಕೆ ನುಡಿದ್ಯೆ ಸಮಸ್ತಕ್ಕೆ ಪರವಾನಲ್ಲದುಂಟೆಯೆನೆ ವಿಧಿ ಕೋಪಿಸೆ || ಆಕಾಲದೊಳ್ಪರಸ್ಪರವಿರೋಧಂಪುಟ್ಟೆ | ಜೋಕೆಯನುಳಿದು ಯುದ್ಧಮಂಮಾಡುತಿರೆ ಭವಾ | ನೀಕಾಂತನಾಹರ್ಯಜರ ಮಧ್ಯದೊಳ್ಪರಂಜ್ಯೋತಿರಾಕಾರಮಾಗಿ || 230 ||

ಆದಿಜರಮಂಗಳಂಕಾಣಿಸದೆ ಶಿವನತುಳ | ದೇದೀಪ್ಯಮಾನತೆಯಿನೆಸೆವುತಿರೆ ತಲ್ಲಿಂಗ | ದಾಧಿ ಜರಮಂಗಳನರಿವೆನೆಂದು ಹರಿಯಜರ್ಪ್ಪಂದಿಪರ್ದುಗಳಾಗುತೆ || ಮೇದಿನಿಗೆನಭಕೆಸಾಯ್ದರಸಿಕಾಣದೆ ಬಳ | ಲ್ದಾದಿ ದೇವನಪೊರೆಗೆಬಂದು ಕೃಪಣೋಕ್ತಿಯಿನ | ನಾದಿಮಲಸಂಸಾರರೋಗವೈದ್ಯಾಯಯೆಂದೆತ್ತಿ ಬಹುವಿಧದೆನುತಿಸಿ || 231 ||

ಭೀತಿಯಿಂಪ್ರಹ್ವಪ್ರಣತಿಗೆಯ್ದು ಕೀರ್ತಿಪ | ರ್ಗೊಂತು ತಲ್ಲಿಂಗದೊಳ್ಪ್ರತ್ಯಕ್ಷನಾಗುಮಾ | ಪ್ರೀತನವರಿಷ್ಟಮಂಕೊಟ್ಟು ಸಲಹಿದನೆಂದು ಧರ್ಮಸಂಹಿತೆಯಲ್ಲಿದೆ || ವರಿತೇನೊ † ಮಧ್ಯೇತಯೋರ್ದ್ದೃಶ್ಯತೇಯೆನುತೆ | ಜಾತವೇದಾಸ್ಥಾಣುರುದತಿಷ್ಠದೆಂದೆನು | ತ್ರಾತೆರದೆ ಭುವನಸ್ಯಗೋಪ್ತಾಯೆನುತೆ ಯಜುಸ್ಸಿನಲಿಂಗಸೂಕ್ತದೊಳಿದೇ || 232 ||

ದೇವತ್ವಮಂಪಿಂಗಿಸೂಕರತ್ವವನಾಂತ | ಧೋವಿಷ್ಟಪಕ್ಕೆಯ್ದಿಯರಸಿ ಶಿವನಡಿಗಾಣ | ದಾವಿಭುವನೇಶರಣ್ಬೊಕ್ಕು ಕರುಣಂಬಡೆದಹರಿಯೆಂತಭಂಗನುಸಿರ್ವೈ || ಆವಿಧಿಯನೋರ್ವ ಮೇಣುವಿನೋಳ್ಮನಿಗಳಧಿಕ |ದೈವವಾವುದುತಿಳಿಪೆನಲ್ಕೆನಗಧಿಕವಾದ | ದೈವಮುಂಟೇ ತಾನೆದೈವವೆಂದೆನಲಜನಪೊರೆಗೆಹರಿಬಂದು ನುಡಿದಂ || 233 ||

---

† ಮಧ್ಯೇತಯೋರ್ದ್ದೃಶ್ಯತೇಜಾತವೇದಾಸ್ಥಾಣುರುದತಿಷ್ಠತ್ ಭುವನಸ್ಯಗೋಪ್ತಾ—ಲಿಂಗಸೂಕ್ತ.

ಆನಿರಲ್‌ನೀನಧಿಕದೈವವೆಂಬುದು ನೀತಿ । ಯೇ ನಿನಗೆಪೇಳ್ ಬ್ರಹ್ಮ ಯೆನೆ ಪರಸ್ಪರ ವಿರು । ದ್ಧಾನುಮತಿ ಯೊಗೆವುತಿರೆ ತದವಸರದೋಳ್ಹತುರ್ವೇದಂಗಳಲ್ಲಿಗೆಯ್ದಿ ॥ ನಾನಾವಿಧದೆಶಿವನೆಪರವೆಂದು ಬೋಧಿಸಿದ । ನೂನೋಕ್ತಿಯಂಕೇಳ್ದು ಕೆಮ್ಮನಿರ್ದಂವಿಷ್ಣು । ವಾ ನಳಿನಜನದರ್ಕೆನಗುತೆ ಮತ್ತೊಂದು ದುರ್ವಾಕ್ಯಮಂ ನುಡಿಯಲೊಡನೆ ॥ 234 ॥

ಸಾಕಾರಮಾಗಿ ಸತ್ತ್ರಣವವೆಯ್ತಂದುಕೇಳ್ । ಕೋಕನದಗರ್ಭ ನಿರ್ಮಲೆಯಾತ್ಮಧರ್ಮಿಣಿ ಚಿ । ದಾಕೃತಿಯನಾಗಂತುಕಿಯೆನಿಪ್ಪದೇವಿಗೂಡಿರೆ ಶಿವಂ ಸ್ತ್ರೀವಶ್ಯಕೇ ॥ ಈಕುಯುಕ್ತಿಯನುಳಿವುದೆನೆ ಶಿವನವೂಯೆಯಿಂ । ದಾಕಮಲಜಂತಿಳಿಯದಿರೆ ತೊಳತೊಳಗುತುಂ ಪಿ । ನಾಕಿಸಂನಿಧಿಯಾಗೆಕಂಡೆನ್ನ ಪಣೆಯೆ ಲ್ಲೊಗೆದನೆ ಮರೆಯೊಕ್ಕಳಿಯೆನೆ ॥ 235 ॥

ಘನಕೋಪದಿಂಹರಂ ಕಾಲಭೈರವತನುವ । ನನುಕರಿಸಿ ಯುಗುರ್ಗೊನೆಯೊಳಾತನೈದನೆಯ ತಲೆ । ಯನೆಕತ್ತರಿಸೆ ತಚ್ಛಿರಃಸ್ರವದ್ರಕ್ತಪ್ಲವಂ ಪ್ರಳಯವಾಗಿಸುತಿರೆ ॥ ಮಿನುಪಾತ್ಮಶಿಖಿನೇತ್ರದೊಂದುಕಿಡಿಗಾಪುತಿಯ । ದೆನುತೆ ಬೆಸನೀಯೆತತ್ಕಾಲದೊಳಜಂ ವಿವಿಧ । ವಿನುತಿಯಿನೊಲಿಸಿ ವರದ ಶಿರವಿದಂಬಿಡದೆ ಧರಿಸೆನೆಯದಂ ಧರಿಸಿಕೊಡೇ ॥ 236 ॥

ಆನೊಸಲಕಣ್ಗಿಡಯುದರ ರಕ್ತಮಾಂಸಮುಮ । ನೇನುಮುಳಿಯದೆ ತುತ್ತಿಭುಗಿಲೆನುತ್ತಿರೆ ತದ್ಭ । ಸಾನಂದಲೀಲೆಯಿಂ ಭಿಕ್ಷಾಟನಷ್ಟಲದೆ ಗರ್ವಿತರತದ್ಗರ್ವಮಂ ॥ ತಾನಪಹರಿಪೆನೆಂದು ದಿವ್ಯರೂಪಮನಾಂತು । ವಾನಿಜೇಶಂಜಗಜ್ಜಯಮುಂಚರಿಸಿ ಹರಿಯ । ನೂನಗೃಹಕೆಯ್ದುವೆಡೆಯಲ್ಲಿ ವಿಷ್ವಕ್ಸೇನನೆಂಬ ವಿಷ್ಣ್ವಂಶನೊರ್ವಂ ॥ 237 ॥

ಪುಗದಿರೆಂದೆಡೆಗೋಲನಿಜೆ ಮೃಡನವನನೋಡಿ । ನಗುತೆ ಶೂಲದಿನಿರಿದು ಪೊತ್ತುವೊಳಪುಗೆಹರನ । ಬಗೆಯರಿದು ಹರಿನೊಸಲಸೀಳ್ದು ನೂರೈವತ್ತುಗಾವುದದಪವಣಿನಿಂದೆ ॥ ಉಗುವಸೃಗ್ಭಿಕ್ಷೆಯಂ ದಿವ್ಯವರ್ಷಸಹಸ್ರ । ಮಗಜಾವರನ ಕಪಾಲಕೆ ಕರೆವುತಿರೆ ಯುದರೊ । ಳಗಣರ್ಧಮುಂತುಂಬದತಿಶಕ್ತಿಗೆಟ್ಟಿಳೆಗೆ ಬೀಳ್ದಸುಗಳೆವವಿಷ್ಣುವಂ ॥ 238 ॥

ಕರುಣದಿಂಶಂಭುತೆಗೆದೆತ್ತಿ ಸಲಹಿದನೆಂದು | ಸುರಚಿರ ಬ್ರಹ್ಮಾಂಡಮು ಖ್ಯ ಪೌರಾಣ ಪ್ರ | ಕರಸುಲಿವುತಿದೆ ಯಂತರಿಂದೀವ್ಯವಸ್ಥೆಗೀಡಾದ ಹರಿ ಯೆಂತಭಂಗಂ || ಹರರಹಿತಯಜ್ಞಮಂ ದಕ್ಷನೆಸಗಲ್ಕಲ್ಲಿ | ಗಿರದೆಯ್ದೆ ಸುರಪಾ ದಿದಿಕ್ಪಾಲರಂ ಸುರರ | ನರರೆ ಬಹುವಿಧದೆಬಾಧಿಸಿ ಯದಿತಿವಾಣಿಯರಮೂಗ ನುಗುರ್ಗೆನೆಯೊಳರಿದು || 239 ||

ಅನಲನಭುಜಂದರಿದು ಜಿಹ್ವೆಯಂಕೊಯ್ದು ಪೂ | ಷನಪಲ್ಗಳನುದಿರ್ಚ್ಚಿ ಭಗನಕಣ್ಣಂಕಳೆದು | ಕನದಿಂದುವಂ ಪದಾಂಗುಷ್ಠದಿಂದೊರಸಿ ಯಜನಶಿರ ಮಂ ಪರಿಯಲೆಚ್ಚು || ಅನತದಕ್ಷನತಲೆಯುರಿದು ತದಧ್ವರದೊಳಿ | ರ್ದ್ದನಿಬರಂ ನೋಯಿಸೆ ಹರಿಪ್ರಮುಖರಳ್ಕಿಯಾ | ಘನಮುಖದ ಬೂದಿಯೊಳವಿಯೆಕೂಡೆ ತಲೆವಿಡಿದುತೆಗೆದು ವೀರೇಶನವರಂ || 240 ||

ಒಯ್ಯಾರಮುಳಿದುತಲೆಗಳನರಿವ ಸಮಯದೋ | ಳ್ತ್ರೋಯಜಾಕ್ಷಾದಿ ಗಳ್ಭಸ್ಮದಿಗ್ಧಾಂಗರಂ | ಕಾಯವೇಡಾಯೆಂಮನೆನೆ ವೀರಭದ್ರನಾಭೀತರಂ ಕಾ ಯ್ದನೆಂದು || ಈಯರ್ಥಮಂ ಋಗ್ಯಜುಸ್ಕಾಂದ ಶೈಂಗ್ಯೋದ್ಧ | ವಾಯುವೀ ಯಂಗಳ್ಸವಿಸ್ತರದಿ ನುಲಿವುತಿರೆ | ಮಾಯಾವಿಹರಿಭಂಗರಹಿತನೆಂದೆಂತು ನುಡಿ ದೈನಿನ್ನನೀನರಿಯದೇ || 241 ||

ಹರಿಚಕ್ರದಿಂಕ್ಷುಪನಿಮಿತ್ತಂ ದಧೀಚಿಯಂ | ಭರದಿಸಿಡೆಯದನವಂ ಮು ರಿದುತಚ್ಛಸ್ತ್ರ ಪ್ರ | ಕರಮಂಪರಿಸೆ ಬಲಂಗುಂದಿ ಹರಿವಿಶ್ವರೂಪಂದೋರೆ ಮುನಿ ನಗುತದಂ || ಕರವೆತನ್ನಂಗುಷ್ಠದಿಂತೋರಿ ಮುಳಿದತ | ದ್ಧರಿಯುರವ ನೊದೆ ಯೆನೊಂದೆರಗಿ ಬರ್ದುಕಿದನೆಂದು | ಪರಮಲೈಂಗ್ಯ ಪುರಾಣಮಿದೆಯಂತು ಭಂ ಗವಾಂತಚ್ಯುತನದೆಂತಭಂಗಂ || 242 ||

ವಾದಿಶತವರ್ಷಮುಂ ಹರಿಜಲಂಧರನೊಡನೆ| ಕಾದಿಸೋಲ್ತೋಡಿಶಿವನಂ ಶರಣ್ಬುಗೆಶಿವಂ | ಪಾದದಿಂಬರೆದ ಚಕ್ರದಿನವನಹರಿಸಿ ಸಲಹಿದನೆಂದು ಶೈವ ದೊಳಿದೇ || ಓದಲೇಂ ಮೇಣ್ಜರಾಸಂಧನುಪಹತಿಗಳ್ಕಿ | ಮೇದಿನಿಯೊಳೆಂಭತ್ತು ನಾಲ್ಕುದುರ್ಗಂಗಳಂ | ಭೇದದೆರಚಿಸಿಯಡಂಗಿದನೆಂದು ಭಾರತದೊಳಿದೆ ಯಾ ತನೆಂತಭಂಗಂ || 244 ||

ತಾರಕನೊಡನೆ ವಿಂಶತಿಸಹಸ್ರವತ್ಸರಂ | ಘೋರಯುದ್ಧಂಗೆಯ್ದು ಸೋ ಲ್ತೋಡಿಯತಿಭರದೆ | ವಾರಿನಿಧಿಯಂಪೊಕ್ಕು ಸಂಭ್ರಾಂತಚೇತಸ್ಕನಾಗಿ ಹರಿಯಾಶಂಕೆಯಿಂ || ಓರಂತಡಂಗಿ ಪೊರಮಡಲಣ್ಮದುಜ್ವಲ ಪು | ರಾರಿಯಂ ಬಹುವಿಧದೆಭಜಿಸಿ ತಚ್ಛಿವಸುತನಿ | ನಾರಾಕ್ಷಸನನಪಹರಿಸಿದನೆಂದಿದೆ ರವಿಪುರಾಣವೆಂತವನಭಂಗಂ || 245 ||

ಘನಗರ್ವದಿಂದೀಶನಂ ಧರಿಪೆನೆಂದುವಿಧು| ಘನರೂಪವಾಗಿ ವರ್ಷಸಹಸ್ರವಾಂತಾರ | ದನಿತರೋಳ್ಕಾಣ್ಡಿಶಂಭುವನೊಲಿಸಿ ತಪದಿನಿಷ್ಟಂಬಡೆದು ತಾಳ್ದನೆಂದು || ವಿನುತಲೈಂಗ್ಯಮಿದೆ ಸೀತೆಯನೊಯ್ಯೆರಾವಣಂ | ಮನಸಿಜಾರಿಯುಭಜಿಸಿ ಸೇತುವಂಕಟ್ಟಿ ನಿಜ | ವನಿತೆಯಂ ಹರಿತಂದನೆಂದು ರಾಮಾಯಣದೊಳಿದೆ ವಿಷ್ಣುವೆಂತಭಂಗಂ || 245 ||

ಎಲೆಲೆಕೃಷ್ಣನ ಭಂಗದೊಳಗನಾನೆಂದುವರ | ಮುಲಿದಪಂ ಬಿಡುಬಿಡಾತನಭಂಗನಲ್ತಲ್ತು | ಪಲವೇಂ ಸ್ವತಂತ್ರಚರಿತಂ ವಿಷ್ಣುವೆಂಬ ನಿನ್ನೊರೆಗೆಕೇಳ್ವಿವರ್ಗಹಮುಂ || ಸಲೆ † ಶಿವಸ್ಯಾಜ್ಞಾಬಲಾದ್ವಿಷ್ಣು ರೆಂದೆನುತೆ | ನಲವಿಂದೆ ಜಾಯತೇ ಮ್ರಿಯತೇ ಪಿಚಯೆನುತೆ | ವಲಮದೇಬ್ರಹ್ಮಾಯೆನುತ್ತೆ ಸರ್ವಯೆನೆ ಜಗತ್ಕರ್ತಾವಿರಾಪೆನುತ್ತುಂ || 246 ||

ಅರರೆಸಮ್ರಾಟ್‌ಸ್ವರಾಡಪಿಯೆನುತ್ತೆ ಪರೋಷ್ಟ್ರ | ತರವದೆನುತುಂವಲಂ ಕ್ಷುದ್ರಾಯೆನುತ್ತೆ ವಿ | ಸ್ತರವಾಗಿಮೇಣ್ ಬ್ರಹ್ಮವಿಷ್ಣ್ವಾದಯೋಭವನ್ ಯೆನೆ ಶಿವಾಜ್ಞಾಶಕ್ತಿಯಿಂ || ಹರಿಯಚಾಟಗಳೆನ್ನರಾದೊಡವೊಗೆವರಳಿವ |ರಿರದವರ್ಗಳ್ತೆಯೊಟ್ಟೆಗಳವೋಲತಿಕಷ್ಟ | ತರಮೆಂದು ಸೂತಗೀತಿಯಿದೆಮತ್ತೆ ‡ ಸೃಜತ್ಯಶೇಷಮಿಾಶಸ್ಯಯೆನುತೇ || 247 ||

---

† ಶಿವಸ್ಯಾಜ್ಞಾಬಲಾದ್ವಿಷ್ಣುರ್ಜಾಯತೇಮ್ರಿಯತೇಪಿಚ | ಬ್ರಹ್ಮಾಸರ್ವಜಗತ್ಕರ್ತಾವಿರಾಟ್ಸಮ್ರಾಟ್ಸ್ವರಾಡಪಿ || ಪರೋಷ್ಟ್ರತರವತ್ಕ್ಷುದ್ರಾಬ್ರಹ್ಮವಿಷ್ಣ್ವಾದಯೋಭವನ್ — ಸೂತಗೀತಾ.

‡ ಸೃಜತ್ಯಶೇಷಮಿಾಶಸ್ಯಶಾಸನಾಚ್ಚತುರಾನನಃ | ವಿಷ್ಣುಃಪಾಲಯತೇಪಿಸ್ಸಂ ವಿಶ್ವೇಶ್ವರನಿಯೋಗತಃ || ಯಚ್ಚಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇಶ್ರೂಯತೇಪಿವಾ | ತತ್ಸರ್ವಂಶಂಕರಸ್ಯಾಜ್ಞಾಬಲೇನ ಸಮಧಿಷ್ಠಿತಂ — ವಾಯವೀಯ.

ಪಲವೇನೊಶಾಸನಾಚ್ಛತುರಾನನೋ ಯೆನುತೆ |ನಲಿದುವಿಷ್ಣುರೆನೆ ಪಾಲ ಯುತೇಯೆನುತೆ ಸವು | ಜ್ವಲಿಸಿ ವಿಶ್ವಮೆನೆ ವಿಶ್ವೇಶ್ವರನಿಯೋಗತೋಯೆನೆ ಯ ಚ್ಚಕಿಂಚಿದೆನುತೆ || ಸಲೆಜಗತ್ಯಸ್ಮಿನ್ನೆನುತೆ ದೃಶ್ಯತೇಯೆನು | ತ್ತಲಘುಊಕ್ತಿಯಿಂ ಶ್ರೂಯತೇಪಿವಾಯೆಂದೆನು | ತ್ತಿಲೆಲೆ ತತ್ಸರ್ವಮೆನೆ ಶಂಕರಸ್ಯಾಜ್ಞಾಬಲೇನ ಸಮಧಿಷ್ಠಿತಮೆನೆ || 248 ||

ಎಸೆವಜಹರಿಗಳಖಿಲಮುಂ ಶಿವನಿಯೋಗದೆ ಸೃ | ಜಿಸಿ ಪೊರೆವರೀಜಗ ದೊಳಾವುದನಿತುಂ ಕಾಣ್ಬು | ದುಸಮಂತು ಕೇಳ್ವುದುಂಟಾಯೆಲ್ಲವುಂ ಶಿವಾ ಜ್ಞಾಶಕ್ತಿಯಿನಧಿಷ್ಠಿತಂ || ಉಸಿರಲೇನಿಂತೆಂದು ವಾಯುವೀಯಂ ಸಮಂ| ಜಸ ಮಾಗಿಸಾರುತಿದೆ ಪೂರ್ವದೋಳ್ಪೂರ್ವಸುರ | ವಿಸರಮಂ ಸೇಂದ್ರಾಮರರ್ಜಯಿ ಸಿತಜ್ಞಯುಮನೋರೋರ್ವರಭಿಮಾನಿಸಿ|| 249 ||

ಘನಕಲಹಮುಂವೂಳ್ಪಡೆಯೊಳೀಶ್ವರಂ ಯಕ್ಷ | ತನುವಂಧರಿಸಿ ನಿಂದು ನುಡಿದನಾಸುರರ್ಗೆ ನಿಮಗಿನಿತು ವೈಷಮ್ಯವೇಕಾನಿಟ್ಟ ಪುಲ್ಲನೆತ್ತಿದನೆ ದನುಜರ ಗೆಲ್ದವಂ|| ಎನುತೊಂದುಪುಲ್ಲನಿಡೆ ಸುರಪನಾಮೂತಿಂಗೆ | ಕಿನಿಸಿಯದನೆತ್ತಿಮಿ ಸುಕದರೆ ನಿಜವಜ್ರದಿಂ | ದನುವಾಗಿಪೊಯ್ದು ಭಂಗಿತನಾಗಲೊಡನಗ್ನಿ ವಾಯು ಗಳುಮುಳಿದಸುರರುಂ || 250 ||

ಆಪ್ರಕಾರದಿನಾತ್ಮಶಕ್ತಿಗಳಿನೆತ್ತಿ ಮೇಣ್ |ಕ್ಷಿಪ್ರದಿಂ ಬನ್ನಂಬಡೆದರಂತೆ ಹರಿಕಮಲ | ಜ ಪ್ರಮುಖರುಂ ಪೆಂಪುಗೆಟ್ಟರಾಗಳ್ ಶಕ್ರನೆಂದನೆಮಗಿಂತೆಸಗಿ ದಾ || ಸುಪ್ರೌಢನೀತನಾರೆಂಬುದಂ ಶಿವನದೃ| ಶ್ಯಪ್ರಾಪ್ತನಾಗೆ ಪಾರ್ವತಿಯು ಲ್ಲಿಕಾಣಿಸಿ ಘು | ನಪ್ರಹಸಿತಾಸ್ಯೆಯಾಗಿರೆ ನಮಿಸಿಸುರರೀತನಾರ್ತಾಯೆಪೇಳೆನ ಲೊಡಂ || 251 ||

ಆತಂನಿಮಗಭೇದ್ಯನಾತನಿಂದೀಜಗ | ದ್ವ್ರಾತದುತ್ಪತ್ತಿ ಸ್ಥಿತಿಪ್ರಭೃತಿ ಗಳ್ನಡೆಗು | ಮಾತಂಸ್ವತಂತ್ರನವನಾಜ್ಞೆಯಿಂ ಸರ್ವಮುಂವರ್ತಿಸುವುದೆಂದೊ ರೆದುಮೆ|| ಆತಾಣದೊಳಡಂಗೆ ಹರಿಮುಖನಿರ್ಜರ್ಣ್ಣ ಯು | ಪ್ಪಾತದಂಗನನೀಶ ನಂನುತಿಸಿ ಯುಳಿದರೆಂ | ದೋತು ಶೈವಮಿದೆ ಶಿವನಿಟ್ಟಪುಲ್ಗಿಳಿದ ಹರಿಯೆಂ ತೈಸ್ವತಂತ್ರಚರಿತಂ || 252 ||

ಮತ್ತೆ ತೇನವಿನಾತೃಣಾಗ್ರಮಪಿ ನಚಲತಿಯೆಂ | ನುತ್ತುಪನಿಷತ್ತಿದೆವಲಂ ಬ್ರಹ್ಮಹಯೆನುತ್ತೆ | ಬಿತ್ತರದೆಕೈನೇಷಿಯಿರೆ ಬಳಿಕ್ಕಲ್ಲಿ ತಸ್ಮಿನ್ನೇವಯೆಂದೆನುತಿರೇ || ಒತ್ತಿತಾಂಶಕ್ರಮುಖ್ಯಾಃಯೆನುತೆ ಮೇಣದರೊ | ಳೆತ್ತಿ ದೃಷ್ಟ್ವಾಯಕ್ಷಮೆನುತೆ ಲೈಂಗ್ಯಮಿರೆಯು | ಬ್ಬಿತ್ತೆ † ನಾಲಂಚಾಲಯಿತುಮೆಂದುತಾಂ ಸ್ಕಾಂದದೋಳ್ ಭೃಂಗಿಯುರುನುತಿಯಿರೆ || 253 ||

ಆಯಕ್ಷನಿಕ್ಕಿದಾಜ್ಞಾತೃಣವನಿಂದ್ರಂ ನಿ | ಜಾಯುಧದೆ ತರಿಯಲ್ಕರೆದುದಿಲ್ಲಕಟ ಕೇಳ | ವಾಯುವಲುಗಿಸಿದುದಿಲ್ಲನಲನುರಿಪಿದುದಿಲ್ಲುಳಿದ ಹರ್ಯ್ಯಜಾದಿಸುರರುಂ || ಆಯತಿಕೆಗೆಟ್ಟರಲ್ಲದೆದಲೆತ್ತಿದುದಿಲ್ಲ | ಮಾಯೆಯಿದು ಶಿವನದೆಂದರಿಯದಗಜೆಯಿನರಿದ | ಜೇಯಶಿವನಂ ಮರೆವುಗರೆ ತದಾಜ್ಞಾವರ್ತಿಗೆಂತೋ ಸ್ವತಂತ್ರಚರಿತಂ || 254 ||

ಸಲೆತೃಣಾಗ್ರಮುಮಿಾಶನಾಜ್ಞೆಯಿಲ್ಲದೊಡಿನಿಸು | ಚಲಿಸದೆನೆ ಹರಿಯದೆಂತೈ ಸ್ವತಂತ್ರಚರಿತ್ರ | ನೆಲೆಲೆಯಿಾಯರ್ಥಮಂ ಶಾಠ್ಯಾಯನಂ ಸವಿಸ್ತೃತಮಾಗಿ ಪೇಳ್ದುದರಿಯಾ || ನಲಿದು ‡ ಭೀಷಸ್ಮಾದೆನುತ್ತೆ ವಾತೋಯೆನು |ತ್ತುಲಿವುತುಂ ತಾನೆಪವತೇಯೆಂದೆನುತ್ತಿಂತು | ಟಲಘುಮತಿಯಿಂದೆ ಭೀಷೋದೇತಿ ಸೂರ್ಯೋಯೆನುತ್ತೆ ಭೀಷಸ್ಮಾದೆನೆ || 255 ||

ಮತ್ತಗ್ನಿರಿಂದ್ರಶ್ಚ ಮೃತ್ಯುರೆನೆ ಧಾವತಿಯೆ | ನುತ್ತೆ ಮೇಣ್ಪಂಚಮೋಯೆಂಬ ಯಜುರರ್ಥಮುಮ | ನೆತ್ತಿ ಯಜಗೀತಿದಲಿದಂ § ಸರ್ವಮೆನೆ ಜಗತ್ಸಾಕ್ಷಾಚ್ಛಿವಾದೆನುತ್ತುಂ || ಸುತ್ತೇನೊನಿಜದೆಕಂಪಯತೇ ಧ್ರುವಮೆನೆ ಶಿವ | ನುತ್ತಮಾಜ್ಞೆಗನಿಲಾರ್ಕಾಗ್ನೀಂದ್ರ ಮೃತ್ಯುಗಳು | ಮುತ್ತುಂಗಮಾಗುಳಿದಖಿಲ ಜಗತ್ತುಂಭೀತಿಯಿಂದೆ ಕುಂದದೆಪೆಜ್ಜದೆ || 256 ||

---

† ನಾಲಂಚಾಲಯಿತುಂತೃಣಂಚ ಪವನಶ್ಶಂಭೋಸ್ತದಾಜ್ಞಾಂವಿನಾ ದಗ್ಧುಂತನ್ನಸಮರ್ಥಃಪವದಹನಶ್ಶೀತ್ತುಂನವಜ್ರೀಣತತ್ | ಶಕ್ರೋಗೋತ್ರಭಿದಪ್ಯಹೋ ಜಗದಿದಂಸರ್ವಂತ್ವದಾಜ್ಞಾವಶಂ ಕಾರುಣ್ಯಾಕರಭೋಃಪಿತಃ ಪಶುಪತೇಮೋಃಷಾಕರಂ ಪಾಹಿಮಾಂ ||

‡ ಭೀಷಸ್ಮಾದ್ವಾತಃಪವತೇ ಭೀಷೋದೇತಿಸೂರ್ಯಃ ಭೀಷಸ್ಮಾದಗ್ನಿರಿಂದ್ರಶ್ಚ ಮೃತ್ಯುರ್ಧಾವತಿಪಂಚಮಃ || ಬ್ರಹ್ಮಗೀತಾ

§ ಇದಂಸರ್ವಂಜಗತ್ಸಾಕ್ಷಾಚ್ಛಿವಾತ್ಕಂಪಯತೇಧ್ರುವಂ |

ಆರ್ೖೆದುನಡೆವರೆನೆ ವಿಷ್ಣುವೆಂತ್ೖೆಸ್ವತಃ | ತ್ರೋರುಚರಿತಂ ಬಿಡುಬಿಡಾ ಮಾತುಸಲ್ಲದಿ | ನ್ನಾರಮೇಶಂಜ್ಞೇಯನೆಂದ ನಿನ್ನಯದುರುಕ್ತಿಗೆ ಕೇಳನಿರ್ವಾಹಮಂ || ಭೋರನದು † ದುರ್ಜಯಂಚ್ೖೆವವಿಜ್ಞೇಯಮೆನು | ತೋರಂತಮೇಯಮೆನೆ ಶಿವರೂಪಿಣಮೆನುತೆ ಮು | ರಾರಿಯುರುಲಿಂಗಮಂನುತಿಸಿದುದು ಶ್ೖೆವದೊಳಿರಲ್ ಜ್ಞೇಯನೆಂತೊಕೃಷ್ಣಂ || 257 ||

ಭರದಿಂ ‡ತ್ವಮೇಕೋಎನುತ್ತೆ ಜಗತಾಮೆನು| ತ್ತರರೆ ವಂದ್ಯೋಯೆನುತೆ ವಿಶ್ವಸ್ಯಯೆಂದೆನುತು | ಪರಿಸಂಸ್ಥಿತೋಯೆನುತೆ ಕಾಲೇನಸರ್ವ್ೖೆರೆನುತ್ತೆ ಮಂತವ್ಯೋಎನೆ || ಹರನೀನಖಿಲಜಗದ್ವಂದ್ಯನೇಕಂ ಹರಿಗು | ಪರಿಪದಸ್ಥಂ ಸುಕೃತಕಾಲದೊಳ್ ಜ್ಞೇಯನೆ | ಲ್ಲರಿನೆಂದು ಕಾಳಿಕಾಖಂಡದೊಳಿ ಭಾಸುರೋಕ್ತಂ ಜ್ಞೇಯನೆಂತಚ್ಯುತಂ || 258 ||

ಮುದದಿನೇ § ಕೋಯೆನುತೆ ವೇದೋಬಹುಯೆನುತ್ತು | ಮದುವೆಶಾಖೋಹ್ಯನಂತಸ್ತ್ವಾಮೆನುತ್ತೆ ಮೇ | ಣೊದವಿಏಕಮೆನುತ್ತೆ ಸಂಬೋಧಯತ್ವಾತ್ಮರೂಪಮೆನೆ ವೇದ್ಯಮೆನುತೆ || ಪದಪಿನಿಂ ಯೋತ್ವಾಮೆನುತ್ತೆ ಶರಣಮೆನುತ್ತೆ| ಪದುಳದಿಂಸಂಪ್ರಪನ್ನಾಯೆನುತೆತೇಷಾಮ|ನೆದಲಂತೆತಾನೆ ಶಾಂತಿಃಶಾಶ್ವತೀನೇತರೇಷಾಮೆನುತಿರಲ್ಕೆ || 259 ||

ಪಲವುಶಾಖೆಗಳುಳ್ಳನಂತಮೆನಿಪಾಶ್ರುತಿಯ | ಸಲೆನಿನ್ನನಾತ್ಮರೂಪಂ ವೇದ್ಯನೇಕನೆಂ | ದುಲಿವುದಂತೆಸೆವ ಶಂಭುವೆನಿನ್ನನೋರ್ವನನೆ ಆರ್ ಶರಣ್ಪೊಗುವರವರ್ಗೆ || ಅಲಘುಶಾಶ್ವತಶಾಂತಿ ಯುಳಿದರ್ಗದಿಲ್ಲೆಂದು | ಜಲಜಾಕ್ಷನೊರೆ ಶಿವರಹಸ್ಯದಲ್ಲಿದೆ ಯದರಿ | ನೆಲೆಲೆ ಕೃಷ್ಣಂಜ್ಞೇಯನಲ್ತು *ಸಾಂಖ್ಯಂ ಯೋಗಮೆನೆ ಪಾಂಚರಾತ್ರಮೆನುತುಂ || 260 ||

---

† ದುರ್ಜಯಂಚ್ೖೆವವಿಜ್ಞೇಯಮಮೇಯಂಶಿವರೂಪಿಣಂ—ಶ್ೖೆವ ಪುರಾಣಂ.

‡ ತ್ವಮೇಕೋಜಗತಾಂವಂದ್ಯಃ ವಿಶ್ವಸ್ಯೋಪರಿಸಂಸ್ಥಿತಃ | ಕಾಲೇನಸರ್ವ್ೖೆಮಂತವ್ಯಃ| ಕಾಳಿಕಾಖಂಡದಲ್ಲಿ ಗಜಾಸುರೋಕ್ತಿ.

§ ಏಕೋವೇದೋ ಬಹುಶಾಖೋಹ್ಯನಂತ ಸ್ತ್ವಾಮೇಕಂ ಸಂಬೋಧಯತ್ವಾತ್ಮರೂಪಂ ವೇದ್ಯಯೇತ್ವಾಂ ಶರಣಂಸಂಪ್ರಪನ್ನಾ ಸ್ತೇಷಾಂಶಾಂತಿಶ್ಶಾಶ್ವತೀನೇತರೇಷಾಂ—ಶಿವರಹಸ್ಯ.

* ಸಾಂಖ್ಯಯೋಗಂ ಪಾಂಚರಾತ್ರಂ ವೇದಾಃಪಾಶುಪತಂತಥಾ | ಜ್ಞಾನಾನ್ಯೇತಾನಿಪಂಚ್ೖೆವ ಜ್ಞೇಯಶ್ಚೈಕೋತ್ರಶಂಕರಃ || ಸ್ಕಾಂದ.

ವೇದಾಃಯೆನುತ್ತೆ ಪಾಶುಪತಂತಥಾಯೆನುತು |ವೋದಲೇಂ ಜ್ಞಾನಾನಿ ಯೆನುತು ಮೇತಾನಿಯೆನೆ | ವೋದದಿಂ ಪಂಚೈವಯೆಂದೆನಲ್ ಜ್ಞೇಯಶ್ಚ ಯೆ ನುತು ಮೇಕೋತ್ರಯೆನುತುಂ ||ವಾದಿಕೇಳ್ ಶಂಕರೋಯೆನೆ ಸಾಂಖ್ಯಯೋಗಂ ಗ | ಳಾದರಿಸೆ ಪಾಂಚರಾತ್ರಂ ಶ್ರುತಿಸುಪಾಶುಪತ | ವ್ಯೆದೆ ದಲ್ ಜ್ಞಾನಂಗ ಳಲ್ಲಿ ಶಿವನೇಜ್ಞೇಯನೆನೆಸೆ ಕೇಶವಂಜ್ಞೇಯನೇ || 261 ||

ಈರೀತಿಯಿಂಸ್ಕಾಂದಮಿದೆ † ಸರ್ವಯೆನುತು ವಾ | ಕಾರೋಯೆನು ತೆ ನಿರಾಕಾರೋಯೆನುತ್ತಂತಿ | ರೋರಂತೆತಾಂ ಮಹಾತ್ಮಾ ಪಾರ್ವತೀಪತಿಃ ಸಾಕ್ಷಾತ್ಪರತರಮೆನುತೇ || ಘೋರನದುನಾಸ್ತಿಯೆನುತುಂ ಜ್ಞಾನಮೆನುತುಂ ವಿ | ಚಾರದಿಂಜ್ಞೇಯಂ ಸದಾತನಾದೆನೆ ನಿರಾ | ಕಾರ ನಖಿಲಾಕಾರ ನುರು ಮಹಾತ್ಮನು ಮೇಶನಾಸನಾತನನದೆಸೆಯಿಂ || 262 ||

ಪರತರಜ್ಞಾನಮುಂ ಜ್ಞೇಯಮುಂ ತಾನಿಲ್ಲ | ನಿರುತವೆಂದಾಸ್ಕಾಂದ ಮಿದೆ ಯದೆಂತೈಜ್ಞೇಯ |ನರರೆಹರಿ ಮೇಣತೋ ‡ ಜ್ಞಾನ ಪ್ರಸಾದಾರ್ಥಮೆನೆ ಶಿವಃಸಾಂಬೋಎನೆ || ಭರದಿಂಸನಾತನ ಉಪಾಸಿತವ್ಯೋ ಯೆನು | ತ್ತಿರದೆ ಮಂತವ್ಯೋಎನಲ್ ಸೂತಸಂಹಿತೆಯೊ | ಳುರು ಶಂಭುವೇಜ್ಞೇಯನೆಂದು ಸಿದ್ಧಂ ವಿಷ್ಣುವೆಂತುಟೋ ಜ್ಞೇಯನೆನಿಪಂ || 263 ||

* ಕ್ವಚಿ ದೆನೆಕದಾಚಿದೆನೆ ವೇದೇಷುತದೆನುತ್ತೆ | ವಚಿಸಿಯನ್ಯಾಸ್ಸರ್ವ ದೇವತಾಜ್ಞೇಯ ಯೆಂ| ದು ಜದುರಿಂತ್ವೇನ್ಯೆವಯೆನುತೆ ಚೋಚ್ಯಂತೇಯೆನುತ್ತೆ ಮೇಣ್ಧ್ಯೇಯುಯೆನುತುಂ || ಉಚಿತದಿಂತ್ವೇಪಿಯೆನುತೆ ತಥೈವಚಯೆನೆ ವೇ|ದ ಚತುಷ್ಕವಾವೆಡೆಯೊಳೊರ್ಮೆಯುಂ ಶಿವನಲ್ಲ | ದಚರಿತದಿನುಳಿದರಂ ಜ್ಞೇ ಯರುಂ ಧ್ಯೇಯರೆಂದುಸಿರದಿದು ಸತ್ಯಮೆಂದು || 264 ||

---

† ಸರ್ವಾಕಾರೋನಿರಾಕಾರೋ ಮಹಾತ್ಮಾಪಾರ್ವತೀಪತಿಃ | ಸಾಕ್ಷಾತ್ಪರತರಂನಾಸ್ತಿ ಜ್ಞಾನಂಜ್ಞೇಯಂ ಸದಾತನಾತ್—ಸ್ಕಾಂದ.

‡ ಅತೋಜ್ಞಾನಪ್ರಸಾದಾರ್ಥಂ ಶಿವಸ್ಸಾಂಬೋಸನಾತನಃ| ಉಪಾಸಿತವ್ಯೋಮಂತವ್ಯಃ— ಸೂತಸಂಹಿತೆ.

* ಕ್ವಚಿತ್ಕದಾಚಿದ್ವೇದೇಷು ತದನ್ಯಾಸ್ಸರ್ವದೇವತಾಃ | ಜ್ಞೇಯತ್ವೇನೈವಚೋಚ್ಯಂತೇ ಧ್ಯೇಯತ್ವೇಪಿತಥೈವಚ: — ಪಾರಾಶರ

ಪಾರಾಶರಂ ಸಾರುತಿದೆ ಯಿಾಪ್ರಕಾರದಿಂ | ಭೂರಿಶಾಸ್ತ್ರಂಗಳುಂಟಂತ ರಿಂಜ್ಞೇಯಮಂ ಮು | ರಾರಿಯಲ್ತಿನ್ನಚ್ಯುತಂ ಧ್ಯೇಯನೆಂಬನಿನ್ನೊರೆಗೆಕೇಳ್ವಿವಾರ್ಹಮಂ || ಸಾರಮತಿಯಿಂದೆ ಶಿವಏಕೋ ಎನುತ್ತೆಮ | ತ್ತಾರಯಲ್‌ಧ್ಯೇಯಶ್ಶಿವಂಕರೋ ಎಂದೆನು | ತ್ತೋರಂತೆ ಸರ್ವಮನ್ಯತ್ಪರಿತ್ಯಜ್ಯಯೆನೆ ಶಿವಕರಂ ಶಿವನೋರ್ವನೇ || 265 ||

ಧ್ಯೇಯನುಳಿದವರಂಬಿಡುವುದೆಂದಥರ್ವವೇ | ದಾಯತ್ತಸೂಕ್ತಿಮುದ್ರಿಸಿ ಸಮಾಪ್ತಿಯನೆಯ್ದಿ | ತೀಯರ್ಥದಿಂ † ಸರ್ವಮನ್ಯತ್ಪರಿತ್ಯಜ್ಯಯೆನುತೆ ಶಿವಏಕೋಯೆನೆ || ನ್ಯಾಯದಿದೆ ಶಿವಂಕರೋಧ್ಯೇಯ ಇತ್ಯಾಹಪರ | ಮಾಯೆನಲ್‌ ಶ್ರುತಿರೆನುತ್ತಾಥರ್ವಣೀಯೆನು | ತ್ತಾಯತದೆ ಖಲು ಯೆನಲ್ಪಾರಾಶರಂಧ್ಯೇಯನೆಂತುಟ್ಟೈವಿಷ್ಣುಬಳಿಕಂ || 266 ||

ವಲಮಥರ್ವಂತರುವದರ್ಕ್ಕೆ ತಾರವೆಕಂದ | ವೆಲೆಲೆಶಕ್ತಿಯೆ ಜಾತಿಯಾಸ್ಕಂಧಶಾಖೆಗಳ | ಮಲಿನವೇದತ್ರಯಂಪರ್ಣನಿವಹಂ ಸ್ಮೃತಿಪುರಾಣಂಗಳಂಗಷಟ್ಕಂ || ಲಲಿತಶಾಖಾವರಣಮಖಿಲ ತರ್ಕಂಗಳು | ಜ್ವಲರಕ್ಷಕಾಳಿಪುಷ್ಪಂ ಶಿವಜ್ಞಾನಂಸು | ಫಲಮೆಪರಮುಕ್ತಿಯಿಂತೆಸೆವುದಿಂ ಪಲವೇಂಶಿವಂಕರಂ ಧ್ಯೇಯಂಶಿವಂ || 267 ||

ಅದುಕಾರಣಂ ಭುಕ್ತಿಮುಕ್ತಿಗಳ ಬಯಸುವರು | ಳಿದದೇವರಂ ಬಿಟ್ಟು ಜಾನಿಸುವುದೀಶ್ವರನ | ಪದವನೆಂದುರೆ ಸೂತಗೀತೆಯಿದೆಮೇಣಂತರಿಂ ಸತತಮಾಶರ್ವನೇ || ಸದಮಲಪರಾತ್ಪರತರೋರುಪದವಾಶಿವಂ | ಪಡೆದುಮೂರ್ತಿದ್ವಾರದಿಂದೆಹೃನ್ಮಧ್ಯದ | ಲ್ಲಿದಿಟಂ ವಿಶೇಷದಿಂಧ್ಯೇಯನಾಧ್ಯಾನದಿಂ ಪಡೆವರಖಿಲಜ್ಞಾನಮಂ || 268 ||

ಧ್ಯಾನಮಿಲ್ಲದೊಡಾಶಿವಜ್ಞಾನವೊಗೆಯದಾ | ಜ್ಞಾನಮಂ ತೊಲಗಿಯಾರ್ಗ್ಗಂ ಮುಕ್ತಿಸಂಭವಿಸ | ದೀನಿಮಿತ್ತಮಖಿಲ ಮುಮುಕ್ಷುಗಳಿನಮಮಸ

---

† ಸರ್ವಮನ್ಯತ್ಪರಿತ್ಯಜ್ಯ ಶಿವಏಕೋಧ್ಯೇಯಶ್ಶಿವಂಕರಃ | ಧ್ಯೇಯ ಇತ್ಯಾಹ ಪರಮಾಶ್ರುತಿರಾಥರ್ವಣೀಖಲು|ಪಾರಾಶರ.

ರ್ನೇಶ್ವರಾಖ್ಯಂ ಸುಸಾಂಬಂ || ಮಾನಸದೊಳಧಿಕತೆಯಿನನಿಶಮುಂಪರತತ್ವ | ತಾನಿಯುತಿಯಿಂಧ್ಯೇಯನವನಶೇಷತೆಯಿನಜ | ದಾನವಾರಾತಿದೇವರ್ಧ್ಯೇಯರಂ ತಲ್ಲದೊರ್ಮೆಯುಂಮರೆದಾದೊಡಂ || 269 ||

ಸ್ವಪ್ರಧಾನತೆಯಿನಾಗರ್ಧ್ಯೇಯರಂತರಿಂ | ಕ್ಷಿಪ್ರದಿಂದುಳಿದವಿಲರಂಬಿಡು ವುದೆಂದಥ | ರ್ವಪ್ರೋಕ್ತಿಪೇಳ್ದುದೆಂದಿದೆ ಮಾನವ ಪುರಾಣ ಮುತ್ತಮಾಧಮ ಭೇದದಿಂ|| ದ್ವಿಪ್ರಕಾರಂಧ್ಯಾನಮಲ್ಲಿ ಶಂಭುಧ್ಯಾನ | ಮುಪ್ರತಿಮ ಮುತ್ತಮಂ ಮಿಕ್ಕವಿಷ್ಣ್ವಾದಿದೇ | ವಪ್ರಕರದಾಧ್ಯಾನಮಧಮಮದರಿಂ ಮುಮುಕ್ಷುಗಳಾದ ಸುಪ್ರಾರ್ಥರಿಂ || 270 ||

ಶಿವಕರಂಶಿವನೋರ್ವನೇ ಧ್ಯೇಯನುಳಿದದೇ | ವವಿಸರಮನುರೆಬಿಡುವುದೀಯರ್ಥದಲ್ಲಥ | ರ್ವವೇಪೇಳ್ದು ಮುಗಿದುದೆಂದಿದೆ ಸೂತಸಂಹಿತೆಯದೆಂತುಕೃಷ್ಣಂಧ್ಯೇಯನ್ನೈ || ವಿವಿಧಪೇದಂಗಳಂತೆಯೆ ಪೇಳ್ದವೆಂದು ಮೇ | ಣವನಗೀತಿಯೊಳಮಾಪಾರಾಶರ ದೊಳಮಿದೆ |ಶಿವಪುರಾಣದೊಳಗಂ ಧ್ಯೇಯಾಯಪಂಚವಕ್ತ್ರಾಯುಎಂದಿದೆಯಜನುತೀ || 271 ||

ಮತ್ತಂಪ್ರಸಿದ್ಧಯೋಗಿ ಧ್ಯೇಯಯೆಂದೆನು | ತೆತ್ತಿಯಾದ್ಯಜ್ಞಾನರೂಪಯೆನುತುಂಮುದಂ | ಬೆತ್ತುದುಮಹೇಶ್ವರಯೆನುತೆ ವಿಷ್ಣುನುತಿವೆರಂಸ್ಕಾಂದದಲ್ಲಿದೆಯಂತುಟು || ಬಿತ್ತರಿಸಲೇನವಿಲ ಮುಂಟಂತರಿಂಧ್ಯೇ ಯನುತ್ತಹುಶಿವಂ ಬಿಡುಬಿಡಚ್ಯುತಂಧ್ಯೇಯನ | ಲ್ಲುತ್ತರವನಿತ್ತಪೆಂ ಕೇಳ್ಮುಂದೆ ಹರಿಯೆಪರತತ್ವವೆಂದೊರೆಗೆಂತೆನೇ || 272 ||

ಭರದಿಂ ‡ ವಿಹಾಯಯೆನೆತಂಮಹಾಭ್ರಾಂತ್ಯಾಯೆ | ನೆರಸೋಕ್ತಿಯಿಂ ಬ್ರಹ್ಮ ವಿಷ್ಣ್ವಾದಿದೇವತಾಃ | ಪರತತ್ವಯೆನೆತಯಾ ವೇದಾವದಂತೀತಿಯೆನುತುಂಬ್ರುವಂತಿಚಯೆನೆ || ಒರೆವಿಷ್ಣು ನಾರಾಯಣಾದ್ಯೈಸ್ತುಯೆನೆ ನಾಮ | ಭಿರೆನೆ ಸಕಲೈರಪಿಯೆನಲ್ ಶ್ರುತಿಸ್ಮೃತಿಯೆನು | ತ್ತಿರೆ ಪುರಾಣಾದ್ಯೈರೆನುತೆ ನೋಚ್ಯತೇಯೆನುತೆ ಪರಮಂ ಪದಮೆನುತ್ತಿರೇ || 273 ||

---

‡ ವಿಹಾಯತಂ ಮಹಾಭ್ರಾಂತ್ಯಾಬ್ರಹ್ಮವಿಷ್ಣ್ವಾದಿ ದೇವತಾಃ| ಪರತತ್ವತಯಾವೇದಾವದಂತೀತಿಬ್ರುವಂತಿಚ | ವಿಷ್ಣುನಾರಾಯಣಾದ್ಯೈಸ್ತು ನಾಮಭಿಸ್ಸಕಲೈರಪಿ | ಶ್ರುತಿ ಸ್ಮೃತಿಪುರಾಣಾದ್ಯೈರ್ನೋಚ್ಯತೇಪರಮಂಪದಂ:—ಪಾರಾಶರಂ.

ಆದಿಶಿವನಂಬಿಟ್ಟು ದುರ್ಭ್ರಾಂತಿಯಿಂದೆವಿ| ಷ್ಣ್ವಾದಿಗಳ್ಪರತತ್ವ ವೆಂದು ಪೇಳ್ವವು ಸಕಲ | ವೇದಂಗಳಿಂದೂಳ್ವರರೆಬರಜ್ಞವಿಷ್ಣುಮುಖ್ಯಾಖಿಲಾಖ್ಯಂಗಳಿಂ || ಆದರಿಸಿಪರತತ್ವವೆಂದುಸಿರ್ದುದಿಲ್ಲತ | ದ್ವೇದಶಾಸ್ತ್ರಸ್ಮೃತಿಪುರಾಣಪ್ರಭೃತಿಗಳಿಂ | ದೋದುತಿದೆ ಪಾರಾಶರಂ ತನ್ನಿಮಿತ್ತದಿಂಪರತತ್ವವಲ್ತು ಕೃಷ್ಣಂ || 274 ||

ಮನವಾರೆ * ನೈವನಾರಾಯಣೋ ವಿಷ್ಣುರೆಂ | ದೆನುತೆಕೇಶವಶ್ಚಾರಿರಚ್ಯುತಏವಮೆಂ | ದೆನುತುಮಾದೀನಿನಾಮಾನಿತಾನಿಯೆನುತ್ತೆವಿಷ್ಣೋಸ್ತ್ರಿ ಮೂರ್ತಿಷುಯೆನೆ || ಅನುನಯದೆ ತಾಂತಥಾಪ್ಯೇತಾನಿನಾಮಾನಿ | ಯೆನೆಯೋಗವೃತ್ಯಾಕಥಂಚನ ಯೆನುತ್ತೆಮ | ತ್ತೆ ನಲವಿಂದಂತೆವರ್ತಂತೇಚ ಯೆಂದೆನುತ್ತುಂ ಶಿವೇತಾನಿಯೆನುತುಂ || 275 ||

ಅನುವಿಂನಮುಖ್ಯಾನಿಯೆನೆ ಪರಸ್ಯಹಿಯೆನ | ಲ್ವನಜಾಕ್ಷನಾಮಂಗಳಿಲ್ಲಿಯುಂ ಪರತತ್ವ | ವೆನಿಸವಿದುನನ್ನಿಯೇ ನಾನುಂ ಪ್ರಯಾಸದಿಂಬರೆಯೋಗವೃತ್ತಿಯಿಂದೇ || ಅನುವದಿಸಿದರ್ಥವೆಂದರಿಯದವು ಮುಖ್ಯವೆಂ | ದುಸಿಬದ್ಧಿಪಂಸರಕಿಯೆಂದು ಮನುವಾಕ್ಯಮುಂ | ವಿನುತಪಾರಾಶರಮುಮಿದೆಯಂತರಿಂ ಹರಿಯದೆಂತು ಪರತತ್ವವೆನಿಪಂ || 276 ||

ಎನಿತಜ್ಞನೋನೀಂ § ಯಏವಪರಮಂ ತತ್ವ | ಮೆನುತೆಯಸ್ಮಾದನ್ಯದೆನುತುನತತ್ವತೋ | ಯೆನೆಸಶ್ಶಿವಸ್ಸಯೆನುತುಂ ಸದಾನಂದಸ್ತ್ವಯಾಖಿಲುಯೆನೆಸಪೂಜಿತೋ || ಎನೆಮತ್ತೆ ನಾರಾಯಣಾದಿನಾಮಾನಿಯೆಂ | ದೆನುತುಂನಸಾಕ್ಷಾದೆನುತ್ತೆಪರಮಾತ್ಮನೋ | ಎನುತೆನಾಮಾನೀತಿಯೆನೆ ಪರಿಜ್ಞಾನಮೆನೆನಾಲ್ಪಸ್ಯತಪಸಃಫಲಂ || 277 ||

---

* ನೈವನಾರಾಯಣೋ ವಿಷ್ಣುಃಕೇಶವ ಶ್ಚಾರಿರಚ್ಯುತಃ | ಏವಮಾದೀನಿನಾಮಾನಿತಾನಿ ವಿಷ್ಣೋಸ್ತ್ರಿಮೂರ್ತಿಷು|| ತಥಾಪ್ಯೇತಾನಿನಾಮಾನಿ ಯೋಗವೃತ್ಯಾಕಥಂಚನ | ವರ್ತಂತೇಚಶಿವೇತಾನಿನಮುಖ್ಯಾ ನಿಪರಸ್ಯಹಿ: — ಪಾರಾಶರ — ಮನು.

§ ಯ ಏವಪರಮಂತತ್ವಂ ಯಸ್ಮಾದನ್ಯ ನ್ನತತ್ವತಃ | ಸಶಿವಸ್ಸ ಸದಾನಂದಸ್ತ್ವಯಾಖಿಲುಸಪೂಜಿತಃ || ನಾರಾಯಣಾದಿ ನಾಮಾನಿನಸಾಕ್ಷಾತ್ಪರಮಾತ್ಮನಃ | ನಾಮಾನೀತಿಪರಿಜ್ಞಾನಂನಾಲ್ಪಸ್ಯತಪಸಃಫಲಂ |ಪರಾತ್ಪರತರಂತತ್ವಂ ಪರನಾಮಶಿವಃಖಲು| ನೇತರಃಸತ್ಯಮೇವೋಕ್ತಂ ನಹಿಸಂಶಯಕಾರಣಂ// ಮನುಸೂಕ್ತಿ

ಎನೆಪರಾತ್ಪರತರಂ ತತ್ವಮೆನೆ ಪರನಾಮ | ಯೆನೆಶಿವಃ ಖಲುನೇತರಃ ಸತ್ಯಮೇವೋಕ್ತ | ಮೆನುತೆನಹಿಯೆನುತೆ ಸಂಶಯಕಾರಣಮೆನೆ ಪರತತ್ವಾದಿ ಸಂಜ್ಞಾನೀಶಂ|| ಅನಿಶಂಹರಿಯುಮವನ ನಾಮಮುಂ ಪರತತ್ವ|ವೆನಿಸವಿದುನನ್ನಿ ಸಂದೇಹವಿಲ್ಲೀಯರಿವು | ಘನಸುಕೃತಿಗೊಗೆವುದೆಂದಿವೆ ಸಾಂಬಮನುಸೂಕ್ತಿಗ ಳ್ವಿಚಾರಿಸಿದುದಿಲ್ಲಂ || 278 ||

* ಯೋಽಸೌಸಸರ್ವವೇದೇಷು ಯೆಂದೆನುತೆ ಮ |ತ್ತೋಽಸೆಯಿಂಪಠ್ಯತೇ ಪ್ಯಜಈಶ್ವರಃ ಯೆನು | ತ್ತಾಸೆಯಿನಕಾಯೋ ಎನುತೆವಲಂನಿರ್ಮಲೋಽಹ್ಯಾ ತ್ಮಾಯೆನುತ್ತೆಮುದದಿಂ || ಲೇಸಾಗಿ ತನ್ಮೇಮನಶ್ಶಿವಯೆನುತೆ ಮಹೋ| ಲ್ಲಾಸ ಏಂಸಂಕಲ್ಪಮಸ್ತುಯೆನೆಕೇಳ್ದೀವ | ತಾಸಮೂಹದೊಳಾವನ ಜನೀಶನತನುವ ಮಲಾತ್ಮನೆಂದೆನಿಸಿಕೊಳ್ವಂ || 279 ||

ಒಂದಿಯಾಶಿವನನೆನಪುಳ್ಳುದಕ್ಕೆನ್ನಮನ |ಮೆಂದುಶಿವಸಂಕಲ್ಪನಾಮದು ಪನಿಷದುಕ್ತಿ | ತಾಂದಲುಲಿವುತಿದೆಯಿಂತಪ್ಪ ಘನತೆಯನುಳ್ಳ ಹರನೆ ಪರತತ್ವ ವಲ್ತೇ || ಸಂದುತದ್ವಿಷ್ಣೋಃ ಪರಮಮೆನುತೆ ಪದಮೆನ | ಲ್ಕಂದರಧರಂಗೆ ಪರ ತರಪರಮಪದವೀಶ | ನೆಂದು ಋುಗ್ವೇದಮಿರೆ ಹರಿಯೆ ಪರತತ್ವವೆಂದೂಳ್ವ ರೇದುಬೋಧಕಾ || 280 ||

ಘನದೆ †ಶಿವಏವಾಸ್ತಿನ್ಯೈವಾನ್ಯದಿತಿಯೆನುತೆ|ಮನವಾರೆಯೋಽನಿಶ್ಚಯಃಸ್ಥಿ ರೋಯೆಂದೆನು | ತ್ತನುವಿಂಸದಾಸಏವಯೆನೆ ಸಿದ್ಧಾಂತೋಽಯೆನುತೆ ಪೂರ್ವಪಕ್ಷ ಸ್ತಥಾ || ಎನೆಪರೇಯೆನುತುಮಯಮೇವಹಿಯೆನುತೆವೇದ | ಯೆನುತು ಮ ಘೋರ್ನಾಪರೋಽಯೆನುತೆಪರಮಯೆಂ |ದೆನುತಾಸ್ತಿಕಾಃಯೆನುತೆ ಗೃಹ್ಣಾಮಿಪರ ಘುಮೆನೆತಪ್ತಮೆನೆಸತ್ಯಮೇವ || 281 ||

---

* ಯೋಽಸೌಸರ್ವವೇದೇಷು ಪಠ್ಯತೆಹ್ಯಜ ಈಶ್ವರಃ|ನಕಾಯೋಽನಿರ್ಮಲೋಽಹ್ಯಾತ್ಮಾತನ್ಮೇ ಮನಃ ಶಿವಸಂಕಲ್ಪಮಸ್ತು:—ಶಿವಸಂಕಲ್ಪೋಪನಿಷತ್.

† ಶಿವಏವಾಸ್ತಿನೈವಾನ್ಯದಿತಿಯೋಽನಿಶ್ಚಯಃ ಸ್ಥಿರಃ | ಸದಾಸ ಏವಸಿದ್ಧಾಂತಃ ಪೂರ್ವಪಕ್ಷ ಸ್ತಥಾಪರೇ|ಅಯುಮೇವಹಿವೇದಾರ್ಥೋ ನಾಪರಃ ಪರಮಾಸ್ತಿಕಾಃ | ಗೃಹ್ಣಾಮಿಪರಶುಂತಪ್ತಂ ಸ ತ್ಯಮೇವನಸಂಶಯಃ—ಬ್ರಹ್ಮಗೀತಾ |

ಎನುತುಂನಸಂಶಯೋ ಎನೆಶಿವನೆ ಪರತತ್ವ | ವನಿಶಮಲ್ಲನ್ಯಸ್ಸಿಜಂ ಸ್ಥಿರಂ ಸಿದ್ಧಾಂತ | ಮಿನಿತುಕ್ತಿಪೂರ್ವಪಕ್ಷ ಮಪರಂ ವೇದಾರ್ಥಮಿದುಕೇಳ್ದು ದಖಿಲಸುರರುಂ || ಇನಿತಕ್ಕೆಕಾಯ್ದ ಕಬ್ಬೊನ್ನ ಕೊಡಲಿಯಪಿಡಿವೆ | ನೆನತು ಸತ್ಯಂ ಸಂಶಯಂಗಳಿಲ್ಲೆಂದುದೇ |ವನಿಕಾಯಕಜನೊರೆದುದಿದೆ ತನ್ನ ಗೀತಿಯೋಳ್ ಹರಿಯೆಂತು ಪರತತ್ವವೈ || 282 ||

†ಅಯಮೇವಹಿಯೆನೆವೇದಾರ್ಥೋ ಯೆನುತ್ತೆಮ| ತ್ತೆಯದೆಯ್ದೆ ನಾಪರಃ ಪರಮಾಸ್ತಿಕಾಃ ಯೆನು | ತ್ತೆಯಥಾರ್ಥವಾಗಿ ವಿಶ್ವಾಸಾರ್ಥಮೆನೆಶಿವಂ ಸ್ಪೃಷ್ಟ್ವಾಯೆನುತ್ತೆನಿಂದು || ನಿಯತಿಯಿಂತ್ರಿರ್ವಃ ಶಪಥಯಾಮ್ಯಹಮೆನುತೆ | ಭಯದನ್ಯಥಾಚೇತ್ಸುರಾಃ ಸತ್ಯಮೆನುತೆ ನಿ | ರ್ಣಯಿಸಿಮೂರ್ಧಾಮಮಪತಿಷ್ಯತಿಯೆನುತ್ತನ್ಯಥಾವೇದಯೆಂದೆನುತ್ತುಂ || 283 ||

ಹಿತದೆವಾಕ್ಯಾನಾಮೆನುತ್ತರ್ಥ ಇತ್ಯಭಿಯೆ | ನುತೆ ಶಂಕಯಾಯೆನುತೆ ನಿಶ್ಚಿತಾರ್ಥಾಶ್ಚೇದೆ | ನುತೆತುಮೂರ್ಧಾಯೆನುತೆ ಯುಷ್ಮಾಕಮೆನುತೆಜಯೆನುತೆ ಪತಿಷ್ಯತಿಯೆನುತ್ತೆ || ಜಿತವಾಗಿ ಸತ್ಯಮೇವಮಯಾಯೆನುತ್ತೆಬಳಿ | ಕತಿಮಾತ್ರದಿಂಪ್ರೋಕ್ತಮೆನುತೆ ಶಂಭೋರೆನುತೆ | ನುತಿಸಿಪಾದಂಸ್ಪೃಶಾಮ್ಯಹಮೆನಲ್ ಮೂರ್ಬಕೇಳ್ಕೆಣಜನ ಗೀತಿಯೊರೆಯಂ || 284 ||

ಪರತತ್ವವೀಶನಿದು ಸಕಲವೇದಾರ್ಥ ವೆಂ | ದೊರೆವೆನ್ನ ಮೂರುಸೂಳ್ದೆಶಪಥವೀನುಡಿಗೆ | ಹರಪದವೆದಿವ್ಯವಾಂ ಪುಸಿದೆಂದೊಡೆನ್ನ ತಲೆಪರಿದುಬೀಳ್ಗಲ್ಲದಂದೂ || ಅರಿದುಬೀಳ್ಗೆನಿಮ್ಮ ಶಿರಗಳೆಂದಜನಖಿಲ | ಸುರರ್ಗೆಸಾಕ್ಷಾದ್ದಿವ್ಯ ಮುಖದಿನರಿಪಿದನಾಗಿ | ಪರತತ್ವಮಲ್ಲಲ್ಲು ಪರಿಪಿಡುಬಿಡಾತನಂ ದೈವವೆಂದೆಂತುನುಡಿವೈ || 285 ||

---

† ಅಯಮೇವಹಿವೇದಾರ್ಥೋ ನಾಪರಃ ಪರಮಾಸ್ತಿಕಾಃ | ವಿಶ್ವಾಸಾರ್ಥಂ ಶಿವಂ ಸ್ಪೃಷ್ಟ್ವಾತ್ರಿರ್ವಃ ಶಪಥಯಾಮ್ಯಹಂ | ಅನ್ಯಥಾಚೇತ್ಸುರಾ ಸ್ಸತ್ಯಂಮೂರ್ಧಾಮಮ ಪತಿಷ್ಯತಿ || ಅನ್ಯಥಾವೇದವಾಕ್ಯಾನಾಮರ್ಥ ಇತ್ಯಭಿಶಂಕಯಾ |ನಿಶ್ಚಿತಾರ್ಥಾಸ್ತುಚೇನ್ಮೂರ್ಧಾ ಯುಷ್ಮಾಕಂಚ ಪತಿಷ್ಯತಿ | ಸತ್ಯಮೇವಮಯಾಪ್ರೋಕ್ತಂಶಂಭೋಃ ಪಾದಂಸ್ಪೃಶಾಮ್ಯಹಂ—ಅಜಗೀತಾ.

ಎಂದಿಂತುಗುರುವವನ ತತ್ಪ್ರಶ್ನೆಗಳ್ಗೆ ಮೊದ | ಲಿಂದುವುಂ ನಿರ್ವಾಹಮಂ ಪೇಳೆ ಮತಿಗೆಟ್ಟು | ಮುಂದುಗಾಣದೆ ವಾದಿಪೊಲ್ಲದದ್ವೈತಾವಲಂಬದಿಂ ಮರಸಿನುಡಿದು || ಒಂದುಪಾಯಂಗಾಣ್ಬೆಸೆಂದುನೀಂ ಪರತತ್ವ | ವೆಂದೆಂಬ ಬೊಮ್ಮವೆಗುಣೋಪಾಧಿಯಿಂದೆ ಮೂ | ರಂದಮಂತಾಳ್ದು ಪಲಪಾಯ್ತಲ್ಲಿ ಪರಿಕಿಪೊಡೆಪೂರ್ವೋತ್ತರಂಗಳುಂಟೇ || 286 ||

ಏಪರಿವಿಚಾರಿಸಿದೊಡಂ ವಿಷ್ಣುವಿಧಿರುದ್ರ | ರೂಪತ್ರಿಮೂರ್ತಿಗಳ್ಸಾಮ್ಯರೆಂದಿರದುಲಿವ | ಪಾಪಿಗಿಂತೆಂದರೆಲೆ ದೋಷಿನೀಸಿಂತುಕಾಳ್ಗೆಡೆದು ನರಕಕ್ಕಿಳಿವರೇ || ಔಪಚಾರಿಕಸತ್ವ ಗುಣಯುಕ್ತರುದ್ರಂಗೆ | ಮಾಪವಾಣೀಶರ್ತಮೋರಜೋಗುಣಬದ್ಧ | ರೂಪರೆಂತೈ ಸಾಮ್ಯವೀನುಡಿಯು ಸಂಭಾಷ್ಯವಾಮತದಚರ್ಚೆಯೇಕೈ || 287 ||

ವೇದಾಂತವೈಷ್ಣವ ಪ್ರಸ್ಥಾನವತ್ಯಂತ | ಭೇದಮವರೋಳ್ ವೈಷ್ಣವಾವಲಂಬನದಿಂದೆ | ವಾವಿಸಿಯದಂಬಿಟ್ಟು ತನ್ಮತವಿರುದ್ಧವೇದಾಂತಮಂ ಗ್ರಹಿಪನಿನಗೆ || ವಾದದುಪಸಿದ್ಧಾಂತವೆಂಬ ನಿಗ್ರಹಹೇತು | ವಾದವಿದುಜಲ್ಪವಾದುದರಿನಿಂತಿದುಕಥಾ | ಭೇದವನೆಸಗಿತನ್ನನುದ್ಭಾವಿಪಂಗೆ ಜಯಮುಂವಾಳ್ಪುದದುನಿಮಿತ್ತಂ || 288 ||

ಎಮಗೆಜಯಮಪಜಯಮಿವಂಗೆ ಕಂಡಾಮಹೀ | ರಮಣಕಂಡಿರೆ ಸಭ್ಯರಿರಯೆಂದುನುಡಿವುದುಂ | ವಿಮಲಸಭ್ಯರಸಭಾಪತಿನೋಡೆಯವರದನೊಡಂಬಟ್ಟು ಪುರೆಯಿಡೆಯವಂ || ಸ್ವಮತಿವಿಭ್ರಮಿಸಿತಲೆಗುತ್ತೆ ಗುರುಬಳಿಕೆಲೆಲೆ | ಕುಮತಿನೀಂಸೋಲ್ತೊಡಂವಾದಾನವಸ್ಥೆ ತಾ | ನಮರ್ವೊಡಂನಿನ್ನ ಸಂಶಯಮನಲೆಯಲ್ಪೇಳ್ಕುಮೆಂದುತ್ತರಂಗುಡಲಿರೆ || 289 ||

ಮದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದ ಭ್ರಮಕರಂದಲೀಲಾ | ಪ್ರಮುದಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರಣೀತಮಾಗಿ || ಸದಮಲಾಖಿಲಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣ ಕಥೆಯೊಳಿಂ | ತಿದು ವಾದಿನೆಗಳ್ದಶಂಕೆಗಳಖಂಡಿಸಿ ಗುರುಜಯಂಬಡೆದ ದಶಮಸಂಧಿ || 290 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶಕ ಕೆರೆಯಪದ್ಮ ಸಾರ್ಯನ ಲಸ | ಚ್ಛಿ್ರೀಶಿವಾದ್ವೈತ ಸಾಕಾರಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ನಾ || ಈಶುದ್ಧಚರಿತಮಂ ತಿಳಿಪಿದ ಗೋ್ರೀದಿದ | ಗಾ್ರಶೆಯಿಂ ಕೇಳ್ದರ್ಗೆ ಭುಕ್ತಿಮುಕ್ತಿಗಳಂ ಮ | ಹಾ ಶುಭಂಗಳ ನಾಯುವಂಕೊಟ್ಟು ಗುರುರೂಪ ವಿಶ್ವನಾಥಂರಕ್ಷಿಪಂ || 201 ||

ಅಂತು ಸಂಧಿ 10 ಕ್ಕಂ ಪದ 635 ಕ್ಕಂ ಮಂಗಳಮಸ್ತು ||ಶ್ರೀ||

---

ಶ್ರೀ ಗುರುರೂಪ ವಿಶ್ವನಾಥಾಯನಮಃ.

---

ಪಲ್ಲ|| ಮುಂತೆಸಚ್ಛ್ರೀಶಿವಾದ್ವೈತ ಸಾಕಾರಸಿ | ದ್ಧಾಂತ ಪ್ರತಿಷ್ಠೆಯುಂವಾಡಿ ಬಹುವಿಧದೊಳೋ | ರಂತೊಡಂಬಡಿಸಿ ದೃಷ್ಟಾಂತಮಂತೋರಿ ಗುರುವಾದಿಯುಂಗೆಲ್ದುಮೆರೆದಂ ||

ಪದಂ|| ಶಾಶ್ವತಸುಖದ ಷಡ್ಗುಣೈಶ್ವರ್ಯಯುಕ್ತ ಸ | ಪ್ತಾಶ್ವಸುತಸಂಹಾರಾನಶ್ವರವಪುಃಪ್ರಭಾ |ವಾಶ್ವಮೇಧಾದಿ ಫಲದಶ್ವಸನಮಿತ್ರ ನೇತ್ರಾಶ್ವಲಾಯನಮುಖನುತ || ವಿಶ್ವತೋಮುಖಸಕಲಪಶ್ವಧಿಪ ಲಸದಪ | ರ್ಣೇಶ್ವರಕೃಪಾಸಮುದ್ರ ಶ್ವೇತವಾಜೀಷ್ಟ|ದಾಶ್ವೀಕೃತ ಶೃತಿಕುಲೇಶ್ವರಾಬ್ಯೋತ್ಕೃಷ್ಟ ವಿಶ್ವನಾಥನಮೋಸ್ತುತೇ || 1 ||

ಅಲ್ಲಿಯುಸಭಾಜನಂಗುರುವನೀಕ್ಷಿಸಿ ಧರೆಯೊ | ಳಿಲ್ಲಿಯುಂ ವಾದಿಸಿದರಂ ಪಲಬರಂಕಂಡು | ಬಲ್ಲೆವಮುಮಾ ನಿಗ್ರಹಸ್ಥಾನಮುಂಪೇಳ್ದು ಸಭೆಯುಮೆಚ್ಚಿಸಿಸೋಲಿಸಿ || ಬಲ್ಲಿದರೆನಿಸಿಪೋಪರಲ್ಲದೆಬಳಿಕೆ ವಾದಿ | ಯಲ್ಲೊಗೆದ ಸಂಶಯಮನಪಹರಿಪೆನೆಂದುಸಿರ್ವ | ಬಲ್ಲಹರದಾರೊಜಯಜಯಯೆಂದು ಪೊಗಳುತಿರೆ ನಸುನಗುತೆ ನುಡಿದರಿಂತು|| 2 ||

ಹರಿದಾಸಕೇಳ್ ಬಾಹ್ಯತಮುಮಾಂತರಂ ಸತ್ವ |ಮುರುಶಿವಂಗಾ ಬಹಿಸ್ಸತ್ವಮುಂತಸ್ತಮಂ | ಹರಿಗೆಪೊರಗೊಳಗುಂ ರಜೋಗುಣಮುಜಂಗಿವರತರತಮುವಶದಿನೀಕ್ಷಿಸೆ || ಹರನಧಿಕನಲ್ತೆ ತಾರಕದಕ್ಷರತ್ರಯಕೆ |ಪರಿವಿಡಿಯೊಳಧಿದೇವತೆಗಳಜಹರೀಶ್ವರರ|ವರವರ್ಣವಾಗುಣಂಗಳ ವೊಲದರಿಂ ಕೆಂಪು ಕಪ್ಪು ಬೆಳ್ಪಾತ್ರ್ಯಕ್ಷರಂ || 3 ||

ಇಂತೆಂದಥರ್ವ ಸೂತೋಕ್ತಿ ಮನುಸಾಂಬಂಗ | ಳಂತಸ್ಥಮಿರೆ ಶಿವಂಗು
ಳಿದರೆಣೆಯೇಸ್ಥೈರ್ಯ | ಮಂತೆ ಧೈರ್ಯಂದಾಕ್ಷಮಾರ್ಜವವಜಡತೆ ಸಂತೋಷ
ಮೃದುಶೌಚಂಗಳುಂ॥ ಸಂತತೋದ್ಯೋಗಕ್ಷಮತೆ ಸುಹಿತಮುತ್ಸುಕಂ | ಕ್ಷಾಂತಿ
ದಾಂತಿ ದಯಾಪರ ಸ್ಕೃತಿಗಳಿವು ಸತ್ವ | ದಿಂ ತೋರ್ಪ್ಪವೃತ್ತಿಗಳ್ ಕ್ರೌರ್ಯ
ಶೌರ್ಯ ಮಹೋತ್ಸವಾಭಿಮಾನಂಕಲ್ಕತೆ || 4 ||

ಬಳಿಕೆದಾರ್ಢ್ಯಂ ನಿರ್ದಯಾಭೋಗದಂಭಮಿವು। ತಿಳಿ ರಜೋವೃತ್ತಿಗಳ
ರತಿಮಂದತಾದೈನ್ಯ | ವಲಘುಪೈಶೂನ್ಯಾತಿ ನಿದ್ರಾಮದಾಲಸ್ಯ ತತಿನಿರೋಧತೆ
ಮೂಢತೆ ॥ ಬಳಸೇನಿವಾತವೋಗುಣದ ವೃತ್ತಿಗಳಿದು ಏ। ಮಳಿಸಾಗಮೋಕ್ತಿ
ಯಂತಪ್ಪ ಸತ್ವಗುಣೋದ್ಧ। ನಿಳಯರುದ್ರಂಗೀರಜಸ್ತವೋಗುಣ ವೃತ್ತರಜಹರಿ
ಗಳೆಂತುಸರಿಯ್ಯೆ || 5 ||

ಮಾಯಾಬಲದಿನೀಶ್ವರಂಗೆ ಹರಿಸರಿಯೆಂಬ | ರೀಯಧಮಮನುಜಕ್ಕೆ
ಲಂಬರಜ್ಞಾನದಿಂ | ವಾಯುಮೇಶಂಗೆನ್ನನೆಣೆಯೆಂಬರರೆಬರಕ್ಕಟವಿಚಾರಲಳವೆ
ಶಿವನಾ ॥ ಮಾಯಿಕವನೆಂದಜೋಕ್ತಿಯಿದೆ ಸುಸ್ಕಾಂದದೊಳ | ಮೇಯಶಂಭು
ಗೆ ಹರ್ಯಜಾದ್ಯರೆಣೆಯೆಂದವಿ | ವ್ಯಾಯತ್ತನಾಗುಲಿವ ಸಾವನವನಸ್ಪೃಶ್ಯನೆಂ
ವಿದೆ ತರಣಿಪುರಾಣಂ || 6 ||

ಒಂದಿ * ನಿರುಪಾಧಿಕಯೆನುತ್ತೆ ಚೇತಸ್ಥಸ್ಯ । ಯೆಂದೇವಸರ್ವಸ್ಯ ಸಾ
ಕ್ಷಿಣೋಯೆನುತೆ ಪಲ । ವಂದದಿಂದೆತ್ತಿ ರುದ್ರಸ್ಯಯೆನುತುಂ ಬ್ರಹ್ಮಯೆನುತೆ
ವಿಷ್ಣುಭ್ಯಾಮೆನೆ || ಸಂದುನಾದಿಕ್ಯಂಪ್ರಯೆನುತುಂ ವದಂತಿಯೇ | ಯೆಂದು
ಹನ್ಯಾತ್ತಾನೆನುತ್ತುಮವಿಚಾರೇಣ । ಯೆಂದು ಹಂತುರೆನುತ್ತೆ ದೋಷೋನಕಶ್ಚ
ನಯೆನಲ್ದುರ್ವಿದಗ್ಧಕೇಳ್ವೈ || 7 ||

ನಿರುಪಾಧಿಕಾಂತಜ್ವಲತ್ಸರ್ವಸಾಕ್ಷಿಕ । ಸ್ಫುರಣರುದ್ರಂಗೀಗುಣೋ
ಪಾಧಿಭಿನ್ನರಜ | ಹರಿಗಳೆಣೆಯೆಂದದಾರದ್ವೈತವಿಭ್ರಮದೆನುಡಿವರವರನ್ವಯ
ಕ್ಕೆ || ನಿರುತಮಿದುಸಾಂಕರ್ಯಮುಂಟಂತೆನುಡಿಯದ | ವರ್ರವಂಶಜರ್ ತ್ರಿ
ಮೂರ್ತಿಗಳೇಕವೆಂಬರಂ। ಹರಿಪುದವಿಚಾರದಿಂ ಹರಿಸೆಯಘವಿಲ್ಲೆಂದು ಸಾಂ
ಬಪೌರಾಣಸಿದ್ಧಂ || 8 ||

* ನಿರುಪಾಧಿಕಚೇತಸ್ಥಸ್ಯೈವಸರ್ವಸ್ಯಸಾಕ್ಷಿಣಃ। ರುದ್ರಸ್ಯಬ್ರಹ್ಮವಿಷ್ಣುಭ್ಯಾಮಾಧಿಕ್ಯಂ ಪ್ರವದಂತಿಯೇ। ಹನ್ಯಾತ್ತಾನವಿಚಾರೇಣ ಹಂತುರ್ದೋಷೋನಕಶ್ಚನ—ಸಾಂಬಪುರಾಣ.

ನಾಡಮಾತೇಂ †ಕೇಚಿದದ್ವೈತಮಾಶ್ರಿತ್ಯ | ಬೈಡಾಲಯೆನುತೆದಲ್ ವ್ರತಿಕಾನರಾಃಯೆನುತೆ | ಕೂಡೆ ಸಾಮ್ಯಮೆನೆ ರುದ್ರೇಣಸರ್ವೇಷಾಂಪ್ರಯೆನುತುಂ ವದಂತಿಯೆನುತೆ || ರೂಡಿಸಿವಿಮೋಹಿತಾಯೆನೆ ಬಿಡಾಲವ್ರತದ | ಜಾಡಬರ್ಕಳ್ ದುರದ್ವೈತಮಂ ಸೆರ್ಬಿ ಸರಿ | ಮಾಡುವರ್ಶಂಭುಗುಳಿದವರ ನವರತ್ಯಜ್ಞರೆಂಗುವಮಾಸೂತಗೀತಿ || ೯ ||

ಮುನಿದು ‡ ಸರ್ವೇಬ್ರಹ್ಮವದೆನುತಿಷ್ಯಂತಿ ಯೆಂ | ದೆನುತೆ ಸಂಪ್ರಾಪ್ತೇತುಯೆನುತುಂ ಕಲೌಯುಗೇ | ಯೆನೆ ನಾನುತಿಷ್ಠಂತಿ ಮೈತ್ರೇಯ ಶಿಶ್ನೋದರಪರಾಯಣಾಯೆನಲ್ಕೇ || ಅನುವಿನಿಂಕಲಿಪುಗೆನುಡಿಯಬಾರದದ್ವೈತ | ವನೆನುಡಿದುಶಿಶ್ನೋದರೋರು ರಕ್ಷಕರಪ್ಪ | ಮನುಜಾಧಮರ್ಶಿವದ್ರೋಹಿಗಳೊಗೆವರೆಂದು ವಿಷ್ಣುಪೌರಾಣಸಿದ್ಧಂ || 10 ||

§ ಪುರುಷೋತ್ತಮಮೆನುತ್ತು ಮಾಶ್ರಿತ್ಯಯೆಂದೆನು | ತ್ತರರೆ ಶಿವನಿಂದಾರತಾದ್ವಿಜಾಯೆಂದೆನು | ತ್ತಿರದದು ಕಲೌಯುಗೇಯೆನುತುಂ ಭವಿಷ್ಯಂತಿಯೆನುತೆಮೇಣ್ ತ್ರಾತಾಯೆನೇ || ಉರವಿಣಿಸಿತೇಷಾಂನ ಮಾಧವೋಎನೆ ಕಲಿಯ | ಬರವಿನೊಳ್ ಹರಿಯನಾಶ್ರೈಸಿ ಹರನಂಪಳಿವ | ನರಕಿವಿಪ್ರರ್ಜನಿಪರವರನಾಹರಿಪೊರೆಯನೆಂದು ಸಾರುತಿದೆಸೌರಂ || 11 ||

ಘನದೆ †† ಯೇನಿಂದಂತಿಯೆನುತುಂ ಮಹಾದೇವ|ಎನುತೆ ಸಂಸಾರಾದೆನುತೆಮೋಚಕಂಪರಂ | ಯೆನುತುಂತ್ವದೆನುತೆ ಭಕ್ತ್ಯಾಶ್ಚಯೆನುತುಂ ದುರಾತ್ಮಾನೋಯೆನುತ್ತೆಮತ್ತಂ || ಅನುವಿನಿಂಬ್ರಾಹ್ಮಣಾಸ್ತೇ ಕಲೌಯೆನೆಯುಗೇ|ಯೆನೆ ಶಿವನನಾರ್ಪಳಿವರಾತ್ವದಿಷ್ಟದ್ವಿಜ | ರ್ಜನಿಪರಧಮತೆಯಿಂ ಕಲಿಯೊಳೆಂದು ಹರಿಗೊರೆದುದಿದೆ ರವಿಪುರಾಣದಲ್ಲಿ || 12||

---

† ಕೇಚಿದದ್ವೈತಮಾಶ್ರಿತ್ಯ ಬೈಡಾಲವ್ರತಿಕಾನರಾಃ | ಸಾಮ್ಯಂರುದ್ರೇಣಸರ್ವೇಷಾಂ ಪ್ರವದಂತಿವಿಮೋಹಿತಾಃ—ಸೂತಗೀತಾ.

‡ ಸರ್ವೇಬ್ರಹ್ಮವದಿಷ್ಯಂತಿ ಸಂಪ್ರಾಪ್ತೇತುಕಲೌಯುಗೇ | ನಾನುತಿಷ್ಠಂತಿಮೈತ್ರೇಯ ಶಿಶ್ನೋದರಪರಾಯಣಾಃ—ವಿಷ್ಣುಪುರಾಣ.

§ ಪುರುಷೋತ್ತಮಮಾಶ್ರಿತ್ಯ ಶಿವನಿಂದಾರತಾದ್ವಿಜಾಃ ಕಲೌಯುಗೇಭವಿಷ್ಯಂತಿ ತ್ರಾತಾತೇಷಾಂನಮಾಧವಃ—ಸೌರಪುರಾಣ.

†† ಯೇನಿಂದಂತಿಮಹಾದೇವಂ ಸಂಸಾರಾನ್ಮೋಚಕಂಪರಂ | ತ್ವದ್ಭಕ್ತ್ಯಾಶ್ಚದುರಾತ್ಮಾನೋ ಬ್ರಾಹ್ಮಣಾಸ್ತೇಕಲೌಯುಗೇ—ರವಿಪುರಾಣ.

ಗೌತಮದಧೀಚಿ ಭೃಗುದುರ್ವಾಸಕಣ್ವಾದಿ । ಪೂತಮುನಿಗಳ್ನಿಮ್ಮ ವಂಶಾದಿಮರದುರ್ವಿ | ನೀತವೃತ್ತಿಗೆ ಸೈರಿಸದೆಕುಪಿತರಾಗಿ ಶಿವನಲ್ಲಿ ಶಿವಭಕ್ತರಲ್ಲಿ || ಖ್ಯಾತಶಿವಭಕ್ತಿ ಶಿವದೀಕ್ಷಾ ಶಿವಾರ್ಚನ। ಪ್ರೀತಿ ಶಿವತೀರ್ಥ ಶಿವಶೇಷ ಶಿವವಿಜ್ಞಾನ । ಜಾತ ಶಿವನಾಮ ಶಿವಗೃಹ ಶಿವಕ್ಷೇತ್ರ ಶಿವತಂತ್ರ ಶಿವನುತಿಗಳಲ್ಲಿ || 13 ||

ಬಳಿಕಂತ್ರಿಪುಂಡ್ರರುದ್ರಾಕ್ಷ ಶಿವಮಂತ್ರಾದಿ । ಗಳೊಳಂ ಪಲವದೇಕಶಾಂಕರೀಯಂಗಳಾ |ದಳಘುಕರ್ಮಂಗಳೇನೇಸುಂಟವರೊಳಂ ವಿಮುಖರಾಗಿನಿಂದಿಸುತ್ತುಂ || ವಿಳಸಿತನಿಗಮ ಬಹಿಷ್ಕೃತದುರಾಚಾರಂಗ | ಳೊಳಗೊಂದಿ ಹರಿಶಿವಂಗೆಣೆಯಧಿಕಮೆಂದಿಂತು । ಗಳಪುತೆಜರಿಸಿಮೆಂದು ಶಪಿಸಿದರಿದಾಸ್ಕಾಂದಮುಖ್ಯಪೌರಾಣಸಿದ್ಧಂ || 14 ||

ಅವರವಂಶದೊಳೊಗೆದೆಯಾಗಿ ತಚ್ಛಾಪದಿಂ | ಶಿವನಿಂದೆನಿನಗೊದವಿತಲ್ಲದಿದು ವೇದಶಾ। ಸ್ತ್ರ ವಿಹಿತೋಕ್ತಿಯೆ ನುಡಿದೊಡಾಲಿಸಿದೊಡತಿದೋಷಮೆನೆವಾದಿಮತ್ತೆಜಿಡದೆ || ತವೆಪರಬ್ರಹ್ಮವದು ಬಯುಲತ್ತಲಿತ್ತನೀಂ। ಹವಣಿಸಿದ ರುದ್ರನಾಕಾರನುಕ್ಷನನೇರಿ।ತೊವಲುಟ್ಟಪಸ್ಮಾರವ್ಯಗ ಶಸ್ತ್ರಫಣಿಭೂತಶಿಖಿಡಮರುಗಳನುಚಿತದಿಂ || 15 ||

ತೊಡವುಗೆಯ್ದೆಲ್ವುಬೂದಿಗಳಾಂತು ಮಸಣದೋ |ಳ್ಪಿಡದೆ ಚರಿಪಂಬ್ರಂಹವೆಂತಾತನೆನೆ ದೋಷಿ ।ಗೆಡೆಯದಿರ್ಪಿವನಿವಂ ಧರಿಸಿದೊಡೆ ನಿಂದ್ಯನೇಕೇಳವಂತಳೆದಂದಮಂ || ಅಡಸಿಮುನ್ನಖಿಲಮಂಸಂಹರಿಸಿ ಯಲ್ಲಿಯುಮೆ । ಯೊಡನೆಬಿನದಿಸುತೆಯಂತರ್ಮುಖೇಕ್ಷಣನಾಗ । ಲೊಡನವನ ನಿಜಧರ್ಮವಕ್ಕೆ ವೃಷಭಾಕೃತಿಯನಾಂತೆನ್ನನುದ್ಧರಿಸೆನೆ || 16 ||

ಎನ್ನನೀನಲ್ಲದೆ ತಳೆವರಾರೆನುತ್ತದಂ । ಮನ್ನಿಸುತೆವಾಹನಂಗೆಯ್ದನಾ ಸಂಕಲ್ಪ । ದಿಂನಾಡೆ ಹರಿಪುರದಹನದೊಳಿದುರುರಥವನಾರೂಪಿನಿಂದೆತ್ತಿದಂ|| ತನ್ನರಹರಿಯಚರ್ಮಮಂ ಕಾಶಿಯೋಳ್ಸಕಲ । ರಂ ನೋಯಿಪಿಭದೈತ್ಯಚರ್ಮಮಂ ಧರಿಸಿದಂ । ಮುನ್ನಂಮುನೀಶ್ವರರ್ ನಾಲ್ವತ್ತುಮೇಲೆಂಟುಸಾಸಿರಂ ಘೋರಪವಂ || 17 ||

ವರದೇವದಾರುವನದೊಳ್ಚರಿಸುತಿರೆಯುವರ । ಪರಿಯರಿಯೆಮಾರಾರಿ ಮೋಹನಾಕಾರಮಂ। ಧರಿಸಿ ಭಿಕ್ಷುಕನಾಗಿ ಬರಲೊಡಂ ತನ್ಮುನಿಸ್ತ್ರೀಯರೀ ಶನನಿಕ್ಷಿಸಿ || ತ್ವರಿತದಿಂಸೋಲ್ತು ಬೆಂಬಳಿಯೊಳೆಯ್ದುತಿರೆ ಕಂ | ಡುರುಕೋಪದಿಂದಭವನೆಂದರಿಯದವರಧಿಕ । ತರದಾಭಿಚಾರಾಧ್ವರದಿನೀತನಂ ಕೊಲ್ವೆವೆಂದದನೊಡರ್ಚೆಯಲ್ಲಿ || 18 ||

ಮುನಿಗಳಾತ್ಮಸ್ಥಕೋಪಂರೂಪನಾಂತುದೋ | ಯೆನಿಸಿ ಪುಲಿಯೊಗೆವುದುಮವರ್ಕಳಿಪೆಕೊಂದು ತದ । ಜಿನಮುಟ್ಟನವರಪಸ್ಮೃತಿಯಂತಪಸ್ಮಾರ ನೊಗೆದು ಬರೆಕೆಡಪಿಮೆಟ್ಟಿ ||ಜಿನದಿಸಿದನೊಡನೆ ಮೃಗವೊಗೆದು ಸಂವಿಜೃಂಭ್ಯಾ। ರೆನಗೆಸರಿಯೆಂದು ಪೇಳ್ವಂತೆಯ್ದೆಪಿಡಿದದಂ | ಮನಪಾರೆತಾಳ್ದನವರತಿ ದುರ್ಗುಣವಸಂತಮುಖದೆ ಪೊರಪೊಣ್ಮೆದಂತೆ || 19 ||

ವಿವಿಧಾಸ್ತ್ರವಲ್ಲಿಸಂಭವಿಸಿ ಜರೆಯಾಗ್ರಹಿಸಿ । ತವೆತಾಳ್ದನಂತೆ ಪಂಚಫಣಾಹಿಗಳ್ಜನಿಸಿ । ಯುವರಕೋಪಾನಲಜ್ವಾಲೆವೋಲ್ಬರೆಪಿಡಿದು ತಳೆದನಾಗರ್ಬುಡಭಯದಿಂ || ಕವಿದುಮೊರೆವ್ಪೊಕ್ಕವಂ ಧರಿಸಿದಂಮೇಣ್ ಭೂತ | ನಿವಹಾನ್ವಿತಂ ಪಿಶಾಚಂಗಳೊಗೆದಾ ಮುನಿಗ । ಳವಿನೀತಚಿತ್ತ ಪೈಶಾಚಮಂಪೇಳ್ವಂತೆ ಬರೆಸಹಚರತೆಯೆಸಗಿದಂ || 20 ||

ಅಮಮಮೇಣ್ಕುಂಡಾಗ್ನಿಯಾತ್ಮಾಪರಾಧಮಂ | ಕ್ಷಮಿಸೆಂದು ಬೇಡಿಕೊಳ್ವಂತೆ ಬರೆಲೀಲಾಕು | ಸುಮವನಾಂಪಂತಿ ರಾಂತಂತದಭಿಚಾರಮಂತ್ರಂ ಡಮರುರವವನೆಯ್ದಿ||ನಮಿಸುತೆಯ್ತರೆಯಂತೆಪಿಡಿದ ನೀರನನುಳಿ | ದಮಿತಕರ್ಮಾಳಿಯಿಂತುಟುಶೂನ್ಯಮಪ್ಪುದೆಂ | ದುಮಹೀಜನಕೆ ತೋರ್ಪ್ಪವೋಲೆಲ್ಲವುಂಶೂನ್ಯಮಾಗೆಕಂಡಾಮುನಿಕುಲಂ || 21 ||

ಭೀತಿಯಿಂನುತಿಸೆನಿಜರೂಪಮಂ ತೋರಿಪರಿ | ಪೂತಸುಜ್ಞಾನಮಂಕೊಟ್ಟವರಪೊರೆದನಾ | ಭೂತೇಶನಾಕಾರಮುಂಜಗದ್ಧಿತಮಾ ಪ್ರಳಯದೊಳಜಹರಿಮುಖ್ಯರಂ || ಮಾತೇನುರುಪಿಕಪಾಲಾಸ್ಥಿಗಳ ನಾಂತುತ | ದ್ಭೂತಿಯಿಟ್ಟಲ್ಲಿಸ್ಪರ್ಶನವರನಿತ್ಯತೆಯೆರಿಪು | ತೀತೆರಂಸ್ಕಾಂದೋಕ್ತಮದರಿಂ ಪವಿತ್ರನಾ ಬ್ರಹ್ಮವೆನೆ ರುದ್ರನಾಮಂ || 22 ||

ಪರತತ್ತ್ವವತ್ತ್ರಲಗಜಾಧೀಶನಿತ್ತ್ರಲೆಂ | ದೆರಡಿಟ್ಟು ನುಡಿವುದೆಯಬದ್ಧವಂತೆಂಬ ಬೌ | ದ್ಧರಬಾಯನೆಡದಕಾಲ್ಗೆರ್ಪಿನಿಂ ಮುಚ್ಚಿಲೊರೆವುತಿವೆ ವೇದಂಗಳೆಂದುಂ || ಉರುಸತ್ಯವಾಣಿಗಳವೊಂದನೆರಡೆಂದೆನ್ನ | ವೆರಡುಳ್ಳೊಡೊಂದೆನ್ನವೆಂತೆನೆಯಜುಸ್ಸಿನ | ಲ್ಲಿರದೇಕಏವರುದ್ರೋನದ್ವಿತೀಯಾಯತಸ್ಥೇ ಯೆನುತೆಮತ್ತೆಯುಂ || 23 ||

ಏಕಮೇವಾದ್ವಿತೀಯಂ ಬ್ರಹ್ಮಯೆಂದೆರಡ | ರೇಕತ್ವಮಂ ಕಾಣಿಸಿತುದಲ್ಸ್ವಯಂ ವಚನ | ಕೇಕವೈರುಧ್ಯಮಂಶ್ರುತಿಪೇಳ್ವುದದರನುಡಿವುಸಿಯೆ ಮೋಕ್ಷ *ಬ್ರಹ್ಮಯೆನುತೆ|| ಲೋಕಪದಯೆನುತು ಮನ್ವೇಷೀಯೆನುತ್ತುಮ | ಶ್ಲೋಕದಿಂ ರುದ್ರಯೆನುತಾರಾಧನಯೆನುತ್ತ | ದೇಕೂಡೆತತ್ಪರೋಯೆನೆ ಶಿವಪದಾಕಾಂಕ್ಷಕಂ ಶಿವನ ಭಜಿಪನೆಂದು || 24 ||

ಎಲೆವಾದಿಕೆಳ್ ಬ್ರಹ್ಮಬಿಂದೂಪನಿಷದುಕ್ತಿ | ಯುಲಿವುತಿದೆಯಂತರಿಂ ಬ್ರಹ್ಮಪೆಂದೊಡೆರುದ್ರ | ನಲಘುನಾಮಮಂಮತ್ತೆಯುಂ ಕೇಳ † ತತ್ತ್ವತ್ವಮೆನೆಯದ್ಭಗವತೋಯೆನೆ || ಸಲೆರೂಪಮೀಶಸ್ಯಶೂಲಿನೋಯೆನೆಮತ್ತ | ಮೊಲವಿನಿಂವಿಶ್ವಮೆನೆತೇನಾಖಿಲಮೆನೆಯವಿ | ಜಲನದಿಂವ್ಯಾಪ್ತಮೆಂದೆನುತೆನಾಸ್ಯೇನೇತಿಯೆನುತಬ್ರವೀಚ್ಛ್ರುತಿರೆನೇ || 25 ||

ಇನಪುರಾಣಂಮತ್ತೆ § ವಿಶ್ವತಶ್ಚಕ್ಷುರುತ | ಯೆನೆವಿಶ್ವತೋಮುಖೋವಿಶ್ವತೋಬಾಹುರುತ | ಯೆನೆವಿಶ್ವತಃ ಪಾತ್ಸಮೆನುತೆಬಾಹುಭ್ಯಾಂಧಮತಿ ಸಂಪತತ್ರೈರೆನೆ || ಅನುವಿನಿಂದ್ಯಾವಾಯೆನುತ್ತೆ ಭೂಮೀಯೆನುತೆ | ಜನಯನ್ನೆನುತೆದೇವಏಕೋಯೆನುತ್ತುಮಿರೆ | ವಿನಯದಿಂ ಶ್ವೇತಾಶ್ವತರನಾಮದುಪನಿಷತ್ತ ‡ ವ್ಯಕ್ತಮೆನೆಕಾರಣಂ || 26 ||

---

* ಬ್ರಹ್ಮಲೋಕಪದಾನ್ವೇಷೀರುದ್ರಾರಾಧನ ತತ್ಪರಃ—ಬ್ರಹ್ಮಬಿಂದೂಪನಿಷತ್.

† ತತ್ತ್ವಂಯದ್ಭಗವತೋರೂಪ ಮೀಶಸ್ಯಶೂಲಿನಃ । ವಿಶ್ವಂತೇನಾಖಿಲಂ ವ್ಯಾಪ್ತಂನಾಸ್ಯೇನೇತ್ಯಬ್ರವೀಚ್ಛ್ರುತಿಃ—ರವಿಪುರಾಣಂ.

§ ವಿಶ್ವತಶ್ಚಕ್ಷುರುತವಿಶ್ವತೋ ಮುಖೋವಿಶ್ವತೋಬಾಹುರುತವಿಶ್ವತಃ ಪಾತ್ । ಸಂಬಾಹುಭ್ಯಾಂಧಮತಿ ಸಂಪತತ್ರೈರ್ದ್ಯಾವಾಭೂಮೀಜನಯನ್ ದೇವಏಕಃ॥ಶ್ವೇತಾಶ್ವತರೋಪನಿಷತ್.

‡ ಅವ್ಯಕ್ತಂಕಾರಣಂಪ್ರಾಹುರಾನಂದಂ ಜ್ಯೋತಿರಕ್ಷರಂ । ಅಹಮೇವಪರಂಬ್ರಹ್ಮಮತ್ತೋಹ್ಯನ್ಯನ್ನವಿದ್ಯತೇ । ಅಹಂತತ್ಪರಮಂಬ್ರಹ್ಮಪರಮಾತ್ಮಾಸನಾತನಃ—ಈಶ್ವರಗೀತಾ.

ಪ್ರಾಜ್ಞುರಾನಂದಮೆನುತುಂ ಜ್ಯೋತಿರೆಂದೆನು | ತ್ತೂಪೆಯಿಂದಕ್ಷರಮು ಷಮೆನೆಏವಪರಮೆನು | ತಾಪಮೇಕ್‌ಬ್ರಹ್ಮಮತ್ತೋಹ್ಯನ್ಯ ದೆನುತುಂನವಿದ್ಯತೇ ಯೆನುತಹಮೆನೆ || ಆಹಷ್ಕದಿಂತತ್ವರಮಮೆನಲ್ ಬ್ರಹ್ಮಯೆನೆ | ನೇಹದಿಂದೊ ಳ್ದುಪರಮಾತ್ಮಾಯೆನುತ್ತೆ ಸ|ದ್ವ್ಯಾಪಾರದೆಸನಾತನೋ ಯೆನಲ್ಕೂರ್ಮದೀಶ್ವ ರ ಗೀತಿಯಂತಲ್ಲದೆ || 27 ||

ಮತ್ತೆ * ಯೋವೈಯೆನುತೆ ರುದ್ರಸ್ಸಭಗವಾನ್ನೆ | ನುತ್ತೆಯಶ್ಚಯೆನೆ ಏ ಶ್ವೇಶ್ವರಸ್ತಸ್ಮೈಯಿ | ನುತ್ತದು ನಮೋನಮೋಯೆನಲಥರ್ವಶಿರಮು † ತ್ಯಾಶ್ರ ಮಸ್ಥೋಭುನುತುಂ || ಸುತ್ತೀನೊಸಕಲೇಂದ್ರಿಯಾಣಿ ಯೆನುತುರುಗುಣೀ | ಯು ತ್ತದೆನಿರುಧ್ಯಭಕ್ತ್ಯಾಸ್ವಗುರು ಮೆಂದೆನು | ತ್ತೆತ್ತಿನಲವಿಂಪ್ರಣಮ್ಯಯೆನೆ ಹೃತ್ಪುಂ ಡರೀಕಂವಿರಜಮೆನೆವಿಶುದ್ಧಂ || 28 ||

ಎನೆವಿಚಿಂತ್ಯಯೆನೆಮಧ್ಯೇ ವಿಶದಮೆನುತೆ ಬಳಿ | ಕನುವಿಂವಿಶುದ್ಧಮೆ ನುತುಮನಂತಮವ್ಯಕ್ತ | ಮೆನೆಯುಚಿಂತ್ಯಯೆನೆರೂಪಂ ಶಿವಮೆನಲ್ ಪ್ರಶಾಂ ತಮಮೃತಂ ಬಹ್ಮಯೋನಿಂ || ಎನೆತದಾದಿಯೆನೆ ಮಧ್ಯಾಂತಯೆನುತೆ ವಿಹೀನ| ಮೆನುತೇಕಮೆನೆವಿಭುಮೆನುತೆ ಚಿದಾನಂದಮೆಂ | ದೆನೆಯುರೂಪಮೆನೆಯದ್ಭುತ ಮೆನೆಯುಮಾಸಹಾಯುಮೆನೆ ಪರಮೇಶ್ವರಮೆನೆ || 29 ||

ಒಲವಿಂಪ್ರಭುಂತ್ರಿಲೋಚನ ಮೆನುತೆ ಕರತಲಾ | ಮಲಕಮಾಗಿಯೆನೀ ಲಕಂಠಂಪ್ರಶಾಂತಮೆಂದುಲಿದು ತಾಂಧ್ಯಾತ್ವಾಮುನಿರೆನೆಗಚ್ಛತಿ ಭೂತಯೋನಿಂ ಸಮಸ್ತಮೆನುತೆ || ಸಲೆಸಾಕ್ಷಿಮೆನುತೆತಮಸಃ ಪರಸ್ತಾದೆನು | ತ್ತಲಘುಕೈವ ಲ್ಯೋಪನಿಷದುಕ್ತಿಯಿದ ಯಿದರೊ | ಳೆಲೆವಾದಿಕೇಳ್ಪರಬ್ರಹ್ಮವತ್ತಲುಮೇಶ ನಿತ್ತಲೆಂದೊರೆದುದುಂಟೇ || 30 ||

---

* ಯೋವೈರುದ್ರಸ್ಸಭಗವಾನ್ ಯಶ್ಚವಿಶ್ವೇಶ್ವರಸ್ತಸ್ಮೈನಮೋನಮಃ—ಅಥರ್ವಶಿರ

† ಅತ್ಯಾಶ್ರಮಸ್ಥಸ್ಸಕಲೇಂದ್ರಿಯಾಣಿನಿರುಧ್ಯ ಭಕ್ತ್ಯಾಸ್ವಗುರುಂ ಪ್ರಣಮ್ಯಹೃತ್ಪುಂಡ ರೀಕಂವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇವಿಶದಂ ವಿಶೋಕಂ | ಅನಂತಮವ್ಯಕ್ತಮಚಿಂತ್ಯರೂ ಪಂ ಶಿವಂಪ್ರಶಾಂತ ಮಮೃತಂ ಬ್ರಹ್ಮಯೋನಿಂ | ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದ ಮರೂಪಮದ್ಭುತಂ | ಉಮಾಸಹಾಯಂ ಪರಮೇಶ್ವರಂ ಪ್ರಭುಂತ್ರಿಲೋಚನಂನೀ ಲಕಂಠಂಪ್ರಶಾಂತಂ | ಧ್ಯಾತ್ವಾಮುನಿರ್ಗಚ್ಛತಿಭೂತಯೋನಿಂ ಸಮಸ್ತ ಸಾಕ್ಷಿಂ ತಮಸಃಪರ ಸ್ತಾತ್—ಕೈವಲ್ಯೋಪನಿಷತ್—

ಮತ್ತೆಯುಂ ‡ ಬ್ರಹ್ಮವಿದೆನುತ್ತುಮಾಪ್ನೋತಿಯೆಂ। ದೆತ್ತಿವೇದಾಂತಮಿ ದೆಮನುಸೂಕ್ತಿ * ಯಸ್ಮಾಯೆ|ನುತ್ತುಂದಿಮಾನಿಭೂತಾನಿ ಜಾಯಂತೇಯೆನುತೆ ಯೇನತಾನಿಚಯೆನೆ || ಬಿತ್ತರದೆ ಜೀವಂತಿಯತ್ರಲೀಯಂತೇಯೆ | ನುತ್ತೆತದ್ಬ್ರಹ್ಮೇತಿಯೆನುತಾದರೇಣತುಯೆ । ನುತ್ತೆ ತಸ್ಯಯೆನುತ್ತ ಸಾಧಾರಣಾಮೂರ್ತಿರೆನುತೆ ಸಾಂಬಾಯೆನುತ್ತೆ || 31 ||

ಅನುನಯದೆ ಚಂದ್ರಾರ್ಧಶೇಖರಾನೀಲಯಿಂ | ದೆನುತೆತಾಂಗ್ರೀವಾಯೆನುತ್ತುಂತ್ರಿಣೆತ್ರಾಚ | ಯೆನುತೆದಲ. ಬ್ರಹ್ಮಸೂತ್ರ ಸಮನ್ವಿತಾಯೆನುತುಮಿಾ|ದೃಶೀಯೆನುತೆಪರಮಾ || ಎನುತೆಮೂರ್ತಿರ್ಯಸ್ಯಯೆನುತ ಸಾಧಾರಣಾ | ಯೆನುತುಂಪರಾಯೆನೆ ತದೇವಯೆನುತುಂಪರಮ | ಮೆನುತೆ ಸಾಕ್ಷಾತ್ಪರಂನಾನ್ಯನ್ನಸಂಶಯೋ ಯೆನಲಲ್ಲಿಭೇದವೆಂತ್ತೈ || 32 ||

ಮತ್ತಂಪರಬ್ರಹ್ಮಯೆನೆ ಸ ಈಶಾನೋಯೆ | ನುತ್ತುಮೇಕೋಯೆನುತೆ ರುದ್ರಃ ಸಏವಚಯೆ | ನುತ್ತುಂಭವಾನೆನೆ ಮಹೇಶ್ವರಃ ಸಾಕ್ಷಾದೆನುತೆ ಮಹಾದೇವೋಯೆನೇ|| ನುತ್ತೇಂನಸಂಶಯೋಯಸ್ಯಯೆಂದಿಂತುವಚಿ ಸುತ್ತುಮಂತಸಾಘ್ನಿ ಭೂತಾನಿಯೇನಯೆನು|ತ್ತೆತ್ತಿವಲಮಿದವೆನುತ್ತುಂ ಭ್ರಾಮ್ಯತೇಜಗದ್ಬ್ರಹ್ಮೇತಿಯಂಜಗುರೆನೆ || 33 ||

ಒತ್ತಿವೇದಾಸ್ತಮೆನೆರುದ್ರಂ ಶರಣಮೆಂದೆ | ನುತ್ತುಂವ್ರಜಯೆನೆಸೂರ್ಯಪುರಾಣಮಂತೆತದೆ | ನುತ್ತೆ ನಿತ್ಯಂಪರಂ ಬ್ರಹ್ಮೇತಿಯಿನೆಸ ಏಕೋಯೆನುತೆ ರುದ್ರೋಯೆನೆ || ಬಿತ್ತರಿಸುತುಂ ಸ ಈಶಾನಃ ಸಭಗವಾನೆ । ನುತ್ತೆ ಸಮಹೇಶ್ವರೋಯೆಂದೆನುತ್ತೆ ಸಏಂದೆ । ನುತ್ತುಮೇಗಂ ಮಹಾದೇವೋಯೆನೆಯಥರ್ವಮಂತ್ರೆ §ತತ್ಪರಮೆನುತ್ತೇ || 34 ||

---

‡ ಬ್ರಹ್ಮವಿದಾಪ್ನೋತಿ—

* ಯಸ್ಮಾದ್ದಿಮಾನಿ ಭೂತಾನಿಜಾಯಂತೇ ಯೇನತಾನಿಚ ಜೀವಂತಿಯತ್ರಲೀಯಂತೇ | ತದ್ಬ್ರಹ್ಮೇತ್ಯಾದರೇಣತು | ತಸ್ಯಸಾಧಾರಣಾ ಮೂರ್ತಿಸ್ಸಾಂಬಾಚಂದ್ರಾರ್ಧಶೇಖರಾ ನೀಲಗ್ರೀವಾತ್ರಿಣೇತ್ರಾಚ ಬ್ರಹ್ಮಸೂತ್ರಸಮನ್ವಿತಾ | ಈದೃಶೀಪರಮಾ ಮೂರ್ತಿರ್ಯಸ್ಯ ಸಾಧಾರಣಾಪರಾ| ತದೇವಪರಮಂ ಸಾಕ್ಷಾತ್ಪರಂ ನಾನ್ಯನ್ನಸಂಶಯಃ| ಪರಬ್ರಹ್ಮ ಸಈಶಾನೋ ಏಕೋರುದ್ರಸ್ಸ ಏವಚ | ಭವಾನ್ಮಹೇಶ್ವರಸ್ಸಾಕ್ಷಾನ್ಮಹಾ ದೇವೋನಸಂಶಯಃ | ಯಸ್ಮಾಂತನಾಘ್ನಿಭೂತಾನಿ| ಯೇನೇದಂ ಭ್ರಾಮ್ಯತೇಜಗತ್|ಬ್ರಹ್ಮೇತಿಯಂ ಜಗುರ್ವೇದಾಸ್ತಂ ರುದ್ರಂಶರಣಂ ವ್ರಜ|ಸೂರ್ಯಪುರಾಣ

§ ತತ್ಪರಂಬ್ರಹ್ಮ ವಿಭಾತಿನತತ್ರ ದೇವಾನರ್ಷಯೋನಪಿತರೋನ ಈಶತೇಪ್ರತಿ ಬುಧ್ಯಸ್ವ—ಸರ್ವಂಬುಧ್ಯೇತಿಸಶಿವ ಏಕೋದೇವಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವಭೂತಾಂತರಾತ್ಮಾ:—ಬ್ರಹ್ಮೋಪನಿಷತ್

ಸಂತತಂಬ್ರಹ್ಮಯೆನುತೆ ವಿಭಾತಿನಯೆನುತ್ತು। ಮಂತೆತತ್ರಯಿನೆದೇವಾನಷರ್ಯೋಯೆನು। ತ್ತುಂ ತವೆನಪಿತರೋನ ಈಶತೇಪ್ರತಿಯೆನುತೆ ಬುಧ್ಯಸ್ವಸರ್ವಮೆನುತೆ ।। ಮುಂತೆಬುಧ್ವೇತಿ ಸಶಿವೋಯೆಂದೆನುತೆವಲಂ । ಸಂತಸದಿನೇಕೋಯೆತ್ತಿದೇವೊಯೆನು । ತ್ತಂತಿರದೆಸರ್ವಭೂತೇಷು ಗೂಢಃಸ್ಸರ್ವಯೆಂದದೇವ್ಯಾಪೀಯೆನೆ ।। 35 ।।

ಪ್ರೀತಿಯಿಂಸರ್ವಭೂತಾಂತರಾತ್ಮಾ ಯೆನು । ತ್ತೀತೆರದಿನಿದೆವಲಂ ಬ್ರಹ್ಮೋಪನಿಷದುಕ್ತಿ । ಮಾತೇಂ † ಋತಂಸತ್ಯಮೆನೆ ಪರಬ್ರಹ್ಮಪುರುಷಂ ಕೃಷ್ಣಪಿಂಗಲಮೆನೆ ।। ರೀತಿಯಿಂದೂರ್ಧ್ವರೇತಂ ವಿರೂಪಾಕ್ಷಮೆನು । ತೋತುತಾಂ ವಿಶ್ವರೂಪಾಯವೈಯೆಂದೆನುತೆ । ಶಾತದಿಂದಂ ನಮೋಯೆನೆ ಯಜುರ್ವೇದಂಋತಂ ಸತ್ಯಮೆಂದನುತ್ತುಂ ।। 36 ।।

ವಲಮುದೆ § ಪರಬ್ರಹ್ಮ ಪುರುಷಮೆನೆ ಕೃಷ್ಣಪಿಂ । ಗಲಮೆನುತುಮೂರ್ಧ್ವರೇ ತಂತವಿಶಾಶಾನಮೆಂ । ದುಲಿವುತುಂತನ್ಮೇಮನಃ ಯೆಂದೆನುತ್ತೆ ಶಿವಸಂಕಲ್ಪಮಸ್ತು ಎನುತೆ।। ಎಲೆಲೆ ಶಿವಸಂಕಲ್ಪಮಿದೆ ‡ ಋತಂಸತ್ಯಮೆನೆ । ಸಲೆಪರಬ್ರಹ್ಮಪುರುಷಂ ಸೋಮಮೆಂದೆನುತೆ । ನಲಿದೀಶ್ವರಮೆನುತ್ತುಮೂರ್ಧ್ವರೇತಸಮೆನುತುಮುತ್ಪತ್ತಿಯೆಂದೆನುತ್ತುಂ ।। 37 ।।

---

† ಋತಂಸತ್ಯಂಪರಬ್ರಹ್ಮಪುರುಷಂಕೃಷ್ಣಪಿಂಗಳಂ । ಊರ್ಧ್ವರೇತಂವಿರೂಪಾಕ್ಷಂ ವಿಶ್ವರೂಪಾಯವೈನಮಃ—ಯಜುರ್ವೇದ.

* ತಮೋಃಕಂಪುರುಷಂ ರುದ್ರಂ ಪುರುಹೂತಂಪುರರುಷ್ಟುತಂ। ಗಹ್ವರಂಗಗನಾಂ ತಸ್ಥಂ। ರೇಖಾಯಾಶ್ಚೋರ್ಧ್ವತಸ್ಥಿತಂ ।। ತತ್ರಾಪಿರಂಧ್ರಂಗಗನ ಮೋಂಕಾರಂ ಪರಮೇಶ್ವರಂ ।। ವಾಲಾಗ್ರಮಾತ್ರಂತನ್ಮಧ್ಯೇ । ಋತಂಪರಮಕಾರಣಂ ।। ಸತ್ಯಂ ಬ್ರಹ್ಮಮಹಾದೇವಂ । ಪುರುಷಂಕೃಷ್ಣಪಿಂಗಳಂ । ಊರ್ಧ್ವರೇತಂ ತಮೀಶಾನಂ ವಿರೂಪಾಕ್ಷಮಜೋದ್ಭವಂ । ಲೈಂಗ್ಯ

§ ಋತಂಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಳಂ । ಊರ್ಧ್ವರೇತಂತಮೀಶಾನಂ ತನ್ಮೇಮನಶ್ಶಿವ ಸಂಕಲ್ಪಮಸ್ತು—ಶಿವಸಂಕಲ್ಪೋಪನಿಷತ್.

‡ ಋತಂಸತ್ಯಂ ಪರಬ್ರಹ್ಮಪುರುಷಂ ಸೋಮಮೀಶ್ವರಂ ಊರ್ಧ್ವರೇತಸಮುತ್ಪತ್ತಿ ಸ್ಥಿತಿ ಸಂಹಾರಕಾರಣಂ ವಿಶ್ವರೂಪಂ ವಿರೂಪಾಕ್ಷಂ ಚಂದ್ರಮೌಳಿಂ ಘೃಣಾನಿಧಿಂ । ಹಿರಣ್ಯಬಾಹು ಮದ್ವಂದ್ವಂ ಹಿರಣ್ಯಪತಿಮೀಶ್ವರಂ ಅಂಬಿಕಾಯಾಃ ಪತಿಂ ಸಾಕ್ಷಾದುಮಾಯಾಃ ಪತಿಪುಕ್ರಿಯಂ । ಪರತತ್ವಸಮಾಖ್ಯಂ ಚಶಿವಂಧ್ಯಾಯಂತಿ ಸಂತತಂ ।। ತೈತ್ತಿರೀಯಶ್ರುತಿಸ್ಸಾಧ್ವೀ ಪ್ರಾಹೈವಖಲುಸಾದರಂ ।। ಮಾನವ ಪುರಾಣಂ.

ಸ್ಥಿತಿಯೆನುತೆ ಸಂಹಾರಕಾರಣಮೆನುತ್ತಮಲ | ಮತಿಯಿಂದೆ ವಿಶ್ವರೂಪಂ ವಿರೂಪಾಕ್ಷಮೆನು | ತತಿಶಯದೆ ಚಂದ್ರಮೌಲಿಂ ಘೃಣಾನಿಧಿಯೆನುತ್ತೆ ಹಿರಣ್ಯಬಾಹುಮೆನುತೆ || ಸತತಮದ್ವಂದ್ವಂ ಹಿರಣ್ಯಪತಿಯೀಶ್ವರ ಮೆ | ನುತು ಮಂಬಿಕಾಯಾಃ ಪತಿಮೆನುತ್ತೆ ಸಾಕ್ಷಾದೆ | ನುತು ಮುಮಾಯಾಃ ಪತಿಮೆನುತು ಮಕ್ರಿಯಮೆನುತ್ತೆ ಪರತತ್ವಯೆಂದೆನುತ್ತುಂ || 38 ||

ಅಂತುಟುಸಮಾಖ್ಯಂಚ ಶಿವಮೆನಲ್ ಧ್ಯಾಯಂತಿ | ಸಂತತಂ ತೈತ್ತಿರೀಯಶ್ರುತಿಃ ಯೆಂದೆನು | ತ್ತುಂ ತೀವಿಸಾಧ್ವೀಯೆನುತ್ತೆ ತಾಂಪ್ರಾಹ್ರೈವಖಿಲು ಸಾದರಂದಲೆನುತೇ || ಇಂತುಮಾನವಪುರಾಣಂ ‡ ತಮೇಕಮೆನುತ್ತೆ | ಸಂತಸದೆ ಪುರುಷಮೆನುತುಂ ರುದ್ರಮೆಂದೆನು | ತ್ತುಂ ತತ್ವಮಾಗಿ ಪುರುಹೂತಂ ಪುರುಷ್ಟುತಂಗಹ್ವರಂಗಗನ ಎನುತುಂ || 39 ||

ಅನುವಿನಿಂದಂತಸ್ಥಮೆನುತೆರೇಖಾಯಾಶ್ಚ | ಯೆನುತೂರ್ಧ್ವತಸ್ಥಿತಂ ತತ್ರಾಪಿರಂಧ್ರಂಗ | ಗನಮೆನುತು ವೋಂಕಾರಮೆನುತೆ ಪರಮೇಶ್ವರಂವಾಲಾಗ್ರಯೆನುತೆವಾತ್ರಂ|| ಎನುತೆತನ್ಮಧ್ಯೇಖುತಂ ಪರಮಕಾರಣಂ ಎ | ನುತೆ ಸತ್ಯಂ ಬ್ರಹ್ಮಯೆನೆ ಮಹಾದೇವಮೆಂ | ದೆನೆ ಪುರುಷಮೆನೆ ಕೃಷ್ಣಪಿಂಗಳಮೆನುತು ಮೂರ್ಧ್ವರೇತಂತಮೆಂದೆನುತ್ತುಂ || 40 ||

ಅನಿಶವೀಶಾನಮೆನುತುಂ ವಿರೂಪಾಕ್ಷ ಮೆಂ | ದೆನುತಜೋದ್ಭವಮೆನುತೆ ಲೈಂಗ್ಯವಾತೆರದೊಳಿದೆ | ಘನದೆ * ಪರಮಾತ್ಮಾನಮಾನಂದ ಮೆನುತೆ ಪರಮಾಕಾಶಮೆನುತೀಶ್ವರಂ || ಎನೆಋತಂಸತ್ಯಂ ಪರಬ್ರಂಹಸಾಂಬ ಮೆಂ | ದೆನುತೆ ಸಂಸಾರಭೇಷಜ ಮೂರ್ಧ್ವರೇತಮೆಂದೆನೆ ವಿರೂಪಾಕ್ಷಮೆನುತುಂ ವಿಶ್ವರೂಪಮೆನುತುಂ ಮಹೇಶ್ವರಮೆನುತಿದೇ || 41 ||

---

‡ ತಮೇಕಂಪುರುಷಂರುದ್ರಂ ಪುರುಹೂತಂ ಪುರುಷ್ಟುತಂ [ ಗಹ್ವರಂಗಹನಾಂತಸ್ಥಂ ರೇಖಾಯಾಶ್ಚೋರ್ಧ್ವತಸ್ಥಿತಂ || ತತ್ರಾಪಿರಂಧ್ರಂಗಗನ ಮೋಂಕಾರಂಪರಮೇಶ್ವರಂ | ವಾಲಾಗ್ರಮಾತ್ರಂ ತನ್ಮಧ್ಯೇ ಋತಂಪರಮಕಾರಣಂ || ಸತ್ಯಂಬ್ರಹ್ಮಮಹಾದೇವಂ ಪುರುಷಂಕೃಷ್ಣಪಿಂಗಳಂ | ಊರ್ಧ್ವರೇತಂತಮೀಶಾನಂ ವಿರೂಪಾಕ್ಷಮಜೋದ್ಭವಂ—ಲೈಂಗ್ಯ.

* ಪರಮಾತ್ಮಾನಮಾನಂದಂ ಪರಮಾಕಾಶಮೀಶ್ವರಂ | ಋತಂಸತ್ಯಂಪರಬ್ರಹ್ಮ ಸಾಂಬಂ ಸಂಸಾರಭೇಷಜಂ | ಊರ್ಧ್ವರೇತಂವಿರೂಪಾಕ್ಷಂ ವಿಶ್ವರೂಪಂಮಹೇಶ್ವರಂ—ಸೂತಸಂಹಿತಾ.

27

ಸೂತಸಂಹಿತೆಬಳಿಕೆ * ತೇನೇದಮೆಂದೆನು| ತ್ತೋತುಪೂರ್ಣಮೆನೆ ಪುರು ಷೇಣಸರ್ವಮೆನುತ್ತು | ಪಿಾತೆರದಿನುಪನಿಷತ್ತಿದೆ ‡ ಪುರುಷಏವೇದಮೆನೆ ಸರ್ವ ಮೆನುತೆಯದೆನೆ || ಭೂತಮೆನೆ ಯಚ್ಚಭವ್ಯಮೆನೆ ಪರಮಯಜುಸ್ಸು | ಪೂತ ತ್ವದಿಂದೆ § ಸರ್ವಂವ್ಯೈಖಲುಯೆನುತ್ತೆ | ಮಾತೇನಿದಂ ಬ್ರಹ್ಮಸರ್ವೋಯೆನುತ್ತೆ ವೈರುದ್ರೋಯೆನುತ್ತೆಮತ್ತಂ || 42 ||

ಏನೆಂಬೆನೀಶ್ವರಃ ಪುರುಷೋಯೆನುತ್ತೆ ಸು | ಜ್ಞಾನದಿಂ ವೈಮಹಾದೇ ವೋಯೆನುತೆ ಮಹೇ | ಶಾನಃ ಪರಶ್ಶಿವೋಯೆಂದೆನುತ್ತಂತಿರೇವಂವಿಧೋಯೆಂ ದೆನುತ್ತುಂ || ಆನಂದದಿಂಮಹಾದೇವೋಯೆನುತೆ ಮಹೇ | ಶಾನಃ ಪರಶ್ಶಿವೋ ಯೆನೆ ಲೈಂಗ್ಯಮವಿರತಮ | ನೂನದಿಂ † ಬ್ರಹ್ಮರುದ್ರಸ್ತಥೇಶಾನ ಈಶೋ ಯೆನುತ್ತಾತ್ಮಾಯೆನೆ || 43 ||

ಪ್ರೇಮದೆಪರೋಕ್ಷರೊಯೆನುತೇವಮಾದೀನಿ | ನಾಮಾನಿಯೆಂದೆನುತೆ ತಸ್ಯಏಂದೆನುತತಿ | ಕ್ಷೇಮದಿನಸಾಧರಣಾನಿವೈತಸ್ಯಸಾಧಾರಣಾ ಸ್ಯೇವನ್ನೈವ|| ನಾಮಾನಿಕೇವಲಮೆನುತೆ ಶಿವೋಯೆಂದೆನುತೆ | ರಾಮಣೀಯದೆ.ಶಂಕರೋ ಯೆಂದೆನುತೆಬಳಿ | ಕ್ಕೇಮಾತೊವಾದಿ ಈಶಾನೋಯೆನುತ್ತೆ ಶರ್ವೋಯೆನುತೆ ರುದ್ರೋಯೆನೆ || 44 ||

---

* ತೇನೇದಂಪೂರ್ಣಂಪುರುಷೇಣಸರ್ವಂ—ಉಪನಿಷತ್.

‡ ಪುರುಷಏವೇದಂಸರ್ವಂಯದ್ಭೂತಂಯಚ್ಚಭವ್ಯಂ—ಯಜುಸ್ಸು.

§ ಸರ್ವಂವ್ಯೈಖಲ್ವಿದಂಬ್ರಹ್ಮ ಸರ್ವೋವೈರುದ್ರಈಶ್ವರಃ | ಪುರುಷೋವೈಮಹಾದೇವೋ ಮಹೇಶಾನಃಪರಶ್ಶಿವಃ | ಏವಂವಿಧೋಮಹಾದೇವೋ ಮಹೇಶಾನಃಪರಶ್ಶಿವಃ—ಲೈಂಗ್ಯ

† ಬ್ರಹ್ಮರುದ್ರಸ್ತಥೇಶಾನ ಈಶಆತ್ಮಾಹರೋಕ್ಷರಃ | ಏವಮಾದೀನಿನಾಮಾನಿ ತಸ್ಯಾಸಾ ಧಾರಣಾನಿವೈ || ತಸ್ಯಸಾಧಾರಣಾನ್ಯೇವ ನೈವನಾಮಾನಿಕೇವಲಂ | ಶಿವಶ್ಶಂಕರಈಶಾನ ಶ್ಶರ್ವೋ ರುದ್ರಃಪರಂಪದಂ || ತತ್ಸಂಬ್ರಹ್ಮಮಹಾದೇವ ಈಶ್ವರಃಪರಮೇಶ್ವರಃ | ರೂಢ್ಯಾಶಿವಾದಿನಾಮಾನಿ ವರ್ತಂತೇಪರಮೇಪದೇ—ಸೌರಸಂಹಿತೆ.

ಅಸ್ತಿಶಂಪರಂ ಪದಂ ತತ್ವಮೆನುತುಂ ಬ್ರಹ್ಮ | ಯೆನುತೆ ಸಂತಸದಿಂ ಮಹಾದೇವ ಈಶ್ವರೋ | ಯೆನುತೆ ಪರಮೇಶ್ವರೋ ರೂಢ್ಯಾಶಿವಾದಿನಾಮಾನಿ ಯೆಂದೆನುತೆ ಬಳಿಕಂ || ಘನದೆವರ್ತಂತೇ ಯೆನುತ್ತೆ ಪರಮೇಪದೇ | ಯೆನುತುಮಿದೆ ಸೌರಸಂಹಿತೆ * ಶಿವಶ್ಯಂಭುರೆಂ | ದೆನುತುಂ ಪರಬ್ರಹ್ಮಸತ್ಯವಿಶಾನಯೆಂದೆನುತೀಶ್ವರೋ ಯೆನುತ್ತುಂ || 45 ||

ಏವಮಾದೀನಿನಾಮಾನಿತಾನಿಯೆನುತ್ತು | ಮೋವೃತಾಂರೂಢ್ಯಾಪರಾತ್ಮನೋಯೆಂದು ಸ | ದ್ಭಾವದಿಂದೊರೆವುತಿದೆ ಪಾರಾಶರ ಪುರಾಣವಿಂತನಂತಶ್ರುತಿಗಳುಂ || ಪಾವನೋಪನಿಷತ್ಪುರಾಣಸ್ಮೃತೀತಿಹಾ | ಸಾವಳಿಗಳುಂ ಪರಬ್ರಹ್ಮವೆನೆ ಬೇರಿಲ್ಲ | ಭಾವಿಸೆ ಶಿವಾದಿನಾಮದೊಳೊಂದು ನಾಮವೆಂದುಲಿವುತಿವೆತನ್ನಿಮಿತ್ತಂ || 46 ||

ಆಪರಬ್ರಹ್ಮಂ ನಿರಾಕಾರವೀಪಾರ್ವ | ತೀಪನಾಕಾರಂ ಪರಬ್ರಹ್ಮವಲ್ತೆಂದು | ಪಾಪಿನೀನಿಂತು ಕಾಳ್ಗೆಡೆಯದಿರ್ದುನ್ನಿಂತು ನುಡಿವಾಸನತ್ಸುಜಾತಂ || ಶಾಪಂಬಡೆದು ದಿವ್ಯವತ್ಸರಸಹಸ್ರವನು | ತಾಪಿಸುತ್ತುಷ್ಟ್ರವಾಗಿರನೇ ಬಿಡಾಮಾತ | ನೇ ಪರಿಯೊಳಂ ಶ್ರೀಶಿವಾದ್ವೈತಸಾಕಾರಸಿದ್ಧಾಂತಮೇ ಪ್ರಮಾಣಂ || 47 ||

ಎಂದಿಂತು ಪದ್ಮಣಾರ್ಯಪ್ರತಿಷ್ಠಿಸಿ ವಿಬುಧ | ವೃಂದಂಪೊಗಳೆಯಾಬಿರುದನಾಂತುಸಿರ್ದರೀಶ | ನಂದವಾರ್ಗರಿಯಲಕ್ಕುಂ † ಚಕಿತಮೆನುತುಮಭಿಧತ್ತೇಶ್ರುತಿಯೆನೆಯತೋ || ಎಂದುವಾಚೋನಿವರ್ತಂತೇ ಯೆನುತ್ತೆ ಮುದ | ದಿಂದಮಪ್ರಾಪ್ಯಮನಸಾಸಹ ಯೆನಲ್ಪಲವ | ರಿಂದಮೇಂಪೇಳಲುಂ ನುಡಿಯಲುಂ ನೆನೆಯಲುಂ ನಿನ್ನೆನ್ನ ತನ್ನಪವಣೇ || 48 ||

---

* ಶಿವಶ್ಯಂಭುಃ ಪರಬ್ರಹ್ಮಸತ್ಯವಿಶಾನ ಈಶ್ವರಃ | ಏವಮಾದೀನಿನಾಮಾನಿತಾನಿರೂಢ್ಯಾ ಪರಾತ್ಮನಃ—ಪಾರಾಶರ ಪುರಾಣ.

† ಚಕಿತಮಭಿಧತ್ತೇಶ್ರುತಿರ್ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ.

ವಿನಯದಿಂ § ಬ್ರಹ್ಮಾಯೆನುತ್ತೆ ವಿಷ್ಣ್ವಿಂದ್ರಯೆಂ । ದೆನುತೆ ಚಂದ್ರಾದ್ಯಾಯೆನುತೆಯಸ್ಯದೇವಸ್ಯ । ಯೆನೆಕಿಂಕರಾಯಸ್ಯ ಯೆನುತುಂ ಪ್ರಸಾದಾದೆನುತ್ತೆ ಜೀವಂತಿಯೆನುತೆ॥ ಅನುವಿಂಸದೇವೋಯೆನುತೆ ಪಾರ್ವತೀಪತಿಃ । ಯೆನಲಜಹರೀಂದ್ರ ಚಂದ್ರಾದ್ಯರಾವಂಗೆ ಭೃ।ತ್ಯನಿಕಾಯಮಾವಾತನಾಪ್ರಸಾದದೆ ಜಾಳ್ವರಾದೇವನಗಜಾಧಿಪಂ ॥ 49 ॥

ಅರರೇ ‡ ನಜಾನಂತಿಯೆನೆ ಪರಂಭಾವಮೆನೆ । ಕರಮೆಯಸ್ಯಯೆನೆಮೇಣ್ ಬ್ರಹ್ಮಾದಯೋಯೆನುತೆ । ಭರದಿಂ ಸುರಾಃ ಯೆನುತ್ತದ್ಯಾಪಿನವಯಮೆನೆವಿದ್ಮಃ ಸದೇವೋಯೆನೆ ॥ ಹರಿಸದಿಂತ್ರಿಪುರಾಂತಕೋ ಯೆನಲಜಾದ್ಯಖಿಲ । ಸುರರಾವನುರು ಭಾವಮಂ ತಿಳಿಯಂಾವುಮದ । ರಿರವನೀಗಳುಮರಿಯೆವಂತಪ್ಪದೇವಂ ಪುರತ್ರಯಾಂತಕನೆನಿಕ್ಕುಂ ॥ 50 ॥

ಸಲೆ † ವಿಶ್ವತಶ್ಚಕ್ಷುರೀಶೋಥಯೆಂದೆನು । ತ್ರ್ರೊಲವಿಂತ್ರಿಶೂಲೀಯೆನುತೆ ವಿಶ್ವತೋಯೆನು । ತ್ತೆಲೆಮುಖೋಯೆನುತೆ ಜನಕಃ ಸರ್ವಯೆನುತೆ ಭೂತಾನಾಮೆನುತೆ ಸಹಜದಿಂ ॥ ಉಲಿದೇಕ ಏವಯೆನುತೆ ಮಹೇಶ್ವರೋಯೆನಲ । ಖಿಲನೇತ್ರನೀಶಂತ್ರಿಶೂಲಿಯುಖಿಲಮುಖಿಂ ವಿ । ಮಲನಖಿಲ ಭೂತಜನಕಂ ಮಹೇಶ್ವರನೋರ್ವನೇದ್ವಿತೀಯಂದಲುಂಟೇ ॥ 51 ॥

* ನಯಥಾಯೆನುತೆ ಕೂರ್ಮರೋಮಾಣಿಯೆಂದೆನುತೆ । ನಯದೆದಲ್ ಶೃಂಗಂನನರಮಸ್ತಕೇಯೆನುತೆ । ನಯಥಾಸ್ತಿಯೆನೆವಿಯತ್ಪುಷ್ಪಂ ನಯನೆ ತಥಾಸ್ತಿಹರಾತ್ಪರೋ ಎಂದೆನೆ ॥ ನಿಯತಿಯಿದು ಕೂರ್ಮಂಗೆ ರೋಮವಿಲ್ಲೆಂತುಟಾ। ಶಯೆಕೋಡು ಮನುಜಮಸ್ತಕದೊಳೆಂತಿಲ್ಲನಿ । ಶ್ಚಯಮಾಗರಲ್ನಭದೊಳ್ಪ್ಲೆಂತುಟಂತೆಹರನಿಂದಧಿಕಮಿಲ್ಲಿದುನಿಜಂ ॥ 52 ॥

---

§ ಬ್ರಹ್ಮಾವಿಷ್ಣ್ವಿಂದ್ರಚಂದ್ರಾದ್ಯಾಯಸ್ಯ ದೇವಸ್ಯ ಕಿಂಕರಾಃ । ಯಸ್ಯ ಪ್ರಸಾದಾಜ್ಜೀವಂತಿಸದೇವಃ ಪಾರ್ವತೀಪತಿಃ—

‡ ನಜಾನಂತಿಪರಂಭಾವಂ ಯಸ್ಯಬ್ರಹ್ಮಾದಯಸ್ಸುರಾಃ । ಅದ್ಯಾಪಿನವಯಂ ವಿದ್ಮಸ್ಸದೇವಸ್ತ್ರಿಪುರಾಂತಕಃ ।

† ವಿಶ್ವತಶ್ಚಕ್ಷುರೀಶೋಥತ್ರಿಶೂಲೀ ವಿಶ್ವತೋಮುಖಃ । ಜನಕಸ್ಸರ್ವಭೂತಾನಾಮೇಕ ಏವಮಹೇಶ್ವರಃ—

* ನಯಥಾಕೂರ್ಮರೋಮಾಣಿ ಶೃಂಗಂನನರಮಸ್ತಕೇ । ನಯಥಾಸ್ತಿವಿಯತ್ಪುಷ್ಪಂ ನತಥಾಸ್ತಿಹರಾತ್ಪರಃ—

ಮತ್ತೆಕೇಳ್ ‡ ಶೃಣ್ವಂತುದೇವತಾಃ ಸರ್ವಾಃಯೆ | ನುತ್ತೆಯ್ದೆ ಸತ್ಯಮಸ್ಮ ತ್ಪರಮೆನುತೆಭಾಷಿ | ಸುತ್ತುಂವಚಃ ಯೆನುತೆನಾಸ್ತಿರುದ್ರಾನ್ಮಹಾದೇವಾದಧಿಕ ಮೆನುತ್ತೇ || ಬಿತ್ತರಿಸಿದೇವತಾಂತರಮೆನಖಿಲಸುರರ | ವೊತ್ತವಾಲಿಪುದೆಮ್ಮ ಘನಸತ್ಯವಾಕ್ಯಮಂ | ಸುತ್ತೇನೊರುದ್ರನೆನಿಸುವ ಮಹಾದೇವಂಗಧಿಕದೈವವಿಲ್ಲೆ ಲ್ಲಿಯುಂ || 53 ||

ಇಂತು ವೇದಂಗಳ್ಮಹೇಶನೇ ಪರವೆಂದ | ನಂತಪ್ರಕಾರದಿಂಬಣ್ಣಿಸಿದವೀ ಕಥನ | ಮಂತಿಳಿಸಿತಾದಿತ್ಯಪೌರಾಣವಿನ್ನೆನೆಯದಿರು ಹರಿಗಿರಿಯಸುದ್ದಿಯಂ || ಭ್ರಾಂತಕೇಳ್ವೇದಾದಿಯೊಳ್ ಸ್ವರಮದಾವುದದ | ರಂತದೊಳ್ಸುಪ್ರತಿಷ್ಠಿತ ಮಾವುದಾಪ್ರಣವ | ದಂತಸ್ಥನೀಶನಜಹರಿಗಳಲ್ಲಿಗೆ ಸಲ್ಲರಿದುತೈತ್ತಿರೀಯಸಿ ದ್ಧಂ || 54 ||

ಆವನಂತರ್ಯಾಮಿರೂಪದಿಂದೆಮ್ಮಬು | ದ್ಧ್ಯಾವಲಿಗಳಂಪ್ರೇರಿಸುವನಂತೆ ಸೆವಮಹಾ | ದೇವನುರುತೇಜವಜ್ಞಾತಂ ರವಿಗೆರವಿವರೇಣ್ಯಂ ಪರಮಕಾರಣಂ|| ಸೇವಿಸುತ್ತಿರ್ಪವಾವದನೆಂಬವೇದಮನ | ಹೋವಿಸ್ತರಿಸಿ ಸಾರುಗುಂ ಸ್ಕಾಂದ ವಂತಳಿನು | ಮಾವರಂಗಾಯತ್ರಿಯಿಂಸೇವ್ಯನಲ್ಲದಜಹರಿಗಳದರಿಂಸೇವ್ಯರೇ || 55 ||

ಸರ್ವಾಕ್ಷರಾಳಿಗೀಶ್ವರನೊಡೆಯನೆಂದಿದೆಯ | ಜುರ್ವೇದವಾತೆರದೆಸರ್ವ ವಿದ್ಯಾಳಿಗಂ | ಪಾರ್ವತೀಪತಿಯೆಂದದೇಪೇಳುತಿದೆ ಯಿವರೊಳಜಹರಿಗಳೆಣಿಕೆ ಮುಂಟೇ|| ಪಾರ್ವಕೇಳ್ಪರೆವಿತರ್ಕವಿಪುಲೆಪರಂಜ್ಯೋತಿ | ಶರ್ವಧರ್ಮಿಣಿಲಿಂ ಗಮೂರ್ತಿ ಸುಜ್ಞಾನಾದಿ | ಸರ್ವರೂಪಿಣಿಶಿವಸ್ವಾಭಾವಿಕಸುಶಕ್ತಿಯುಮೆಯೆಂ ಮುವೇದಸಿದ್ಧಂ || 56 ||

ಈವಿಶ್ವವಂಸೃಜಿಸುವಲ್ಲಿ ಶಂಭುವಿನ ಲೀ | ಲಾವಿಡಂಬನದ ಹೊರಗುಂ ಡನಾಗಿರ್ಪುದರಿ | ನಾವಿಷ್ಣುಗಾಗುದು ಕಲತ್ರಾಖ್ಯೆಯಾಶಿವನಬೀಜಂ ಪ್ರವ ರ್ತಿಪುದರಿಂ || ಭಾವಿಸಲ್ಕ್ಷೇತ್ರಾಖ್ಯೆಯಾಯ್ತು ಶಿವವೀರ್ಯಮಂ | ಶ್ರೀವರಂ ತಾಳ್ದುದರಿನಾಯ್ತು ಪ್ರಕೃತಿನಾಮ | ನಾವಿಭುವಿನುರುತೇಜದಿಂ ತತ್ಪ್ರಪಂಚ ಮಂಪೆರಲಾಯ್ತು ಯೋನಿನಾಮಂ || 57 ||

---

‡ ಶೃಣ್ವಂತು ದೇವತಾಸ್ಸರ್ವಾಸ್ಸತ್ಯ ಮಸ್ಮತ್ಪರಂವಚಃ | ನಾಸ್ತಿರುದ್ರಾನ್ಮಹಾದೇವಾದಧಿ ಕಂದೇವತಾಂತರಂ—ಆದಿತ್ಯಪುರಾಣ.

ಅರರೆಗಭರ್ಾಷ್ಟಕದೊಳಾತ್ಮರಶಿವಜ್ಞಾನ । ದಿರವನಳಿವುದರಿನಾಮಾ ಯಾಖ್ಯೆಯಾಯ್ತುವರ ।ನುರುವಿಷಮ ಸಂಸೃತಿಯೊಳಗೆ ಕಟ್ಟಿಕೊಂಡಿರ್ಪುದರಿನಾಯ್ತು ಪಾಶನಾಮಂ ॥ ಹರನೆಸಪಸ್ಯವ್ಯಾದಿಯ ಹಿರಣ್ಮಯಾಂಡ ಕಾ । ಕರವಾರಿಯಾದುದರಿನಾದುದು ಜಲಾಖ್ಯವೀ । ಪರಿಯನಾಶ್ರುತಿ ಪುರಾಣಾದಿಗಳ್ ಸಾರುತಿರೆ ಹರಿದೈವವೆಂತಾದನೈ ॥ 58 ॥

ಅನುವದಿಸಿ † ತಚ್ಛೇಪಸೋಪಿಮಾಹಾತ್ಮ್ಯಮೆಂ । ದೆನೆ ಯುವಾಂದ್ರಷ್ಟುಂನಹಿಕ್ಷವೌಸೂರಯೋ । ಯೆನೆ ಯತ್ರಪಶ್ಯಂತಿಯೆನಿಪತದ್ವಿಷ್ಣೋಃ ಪರಮಮೆನಿಪ ಪದಮೆನಿಪ್ಪಾ ॥ ಮಿನುಪಪರಪುರುಷಲಿಂಗಂಬೊತ್ತು ತಮ್ಮತ।ಮ್ಮಿನಿಯರ್ಗೆ ವಾಣೀಂದಿರಾದಿಸತಿಯ ಪ್ರಾರ್ಣ । ವಸಿತೆಯರೆನಿಸಿ ಬಾಳ್ವರಲ್ಲಿವುತ್ಸರಿಪನಾವಂ ಸ್ಕಾಂದಮಿಂತೊರೆವುದು ॥ 59 ॥

ದಾಮೋದರನವಿಧಿಯನೇವೇಳ್ದಪೆಂ ಪಾದಿ । ಭೂಮಿಗೋಮಿನಿಯರೀವರ್ನಿನ್ನ ಭಾರ್ಯೆಯರ್ । ಸಾಮಾನ್ಯದಿಂನರರ್ಗೆ ಪುದುವಾಳೆಹರಿನಿನ್ನ ಶರಣಪಾಲನಕಿನಿತುವುಂ ॥ ಸಾಮರ್ಥ್ಯಮೊದವದಿರ್ಕೆಂದು ದೂರ್ವಾಸನಧಿ । ಕಾಮರ್ಷದಿಂ ಶಪಿಸನೇಕ್ಷೀರಶರಧಿ ಮೇ । ಣಾಮುನಿಯಶಾಪದಿಂ ಸುರೆಯಾಗಕಾಶಿಗೆಯ್ತಂದು ಹರಿವಿಶ್ವಪತಿಯಂ ॥ 60 ॥

ತನ್ನರುಣಜಲದಿಂ ವಿಶುದ್ಧಾಮೃತದೆ ಭಕ್ತಿ । ಯಿನ್ನೀಡು ವಭಿಷವಂಗೆಯ್ಸಿತದ್ವಾರ್ಧಿಯಂ । ಮುನ್ನಿನಂದದೆಪಡೆದನೇ ಕೃಷ್ಣನೆರ್ದೆಕೃಷ್ಣಮಾಗದೇ ಮುನಿಪನೊದೆಯೆ ॥ ಇನ್ನೊರೆವುದೇನೊ ಹರಿರುಕ್ಮಿಣಿಗಳಾಮುನಿಪ । ನನ್ನಿಜರಥದೊಳಿಟ್ಟು ಪೆಗಲೋಳ್ನೊಗಂಬೊತ್ತು।ಚೆನ್ನಮರೆಮೆರೆಯಿಸರೆ ಅವನುಂಡುಮಿಕ್ಕುದುಮನುಂಡುಕರುಣಂಬಡೆಯನೇ ॥ 61 ॥

ವರಮುನಿದಧೀಚಿಯೊದೆದೊಡೆ ಹರಿಯುರಂ ಲಕ್ಷ್ಮಿ। ಗಿರಲಾಸ್ಪದಂದಲಾಗದೆ ಹರನಿನುಪಮನ್ಯು । ತರತರದವರಮನಮೃತಾಬ್ಧಿಯಂ ಪಡೆದೀಂಟುತಿರೆ ಮುನಿಯುಗಂಟಲಲ್ಲಿ ॥ ಮುರವೈರಿಸಿಲ್ಕಲೆಲ್ಲಿಯ ಕಸನಿದೆಂದುಗುಳೆ । ಚರಣದೋಳ್ಬೀಳ್ದು ನುತಿಗೆಯ್ದುತನ್ಮುನಿಪಂಗೆ । ಸರಸಿಜಾಕ್ಷಂ ಶಿಷ್ಯನಾಗಿರಲ್ ಕ್ಷೀರಾಬ್ಧಿಯಂಪಡೆದದೇಂ ಬರ್ದುಕನೇ ॥ 62 ॥

---

† ತಚ್ಛೇಪಸೋಃಪಿಮಾಹಾತ್ಮ್ಯಂ ಯುವಾಂದ್ರಷ್ಟುಂನಹಿಕ್ಷವೌ । ಸೂರಯೋಃಯತ್ರಪಶ್ಯಂತಿ ತದ್ವಿಷ್ಣೋಃಪರಮಂಪದಂ—ಸ್ಕಾಂದ.

ವರಚತುರ್ಥಿಯಪೆರೆಯನೀಕ್ಷಿಸಿ ನೆರೆದಪಳಿಗೆ|ವರರತ್ನಮಂಶ್ಯಮಂತಕವ ಸಾಂತಂದೆನ್ನಿದು | ಕರಮಾತ್ಮಶುಧ್ಯರ್ಥ ಮೆನ್ನಿಂದೆಯದುಕುಲಕೆ ಕಾಣಿಸಿತು ಹರಿಗಮೆನಗಂ || ಸರಿಯಾದಪಿತೃಧನವಿದಂ ಬ್ರಹ್ಮಚರ್ಯಗುಣ | ನಿರತಂಸದಾ ಶೌಚಿ ಧರಿಸುಗುಂ ಮಿಕ್ಕವ | ರ್ಧರಿಸೆ ಕೊಲ್ಗುಮಿದಖಿಲ ರಾಷ್ಟ್ರೋಪ ಕಾರಿ ಧಾರ್ಯಂಸತ್ಯಭಾಮೆಯಿನಿದೂ || 63 ||

ಎಲೆಲೆಯಕ್ರೂರಷೋಡಶ ಸಹಸ್ರಾಂಗನಾ|ಸ್ಖಲಿತಾತ್ಮನಾನಂತರಿಂ ಪೊರ ಲಶಕ್ತನೆಂ | ದುಲಿಯನೆ ಹರಿಯದರಿನವನಶುಚಿಕಾಮಿಕಡುಸಿತಗನೆಂದುಸಿರದೆ ಜನಂ || ಕುಲಧರ್ಮವಿದೆ ಗೋಪಗೋಪೀಜನಂಗೂಡಿ | ಹಲಿವರುಣನಟ್ಟಿದಕ ದಂಬಸ್ಥಮದ್ಯಮಂ | ಸಲೆಕುಡಿದುಕೊರ್ಬನೆಯವಂ ವಿಷ್ಣುವಲ್ತೆದೈವಂ ಸೀಘು ವಂಗ್ರಹಿಪುದೇ || 64 ||

ಅಂಬರೀಷಾವನಿಪಸುತೆಯ ಬಂಟಿಕೆಯಹರಿ | ಗಂಬರೀಷಂ ಮುಳಿಯ ನೆಅದಂಕಂಡು ಹರಿ | ಯಂಬಿಟ್ಟು ಪರ್ವತನುಮಾನಾರದನು ಮಜ್ಜನಾಗಿ ಪೆಂಡಿರನಗಲ್ದೂ || ಪಂಬಲಿಸೆನುತೆವಿಷ್ಣುವಂಶಪಿಸೆ ಶಂಭುಪಾ | ದಂಬಿಡಿಯರೇ ಅಮೃತಮಥನಜನಿತವಿಷಾಗ್ನಿ | ಯಿಂಬೆಂದು ಹರಿಯಸಿತಮೂರ್ತಿ ಕರಿಗೊರ ಡಾಗೆ ನೀಲಗಳನುದ್ಧರಿಸನೇ || 65 ||

ತ್ರಿಪುರದಹನಾರ್ಥಂತಪಂಗೆಯ್ದು ತದ್ರುದ್ರ | ಜಪಮಂಜಲಂಬೊಕ್ಕು ಕೋಟಿವಾರಂರಚಿಸಿ | ಕೃಪೆವಡೆಯನೇಮತ್ತೆ ಪಾದದೊಳ್ನೆಗಳ್ದದಂ ತಲೆಯಲ್ಲಿ ಪೊತ್ತುಮಾಳ್ಪಾ || ವಿಪುಲಸದ್ಭೃತ್ಯನೆಂದರಿಪುವೋಲ್ ಶಂಕರಂ | ಸ್ವಪದದಿಂ ದೊತ್ತಿ ತಳಕಿಳಿದಧರೆಯಿಂ ತೊರೆಯು | ಪರಿಗೆತ್ತನೇವೃಷಾಕೃತಿಯಾಂತು ಮೇ ಣಚ್ಯುತಂ ಶಂಭುಗಂಬಾಗನೇ || 66 ||

ತಾರಕವಧಾರ್ಥಮಿಂದ್ರಾದಿಗಳ್ಕೂಡಿ ಹರಿ | ಮಾರನಂ ಹರನಸಿಸಲಟ್ಟಿ ನಂದಿಗೆಸೆಡೆದು | ಚಾರುಮೃದುಸೀತಾತ್ತ ವಾಯುರೂಪದೆ ತೆಂಕಣಿಂಬಂದುದರಿ ನೀಗಳುಂ || ಸಾರಮಾದುದುತೆಂಬೆಲರ್ ಶರಂದೊಟ್ಟು ತ | ನ್ಮಾರನರುವತ್ತು ಸಾವಿರವರ್ಷಮಿರ್ದು ಪುರ | ವೈರಿನೋಳ್ಪುದು ಮೂರ್ಧ್ವರೇತನೆಂದರಿದುರಿವ ಸುತನಸರಿಬಿಟ್ಟೋಡನೇ || 67 ||

ಮುನ್ನವಿಳಿಮುಂ ಪ್ರಳಯಮೆಯ್ದಿಸಿಯದಂ ತಮ | ಚ್ಛನ್ನಂಗೆಯಿಸಿ ಶಂಭುವೋರ್ವನೆನಿಜದೊಳಿರುತೆ |ತನ್ನ ಶಕ್ತಿಕ್ಷೋಭಮಂ ಲೀಲೆಯಿಂಮಾಡಿಯಜ ಹರಿಗಳಂಪುಟ್ಟಿಸೆ || ತನ್ನಳಿನಜಾಚ್ಯುತರ್ತಮದಿ ನೀಶನನರಿಯ | ದುನ್ನತಲಯಾಬ್ಧಿಯೊಳ್ಮುಳುಗುತೇಳುತೆ ಬೀಳು | ತುನ್ನಡುಗುತರ್ಭಕರವೋಲಳುತಿರಲ್ಕವರವಸ್ಥೆಯಂನೋಡಿಭರ್ಗಂ || 68 ||

ತತ್ತ್ವಮವನಳಿದು ಕಿಂಚಿಜ್ಜ್ಞಾನಮಂ ಬಲವ | ನಿತ್ತು ಹತಭಯರನಾಗಿಸೆ ಕೊರ್ವಿ ತಂತಮ್ಮೊ | ಳುತ್ತರಾಧಃಪ್ರಸಂಗದೆಮಲ್ಲರೆನೆ ಸಹಸ್ರಾಬ್ದಮುಂನೆಣಸಿಬೀಳ್ದು || ಪತ್ತುವೋಗುತಿರೆ ಜೀವವನಿತ್ತು ಮಧ್ಯದ | ಲ್ಲುತ್ತುಂಗದಿವ್ಯಲಿಂಗಾಕೃತಿಯಿನುದಿಸೆಯನಿ | ಮಿತ್ತಬಂಧುವನೋಡಿ ಬೆರಗುವಟ್ಟೀನೆಂದರಿಯದೆ ತತ್ಕೃಪೆಯಿನಂದು || 69 ||

ಈಲಿಂಗದಿಂದೊಗೆದೆವೆಮಗೆ ಪತಿಯಿದುತಮೋ | ಜಾಲವನಿದಲೆದುದ ಸುವಿತ್ತುದಿದರಿಂದೆ ಸಂ | ಜ್ಞಾಲಾಭ ಮೂರ್ಛಾರ್ಥಬಲಜ್ಞಾನ ಯೋಗಯುದ್ಧಲಯಂಗಳೆಮಗೊದವುಗುಂ || ಮೂಲದೆಮಗೆಂಮುಜ್ಞತೆಯ ನಪಹರಿಸಿ ಜನಿಸಿ | ತೀಲಿಂಗದಡಿಮುಡಿಗಳಂಕಾಣ್ಬೆವೆಂದಜಂ | ಮೇಲನಡರ್ದುಂ ಹರಿಯಧಸ್ಸಿಂಗಿಳಿದುಮರಸಿಕಾಣದೆಸಹಸ್ರವರ್ಷಂ || 70 ||

ಪ್ರಸ್ತುತಮಿದಲ್ತೆಂದು ತಿರುಗಿವಿಧಿವಿಧುಗಳ್ ನ | ಮೋಸ್ತು ಶಿವಲಿಂಗಾಯ ಯೆಂದೀಶ್ವರದಿ ಬಹುವಿ | ಧಸ್ತುತಿಯನೆಸಗಿ ಯೊಡನೊಡನೆರಗೆ ತಲ್ಲಿಂಗದೊಳ್ ಶಿವಂದೃಶ್ಯನಾಗಿ || ಶಸ್ತಮಾಗೆಲ್ಲವನರಿಪಿ ಸೃಷ್ಟಿಯಂ ಸ್ಥಿತಿಯ | ನಸ್ತಿಮಿತದಿಂಮಾಡಿಮಾಜನರ್ನೀವೆ ಪರ | ವಸ್ತುವೆಂದುಲಿವನಿತು ಶಕ್ತಿಯಿತ್ತೆಂಪೋಗಿಮೆಂಬಲ್ಲಿವಿಷ್ಣುವೆಂದಂ || 71 ||

ಗುರುವೆಯವತಾರಶತಮುಂಧರಿಸಿ ದನುಜರಂ | ಹರಿಪೊಸಾಯುಧಮನೀಯೆನೆ ಶಿವಂತ್ರ್ಯಕ್ಷಮಂ | ಹರಿಸದಿಂಮುಚ್ಚಿ ಜಾನಿಸೆಯವರಿನಾತ್ರಿರೂಪದಿನಖಿಲರವಿಶೇಜದಿಂ || ಬಲೆಚಕ್ರವಲ್ಲಿಮಣಿಮಯವಾಗಿ ಷಡ್ದಾರೆ | ವೆರಸುಗದೆ ಪೊಣ್ಮೆ ಲೊಪಸುಷ್ಮಿಯಹಾಸ್ಯದಿಂ ಶಶಿ | ಸ್ಫುರಣಶಂಖಂಜನಿಸೆತನ್ನೇತ್ರದಿಂ ಮಾಲಯಂಸುವರ್ಣಾಬ್ಜಮೊಗೆಯೆ || 72 ||

ಆವನಭವನಸುರಾರಿಗೀವಲ್ಲೆರಡು ತೋಳೊ | ಳವು ನಾಲ್ಕನೆಂತಾಂ ಧರಿಸುವೆನೆನೆ ಶಂಕರಂ | ಶಿವೆಯಿಂದೆರಡು ತೋಳ್ಗಳಂಕೊಡಿಸೆ ಹರಿಚತುರ್ಭುಜ ನೆನಿಸನೇಮತ್ತವಂ || ತವೆತಾಳ್ದುತತ್ತ್ವದಾಖ್ಯಂ ಬಡೆಯನೇಯಿಂತು | ಶಿವನೀ ವೊಡಂ ಕಾಯ್ವೊಡಂ ತೆಗೆವೊಡಂ ಕರ್ತೃ | ವವಿವೇಕಿ ಹರಿಗೆದೈವತ್ವವೆಲ್ಲಿಯದು ನೀಂಪರಿಕಿಸೈಸ್ಕಾಂದದೊಳಿದಂ || 73 ||

ಬಳಿಕೆಕೃತಯುಗದಾದಿಯೊಳ್ಸುರರಸುರಬಾಧೆ|ಗಳವಳಿದು ದುಗ್ಧಾಬ್ಧಿ ಗೆಯ್ದಿ ಮೊರೆಯಿಡೆಕೇಳ್ದು | ನಳಿನಾಕ್ಷನಸುರರಂ ಕೊಲ್ವೆನಂಜದಿರಿಯೆಂದ ಮರರಂ ಕಳಿಪಿಕೊರ್ವಿ || ಜಳಜಜಶಿವರ್ ಕಾಯಲಾರ್ಪರೇಶೂಲಿಗಂ | ತಿಳಿ ಯಲಾಂಪರವೆಂದು ನೆನೆದೇಳ್ದುಚಕ್ರಮಂ | ಕೊಳಲೆಳಸೆಗಿರಿವೊಲದು ಚಲಿಸದಿರೆ ಶಕ್ತಿಗೆಟ್ಟು ಪೇಳ್ದೀಕ್ಷಿಸುವಿನಂ || 74 ||

ಹರನಮುರೆದವರಭಾಗ್ಯಂ ನೋಡನೋಡಲಿಂ | ತಿರದೆ ಬಯಲಪ್ಪುದೆಂದ ಭಿನಯಿಸಿ ತೋರುವೊಲ್ | ಭರದೆಚಕ್ರವದು ಬಯಲಾಗೆ ಪಂಬಲಿಸಿಗೋಳಿ ಟ್ಟು ಮೇಣ್ಸಾನೆತಿಳಿದು || ಪರಮಪತಿಯುಂ ಜನಕನಂ ವರದನಂ ಮರೆದೊ | ಡರಿದೆ ದುಸ್ಥಿತಿಯೊಗೆವುದಾ ಶಿವನನರ್ಚಿಸಿ ದೊ | ಡರರೆ ಚಕ್ರಾದ್ಯಖಿಲವಂ ಕೊಡುವನೆಂದು ನಿಶ್ಚಯಿಸಿಶುದ್ಧಾತ್ಮನಾಗಿ || 75 ||

ಸಲೆಯಥಾವಿಧಿಯಿನೀಶಾಣುವಂಜಪಿಸುತೆ ವಿ | ಮಲಶಂಭುಗೆ ಸಹಸ್ರ ಕಮಲಮಂ ನಿಚ್ಚಮವಿ | ಚಲನಿಯಮದಿಂದರ್ಪಿಸುತಿರೆ ತದ್ಭಕ್ತಿಯನರಿಯ ಲೊಂದರಲ್ಗುಂದಿಸೆ || ಮಲಹರನಮಾಯೆಯಿದೆನುತೆ ಹರಿನಿಜಾಂಬಕ ಕ | ಮ ಳಮಂ ತೆಗೆದುಸಮರ್ಪಿಸೆ ಮೆಚ್ಚಿ ಶಂಕರ ನ | ತುಲರೂಪಮಂತೋರೆ ಭಯ ಭಕ್ತಿಸಾತ್ವಿಕಾದಿಗಳಿನೊಡನೆರಗಿನಿಂದು || 76 ||

ಭಗವಾನ್ನೆನಿಪ ಮಹೇಶ್ವರನೀಂ ಪ್ರಸನ್ನನಾ | ಗಗಣಿತಾಹಂಕೃತಿರತಾ ತ್ಮಂಗೆ ನಿಂನಮರೆ | ದುಗಮಿಪಮನಂಗೆ ನಿರ್ವೀರ್ಯಂಗೆದುರ್ಮತಿಗೆ ಜನ್ಮಮರ ಣಜರಾಳಿಯಿಂ || ನೆಗಳ್ದಶೋಕೊರ್ಮಿಸಂಕುಲದಿಂವಿಶಿಷ್ಟಮಾ | ದಗಭೀರಭ ವಸಿಂಧುಪತಿತಂಗೆ ಕಾಮಾದ್ಯ ರಿಗಳೆಂಬ ದುರ್ಗ್ರಹಗ್ರಸ್ತಂಗೆನುತ್ತಿಂತು ದೈನ್ಯ ದಿಂನುತಿಸಿಮತ್ತಂ|| 77 ||

ಎನ್ನಜ್ಞತೆಯಿನೆಸಗಿದೆಲ್ಲವಂ ಕ್ಷಮಿಸಿಮೇ | ಣಿನ್ನಿತ್ತಲೆನ್ನಯ ಮನವ ನಹಂಕಾರಚ್ಯುತ | ಮ್ಮಂನೆಗಳ್ಚಿಸದೆಯುಷ್ಮತ್ಪ್ರಸಾದದೆ ಸಮಸ್ತಾವಸ್ಥೆಗಳೊಳೇಗಳುಂ || ನಿನ್ನಂಘ್ರಿಯೋಳ್ನಿಲಿಸಿ ಜನ್ಮಜನ್ಮಾಂತರದೊ| ಳುನ್ನತಕೃಪೆಯನೆಸಗಿ ಬಹುವಿಧದೆ ಬಂದಘವ | ನಿನ್ನದೆಂದೂಹಿಸದಿವಂ ಭೃತ್ಯನೆಂದು ಪೊರೆಯೆಂಬಹರಿಗೀಶನೆಂದಂ || 78 ||

ಕಮಲಾಕ್ಷನಿನ್ನೀಸಹಸ್ರಾಪರಾಧಮಂ | ಕ್ಷಮಿಸಿದೆಂ ನಿನ್ನೊಳಪರಾಧವಿನಿತಿಲ್ಲ ನಿ | ನ್ನಮಿತಸದ್ಭಕ್ತಿನಿಷ್ಠಾನುತಿಗಳಿಂತುಷ್ಟನಾದೆನೊಲವಿಂ ನಿನ್ನಯಾ || ತಮಮಂಹರಿಸೆ ಚಕ್ರಮೊಯ್ದಿಂಮುಳಿದುದಲ್ತು | ಸುಮಹದಾಪತ್ತಿನೋಳ್ ಭೃತ್ಯರಂ ಕಾಯದವ | ನಮಮಪತಿಯಾಗನದರಿಂ ವರದನಾದೆ ನಿತ್ತೆಂನಿನಗೆ ತಚ್ಚಕ್ರಮಂ || 79 ||

ಬಳಿಕೆನಿನಗಿಷ್ಟಮಾದಾಯುಧಮನುಳಿದವಂ | ತಿಳಿಪುಮೆಚ್ಚಿದೆನೀವೆನೆನುತೆಕೃಪೆಯಿಂ ಶಿವಂ | ಜಲಜಾಪ್ತಮಯಖಡ್ಗಮಂ ಸಶುಭವರ್ಮಮಂ ಮೇಘರೂಪನಿಷಂಗಮಂ || ಲಲಿತಶಮದಮಯಮಾತ್ರಕಹಲ ಮುಸಲಮನು | ಜ್ವಳಭೂತಗುಣರೂಪಚಾಪಶರಮಂಕಂಜ | ಕಲಿತಮಾಲೆಯ ಸಹೋಜ್ಯೋತಿರ್ಮಯ ಕಿರೀಟಮಂಸ್ವತೇಜೋಜನಿತವಂ || 80 ||

ಛಂದೋಮಯಸುಪರ್ಣನಂ ಸುದರ್ಶನಚಕ್ರ | ಮಂದಿವ್ಯಕರತಳದೊಳಾಂತುಹರಿಗಿತ್ತೆಲೆಲೆ | ಕಂದಬೇಡಿನ್ನು ಮೆನೆಶಂಕರನ ಸತ್ಕೃಪೆಗೆ ಶೌರಿಸಂತುಷ್ಟನಾಗೀ | ಒಂದುವಂಬಯಸೆಂ ಮದೀಶನೀನೆನಗೊಲ್ದೊ | ಡೆಂದಿಂಗೆಯುಂ ನಿನ್ನದಾಸ್ಯಮಂಕರುಣಿಸದ | ರಿಂದಧಿಕಮುಂಟೆಯದನುಳ್ಳಂತ್ಯಜಂದ್ವಿಜನದಿಲ್ಲದಾದ್ವಿಜನಂತ್ಯಜಂ || 81 ||

ಅಂತರಿಂತ್ವದ್ದಾಸ್ಯಮೇಸಾಲ್ಗುಮೆನೆ ಮಹೇ | ಶಂತುಷ್ಟನಾಗಿಮದ್ದಾಸ್ಯಮಂ ನಿನಗಿತ್ತೆ| ನೆಂತೆನಲ್ ನೀಂಮೇಘರೂಪದಿಂದೊರ್ಮೆ ವೃಷರೂಪದಿಂದೊರ್ಮೆಯೆಮ್ಮಂ | ಅಂತೊಡುರುಮೇಘವಾಹಾಖ್ಯಂ ವೃಷಧ್ವಜಾ |ಖ್ಯಂತಡೆಯದಕ್ಕು ಮಿವರಿಂದೆಮಗೆನುತೆಹರಿಯು | ನಂತೆಗೆಯ್ಯನೆ ಯಿದಾಸ್ಯಾಂದ ಸಿದ್ಧಂ ಶಿವನಿನಿಂತುಜೀವಿಪನಧಿಕನೇ || 82 ||

ಮತಿಹೀನಕೇಳ್ಮತ್ತಮೊರ್ಮೆಕೃಷ್ಣಂದ್ವಾರ | ವತಿಯಲ್ಲಿ ಜಾಂಬವತಿ ಯೋಳ್ಪ್ರಸಾದಿತನಾಗಿ | ಸುತರಂನಿಜಸ್ತ್ರೀಸಹಸ್ರದೊಳ್ಪಡೆವೆನೆಂದು ಶಕುಂತವರ ನನೇರೆ || ನುತಸಾಲಸರ್ಜ್ಜಖರ್ಜೂರ ಭೂಜಾರ್ಜ್ಜುನೋ |ರ್ಜಿತಕುಜಲತಾ ಶಾಂತಖಗಮೃಗಮುನೀಂದ್ರಶೋ | ಭಿತಗಂಧಮಾದನನಗಕ್ಕೆಯ್ದಿಯಲ್ಲಿಯಬದ ರಿಕಾಶ್ರಮದೊಳೊಪ್ಪುವಂ || 83 ||

ಉಪಮನ್ಯುಮುನಿಪನಂ ಕಂಡುವಂದಿಸಿನುತಿಸೆ | ಕೃಪೆಯಿನವರಬ್ಜಾ ಕ್ಷನಂ ನೋಡಿ ಸತ್ಕರಿಸಿ | ತಪಮನಿಲ್ಲೆಸಗುನಿನ್ನಿಷ್ಟಮಂ ಶಿವನಿತ್ತಪಂಪಿಂದೆ ಯದುವಂಶಜಂ || ವಿಪುಲಶಶಬಿಂದುತಾಂಪ್ರಯುತ ಸುತಸುತೆಯರಂ | ತ್ರಿಪು ರಾರಿಯಿಂಪಡೆದನಿಲ್ಲಿಕಾಶಿಯೊಳಂತೆ | ನೃಪತಿಸಗರಂ ಹರನ ನೊಲಿಸಿಷಷ್ಟಿಸಹ ಸ್ರಪುತ್ರರಂ ಪಡೆದನಂದು || 84 ||

ಅರರೆಮನುಮುಖ್ಯರೀಶನನಿಲ್ಲಿ ಭಜಿಸಿತ | ಮ್ಮರುವಂಶಮುಮನುದ್ಧರಿಸಿ ದರ್ ಸನತ್ಸುತಮು | ಖರನೇಕಸಿದ್ಧಿಯಂಪಡೆದರಾವ್ಯಾಸಾದಿಗಳ್ ಗ್ರಂಥಕಾರ ರಾಗಿ || ಚರಿಸಿದರ್ಕಶ್ಯಪಪ್ರಭೃತಿಗಳ್ ಸೃಷ್ಟಿಕ್ಷ | ಮರೆನಿಸಿದ ರಾವುಂತ್ರಿಕಾ ಲಜ್ಞರಾದೆವಂ | ತಿರುಳಿದ ದಿವಿಜದನುಜಮನುಜರಿಷ್ಟಾರ್ಥಮಂ ಪಡೆದಾಶ್ಚರ್ಯಾ ದರೊಲವಿಂ || 85 ||

ದಾರಿದ್ರ್ಯದುರ್ಭಗಾಪಗತಿತಾಪತ್ರಯಾ | ದ್ಯೋರುಭೀತಿಗಳಂ ಕೆಡಿಸಿ ಕಾಮಿತವ ನೊಂದೆ | ಗೌರೀಶ್ವರಪ್ರಸಾದದಿನಲ್ಲದುಳಿದಯತ್ನದಿ ನಪ್ಪುದೇಯೆಂ ನೆಹರೀ || ಘೋರನುಪಮನ್ಯುಗೆ ಕೃತಾಂಜಲಿ ಪುಟನುಮಾಗಿ | ಯಾರುದ್ರಗ ಣನಿಂತಪೋದೀಕ್ಷೆಯಂಗ್ರಹಿಸಿ | ಯಾರಾಧಿಸಿದನಮಮ ವಿಧ್ಯುಕ್ತಮಾಗಿ ಸಾಂ ಬನನಿಂತು ಸದ್ಭಕ್ತಿಯಿಂ || 86 ||

ಒಂದುತಿಂಗಳ್ಫಲಾಹಾರದಿನೆರಡುತಿಂಗ | ಳೊಂದಿದಜಲಾಶನದಿ ನೈದುತಿಂ ಗಳ್ವರಂ | ಮಂದಾನಿಲಾಹಾರದಿಂದವರುದಿಂಗಳಲೊಂದಡಿಯೊಳೆಯ್ದೆನಿಂದು || ಒಂದುಬರಿಸಂತಪಂಗೆಯ್ವಿನಂ ಶಂಭುಕೃಪೆ | ಯಿಂದೆ ನಿಜರೂಪಮಂ ತೋರಿಮೆ ಚ್ಚಿದೆನಿತ್ತ | ಪೆಂದಾನವಾರಿ ಬೇಡಿಷ್ಟವೇನೆನೆ ಸುಖಾಶ್ರುಗಳುಗಲ್ನೋಡಿನ ಮಿಸಿ || 87 ||

ಸುಪ್ರಣವ ಪೂರ್ವಕ ಬ್ರಹ್ಮಮಯಸೂಕ್ತಿಗಳಿ | ನಪ್ರತಿಮ ಶಿವನಂಜ ಯಾಷ್ಟಮೂರ್ತಿಯನು | ತ್ರಿಪ್ರಕಾರದೆ ಬಹುವಿಧಸ್ತುತಿಗಳಿಂ ತುಷ್ಟಿವಡಿಸೆಹ ರಿಗೆಂದನೀಶಂ || ಭೂಪ್ರಚುರ ತೇಜೋಕ್ಷತಾಜರಾಮಳಿನಕೀ | ರ್ತಿಪ್ರಜ್ಞೆಗಳ ನಿತ್ತೆನೊಲ್ದುನಿನಗಸುಖಾಮ|ಯ ಪ್ರಕರಮೊಂದದಿಕ್ಕೆಂದುನುಡಿದೆತ್ತಿ ಮುಂಪಾ ಡಿಮತ್ತಂಬೇಡೆನೇ || ೮೮ ||

ಎಲೆದೇವಧರ್ಮೇಚ್ಛೆಯಂ ರಿಪುಕ್ಷಯಮನು | ಜ್ವಲಭೋಗಮಂಬಲವ ನಿತ್ತು ಪುತ್ರರನೆನ್ನ | ಲಲನಾಸಹಸ್ರದಲ್ಲೊಗೆವಂತೆಗೆಯಿಸಿ ನಿನ್ನುರುಭಕ್ತಿಯಿತ್ತು ಳುಹೆನೆ || ಸಲೆಯನಿತುವಂ ಕೊಟ್ಟದೃಶ್ಯನಾದಂಭವನ | ತುಳಮುದದಿನುಪಮ ನ್ಯುವಿಂದೆ ಬೀಳ್ಕೊಂಡು ಬಂ| ದಲಘುಹರಿಸುಖಮಿರನೆ ಯಿದು ಶಿವರಹಸ್ಯೋ ಕ್ತಿ ಹರಿಗೆಲ್ಲಿತೋಪ್ರಭುತ್ವಂ || ೮೯ ||

ತ್ವಮೆನೆಮೇಣ್‌ಕ್ಷತ್ರಿಯಃ ಪರಮೋಹರಿಃಯೆನ | ಲ್ಕಮಿತರುದ್ರಂ ಬ್ರಾ ಹ್ಮಣಂ ಕ್ಷತ್ರಿಯಾದಿಗಳ್ | ಕಮಲಾಕ್ಷಮುಖರಾದ್ವಿಜೋತ್ತಮ ಶಿವಂಗುಳಿದ ಧಃ ಕುಲಜರೆಂತುಸರಿಯ್ಯೆ || ಕ್ರಮದೆ ನಾರಾಯಣಾದೀನಿ ನಾಮಾನಿಯೆನು | ತಮರ್ದದು ವಿಸೃಜ್ಯೈವಯೆನೆ ಹರಿಯ ಪೆಸರುಮಂ | ವಿಮಲಮೋಕ್ಷಾಕಾಂ ಕ್ಷಕಂ ಭಜಿಸಲಾಗದೆನೆನೀಂದೇವರೆಂಬೆಯೆಂತೈ || ೯೦ ||

ಮರೆದಾದೊಡಂತ್ರಯೋದಶಿಯ ರಜನೀಮುಖದೊ | ಳುರೆ ಹರಿಯ ನೀಕ್ಷಿಸಲ್ ದ್ವಾದಶಾಬ್ದದ ಸುಕೃತ | ವರೆತುಪೋಪುದಿದಾಸ್ಮೃತಿ ಪ್ರೋಕ್ತಿ ಮತ್ತೆಯುಂ ಕೇಳ್ವದೋಷದೊಳೆಂದುವುಂ || ಮರೆಯದಾಹರಿದರ್ಶನಂ ಪ್ರ ಮಾದದೆ ಘಟಿಸೆ | ಪರಿಪಡುವಪಾಯುರ್ಯಶೋಮತಿಬಲಂಗಳೆಂ | ದರಿಪುತಿದೆ ಪೌರಾಣವೀಕ್ಷಿಸಲಶುಭಮಪ್ಪುದಂತೆ ಮೇಣ್‌ದೈವವೆಂತೈ || ೯೧ ||

ಸಲೆಚಿತ್ಸುಖಾತ್ಮನೀಶ್ವರನಲ್ಲದುಳಿದಸುರ | ಕುಲಕೆ ಸುಖಮಿಲ್ಲದೆಂತೆನೆ ಕೇಳ ಯಜ್ಞಂಗೆ | ತಲೆಬೇನೆ ಕುಷ್ಠವರ್ಕಂಗೆ ಪಾಶಿಗೆ ಜಲೋದರವಂತೆದಂತವ್ಯ ಥೆ|| ಅಲಘುಪೂಷಂಗೆ ತೋಳ್ಗುತ್ತಮಿಂದ್ರಂಗೆ ಶಶಿ | ಗೆಲೆಕೇಳ್‌ಕ್ಷಯವ್ಯಾಧಿ ವಕ್ಷಃಗುರುಜ್ವರಂ | ಜಲಜಜಂಗಾತ್ಮಪುತ್ರೀಗಮನವೆಂಬ ದುರ್ವ್ಯಸನದುಃಖಂ ಬಳಿಕ್ಕಂ || ೯೨ ||

ಜನನಮೃತಿಕಪಟಕಾಮಾಸಕ್ತಿಮಾನಿನೀ । ಹನನಸಾರಥ್ಯಬಲಿಬಂಧನಂಗಳೆನಿಪ್ಪ । ವೆನಸುಂಮುರಾರಿಗುಂಟೆಂದು ಶಿವಧರ್ಮೋತ್ತರಂ ಸಾರುತಿದೆ ಯುಂತಿರಿಂ ॥ ಇನಿತವಸ್ಥೆಗೆ ಸಂದುಸಾವವಂ ದೈವವೆಂ । ದೆನಲಕ್ಕುಮೇಮೃತ್ಯುವಶರನಾಮೃತ್ಯುಂಜ । ಯನಸದೃಶರೆಂಬರೇ ಬ್ರಹ್ಮಾಂಡದಲ್ಲಿ ಮೃತ್ಯೂಕ್ತಿಯುಂ ಕೇಳ್ದುದಿಲ್ಲಾ ॥ 93 ॥

ಏನಾನುಮರ್ಕಂಗೆ ಖದ್ಯೋತವೆಣೆಯಾದೊ । ಡಾನೀಲಕಂಠಂಗೆ ವಿಷ್ಣುವೆಣೆಯಪ್ಪನೆ । ತ್ತಾನುಂ ಸುರದ್ರುಮಕೆ ಕಾಷ್ಠವೆಣೆಯಾದೊಡಾ ನೆಣೆಯುಪ್ಪನೀಶ್ವರಂಗೆ ॥ ಜ್ಞಾನವಜ್ಞಾನಕ್ಕೆ ಸರಿಯಾದಕಾಲಕ । ನ್ನ್ಯೂನ ಶಂಭುಗೆಸುರರ್ಸರಿಯಪ್ಪ ರಜ್ಞರಿಯ । ನೇನೆಂಬೆನಿದು ಮೋಹದವಿಕಾರವೆಂದಜೋಕ್ತಿಯಿದೆ ದೊರೆಯಾರ್ಶಿವಂಗೆ ॥ 94 ॥

ಕಾಲನಿಂ ಕಾಮಾದಿದುರ್ವ್ಯಸನದಿಂ ರುಜಾ । ಜಾಲದಿಂ ಮಾಯೆಯಿಂ ದನುಜರಿಂ ಮುನಿಶಾಪ । ಕೋಲಾಹಲಾದ್ಯಖಿಳ ವಿಘ್ನಂಗಳಿಂ ಮುಂದುಗೆಟ್ಟಳಿವ ಮುರವೈರಿಯುಂ ॥ ಈಲಕ್ಷಣದಬಹುಭಯಂ ಪೊರ್ದದೆಸೆವುಮಾ । ಲೋಲಂಗನಿಂದ್ಯಂಗಗೋಚರಂ ಗನುಪಮಂ । ಗಾಲಂಬರಹಿತಂಗನಾದ್ಯಂಗನಂತಂಗೆ ನೀಂಸದೃಶಮೆಂತೆಂಬೆಯೈ ॥ 95 ॥

ಏಪರಿಯೊಳಾರಯಲ್ವೇದ ಶಾಸ್ತ್ರಾಳಿಯಗ । ಜಾಪತಿಯೆಕರ್ತೃ ಹರಿಭೃತ್ಯನೆಂದೊರೆಯೆ ನಿ ।ನ್ನಾಪದವನುಸಿರಲೇಂ ವಿಷ್ಣುವಧ್ರುವನೆನಲವನದಾದ ವೈಷ್ಣವಮತಂ॥ ರೂಪಿಸಲ್ಶಾಶ್ವತಮೆ ದರ್ಶನಾದಪಿಯೆನುತೆ।ಪಾಪದಾಯೆನ್ನಲೇಕದಂಡಿ ತ್ರಿದಂಡ್ಯಾದಿ । ಕಾಪುರುಷರಾವಿಷ್ಣುಭಕ್ತರವರಂ ಕಾಣಲಘಮೆನೆ ಯವರ್ಸೇವ್ಯರೇ ॥ 96 ॥

ಗೋಪೀಮಲಿನಧಾರಿ ಶಿವನನಂಟಿದೊಡಧಿಕ । ಪಾಪಮೆಂದುಂ ಮೃತ್ತಿಕಾದಿಗಳನಿಡಲಾಗ । ದಾಪಾಪಿಗಳ್ದಾನಪಾತ್ರರೆಂದಿತ್ತಂ ಪತಿತನದಲ್ಲದೆಭೃಗುವಿನಾ ॥ ಶಾಪೋಪಶಮನಾರ್ಥ ಮೇಕಾದಶೀವ್ರತಮ । ನೇಪೊತ್ತುಮನಿತುರುದ್ರರ್ಗೆಸಗುತರಿಯರೆಂ । ದೋಪಗಾರುಡಪುರಾಣ ಸ್ಕಾಂದಮುಂ ಸಾರುತಿವೆಯವಶ್ಲಾಘ್ಯರೆಂತೈ ॥ 97 ॥

ಎಲೆಯೂರ್ಧ್ವಪುಂಡ್ರ ತ್ರಿಶೂಲಾರ್ಧಚಂದ್ರ ವ | ರ್ತುಲಮೆಂಬಿವ ಶ್ರೌತವಿಡಲಾಗದಿಟ್ಟವ | ರ್ಗಳಿನಾತ್ಮರವರಂ ಯಮನದೂತರಾತೆರದ ಶಸ್ತ್ರಂಗಳಿಂಭಾಳಮಂ || ಸಲೆಸೀಳ್ವರವರನೀಕ್ಷಿಸೆ ಭಸಿತಮಂಧರಿಸಿ | ಮಲಹರಾಣುಸ್ಮರಣಮಂ ನೆಗಳ್ದೊಡಲ್ಲದಾ | ಕಲುಷಂಪರೆಯದೆಂದಖಿಲ ಪುರಾಣಮಿದೆಯವನಾಂತವರ್ಮುಕ್ತರೆಂತೈ || 98 ||

ಸುತ್ತದೇ ‡ ಶಾಯುಧೈಃ ಶಂಖಚಕ್ರಾದ್ಯೈರೆ | ನುತ್ತೆ ನದಹೇಜ್ಜ್ವಪಿನುತಿದೆ ಮನುಪ್ರೋಕ್ತಿಯಾ |ವೃತ್ತಿಯಿಂನಾಂಕಯೇನ್ನದಹೇದೆನುತೆ ಗಾತ್ರಮೆನುತಿದೆ ಯಮುಸ್ಮೃತಿವಲಂ || ಉತ್ತಪ್ತಲೋಹದಂಡೇನ ನಾಂಗಮೆನುತ್ತೆ| ಮತ್ತಂದಹೇದೆನುತ್ತಿದೆ ಗೌತಮಸ್ಮೃತಿಯು | ದಾತ್ತತೆಯಿನಂಗೇಷು ನಾಂಕಯೇದ್ವಿಪ್ರೋಯೆನುತ್ತ ಮಿದೆಪಾರಾಶರಂ || 99 ||

ನಾಂಕಯೇನ್ನದಹೇದೆನುತೆ ದೇಹಮೆನುತಿದೆ ಶು | ಭಾಂಕ ಬೋಧಾಯನಸ್ಮೃತಿಯತಃ ಶುದ್ಧೋನ | ಚಾಂಕಯೇದೆನುತು ಮಿದೆಪಾರಾಶರಂ ನಕುರ್ಯಾದಂಕನಂಎನುತ್ತೆ || ಅಂಕಿಸುತ್ತಿದೆನರೋಯೆಂದು ಸೂತೋಕ್ತಿ ವೇ | ದಂಕೀರ್ತಿಸಿದವೊಲದರಿಂ ಶಂಖಚಕ್ರ ಮು | ದ್ರಾಂಕಿತದ್ವಿಜರುಮಧಮರದರ್ಶನೀಯರೆನಲಾಸಮಯಿಗಳ್ ಶಿಷ್ಟರೇ || 100 ||

ಓವೊ † ತದಸಚಾಸ್ತ್ರ ಮಿತ್ಯಾಹುರೆನೆ ವೈಷ್ಣ | ವಾವಗತ ಶಾಸ್ತ್ರವಿಾಶಿವರಹಸ್ಯೋಕ್ತಿಯಿಂ | ಭಾವಿಸೆಸುಶಾಸ್ತ್ರಮೇ * ನಶ್ಯಂತಿಯೆನುತೆತಾಂ ಬ್ರಹ್ಮವಿಷ್ಣ್ವಾದ್ಯಾಃಯೆನೆ || ಓವಿತದೆನುತ್ತೆ ಭಕ್ತಾನಾಂಪಿಯೆನುತೆ ಮೇಣ್ | ಪಾವನಸ್ಕಾಂದೋಕ್ತಿಕಾ ಕಥಾಯೆನೆ ವಿಧಿರ | ಮಾವರ ಪ್ರಮುಖರಳಿವರ್ಗ್ಗಡವರಂ ಭಜಿಪರುಳಿವರೆ ಬಿಡಾಸುದ್ದಿಯಂ || 101 ||

---

‡ (೧) ಆಯುಧೈಶ್ಶಂ ಖಚಕ್ರಾದ್ಯೈ ರ್ನದಹೇಚ್ಚ —ಮನೂಕ್ತಿ—
(೨) ನಾಂಕಯೇನ್ನದಹೇದ್ಗಾತ್ರಂ—ಯಮಸ್ಮೃತಿ—
(೩) ಉತ್ತಪ್ತಲೋಹದಂಡೇನ ನಾಂಗಂದಹೇತ್ —ಗೌತಮಸ್ಮೃತಿ—
(೪) ಅಂಗೇಷುನಾಂಕಯೇದ್ವಿಪ್ರಃ—ಪಾರಾಶರ—
(೫) ನಾಂಕಯೇನ್ನದಹೇದ್ದೇಹಂ—ಬೋಧಾಯನಸ್ಮೃತಿ—
(೬) ಯತಶ್ಶುದ್ಧೋನಚಾಂಕಯೇತ್—ಪಾರಾಶರ—
(೭) ನಕುರ್ಯಾದಂಕನಂನರಃ—ಸೂತೋಕ್ತಿ.
† ತದಸಚಾಸ್ತ್ರಮಿತ್ಯಾಹುಃ—ಶಿವರಹಸ್ಯೋಕ್ತಿ—
* ನಶ್ಯಂತಿಬ್ರಹ್ಮವಿಷ್ಣ್ವಾದ್ಯಾಸ್ತದ್ಭಕ್ತಾನಾಂಪಿಕಾಕಥಾ—ಸ್ಕಾಂದ.

ಇಂತೆಂದುನಾನಾಪ್ರಮಾಣದಿಂ ಪರಿತನ್ಮ | ತಂ ತತ್ರಸಿದ್ಧ ಶಾಸ್ತ್ರಂ ತದಾ ಚಾರವದ | ನಾಂತ ಭಕ್ತ್ಯಾಘಮೆಲ್ಲಂ ನಿಂದ್ಯವೆಂದು ವೇದಸ್ಮೃತಿಪುರಾಣೋ ಕ್ತಿಯಿಂ || ಸಂತರ್ಕ್ಕರಂಮೆಚ್ಚಿ ಗುರುವರಂತೋರಿಸಿ ಯ | ನಂತರದೊಳೆಂದನೆ ಶಿವಾದಿ ಮೊದಲಂಬಿಕಾ | ಕಾಂತನೇಪರವೆಂದು ಕಾಣಿಸಿದೆವಾಗಿಕೇಳ್ಮುಂದೆ ಶೈವಾಧಿಕ್ಯಮಂ || 102 ||

ನಗುರೋರಧಿಕಮೆನುತ್ತಿದೆ ಯೂಗಮಂ ಬಳಿ | ಕ್ಕೆ ಗುರುರೇವಶಿವೋ ಯೆನುತ್ತುಮಾಸ್ಕಾಂದಮಿದೆ | ಸೊಗಸಿತಸ್ಮಾದಿಷ್ಟಮೆನುತೆ ನಗುರೋರೆನುತೆ ಕುರ್ಯಾದೆನುತಿದೆಲೈಂಗ್ಯಂ || ಮಿಗೆಗುರೋರಧಿಗತಂಜ್ಞಾನಂ ಯೆನುತಿದೆ ಶೊ | ಟ್ಟುಗೆವಾಯುತಂತ್ರಂ ಸಏವಸರ್ವಯೆನುತ್ತೆ | ನೆಗಳ್ದ ಕಾರಣಮೆನುತ್ತಿದೆ ಸೂತಗೀತಿಪಲವೇಂ ಗುರುವೆಸೇವ್ಯನೆಂತುಂ || 103 ||

ಶಿವಲಿಂಗಮಂ ವಿಧಿಹರೀಂದ್ರಾದ್ಯಮರರಾಂತು | ನವಪೂಜೆಗೆಯ್ದು ವಾಣೀಂದಿರೇಂದ್ರಾಣ್ಯಾದಿ | ಯುವತಿಯರುಮಂ ನಿಜಪದಂಗಳಂಪಡೆದರ್ತವ ಶ್ರೀಯೇಯೆಂಬಮನುವಿಂ || ವಿವರಿಸಿತದಂಋುಕ್ಕು ಪಾರಾಶರಮು ಮಂತೆ | ತವೆ ಪೇಳ್ದದಾಲಿಂಗದೀಕ್ಷಿತರ ಪಾಪರಂ|ತವರೊಳೆಶಿವಂ ತೊಳಪನಿದನೆಯಾತೇರುದ್ರ ಯೆಂದಾಯಜುಸ್ಸುಪೇಳ್ಗುಂ || 104 ||

ವರಲಿಂಗಮಂನಾಡೆ ಮುಟ್ಟಿದೀಯೆನ್ನ ಸ | ತ್ಕರಮೆಭಗವಾನ್ನಿದೇ ಭಗ ವತ್ತರಂನಿರಂ | ತರ ವಿಶ್ವಭೇಷಜಂತಾಯ್ತುಂಜೆ ಜೀವನೌಷಧಮುಮಾಗೆಯ್ದಿತೆನಗೆ || ಪರಮಾಪ್ತಯೊನಿನ್ನ ಲಿಂಗವಿರ್ದಿಲ್ಲಿ ಬಂ | ದಿರುತೊಲಗದಶ್ರಾಂತಮೆಂದು ಋುಗ್ವೇದಮಾ | ತುರ ಭಕ್ತಿಯಿಂಬಿನ್ನವಿಸಿತೀಶ್ವರಂಗಯಂಮೇಯೆಂಬ ದಿವ್ಯಾಣುವಿಂ || 105 ||

ಅನುವಿನಿಂಬ್ರಹ್ಮಣಸ್ಪತಿ ಪರಶಿವಂಬ್ರಹ್ಮ | ವೆನೆ ಲಿಂಗಮದುಪವಿತ್ರಂ ಪ್ರಸಿದ್ಧಂ ವಿಶ್ವ | ಕಿನವಂತರಿಂ ಸ್ವಸಂಗದಿನಂಗಮಂ ಪಾವನಂಗೆಯ್ವುದಜ್ಞ ರಾದ || ವಿನುತದೀಕ್ಷಾರಹಿತರದನೆಯ್ದರೆಯ್ದುವರ್ | ಘನದೀಕ್ಷಿತರ್ ದಲದ ನೆಯ್ದಿದರ್ ಶಿವನಪ್ಪ | ರಿನಿತರ್ಥಮುಂ ಪವಿತ್ರಂತೇಯೆನುತ್ತೆ ಋುಕ್ಕುಂ ಸ್ಕಾಂದ ಮುಂ ಸಾರುಗುಂ || 106 ||

ಪರಮಶಿವನಂಥ್ಯಾನಿಸಿ ಯುಪಾಸಿಸುವುದೀಸು | ಕರಲಿಂಗಮನಿದಂ ಸುಖವುದಿದಂ ಧರಿಪುದು | ತ್ರಿಪಥವಿದೀಲಿಂಗದಿಂ ದೇವಮುನಿಪಿತೃಗಳೆಯ್ದಿದ ಮುಃಕ್ತಿಯನಿದಂ || ಒರೆದುದುತಮಾಶಾನ ಮೆಂದಥರ್ವಣಮದಂ | ಧರಿಸಿ ಧವನೆಂತಿರ್ದೊಡಂ ಶುಚಿಯವಾದಿಭಯ | ವಿರದವನೊಳದರಿಂದೆ ಸರ್ವರುಂ ಧರಿಪುದೆಂದಾಗಮಪುರಾಣಸಿದ್ಧಂ || 107 ||

ಲಿಂಗಸ್ಮರಣದಿಂ ಸಮಸ್ತಪಾಪಕ್ಷಯಂ || ಲಿಂಗನಾಮೋಚ್ಚಾರಣದೆ ಸತ್ಫಲೋದಯಂ | ಲಿಂಗದರ್ಶನದಿಂ ಸಕಲಸುಸೌಖ್ಯಪ್ರಾಪ್ತಿ ಲಿಂಗಸಂಸ್ಪರ್ಶದಿಂದಂ || ಮಾಂಗಲ್ಯಮುಕ್ತಿಲಾಭಂ ಲಿಂಗಪೂಜೆಯಿಂ| ಲಿಂಗಗರಿಮಾವಾಪ್ತಿಯಪ್ಪುದಿದು ವೇದಶಾ | ಸ್ತ್ರಂಗಳರ್ಥಂ ತನ್ನಿಮಿತ್ತ ಮಜಹರಿಸುರಾದಿಗಳರ್ಚಿಪರ್ಲಿಂಗಮಂ || 108 ||

ಮತಿಸಿ † ಯೇರುದ್ರಾಅಧಿಯೆನುತ್ತೆ ಭೂಮ್ಯಾಮೆ| ನುತಿದೆ ವೇದಾಞು ಶಿವಭಕ್ತಃ ಪ್ರಭುರ್ಮಮ ಯೆ | ನುತಿದೆ ಹರಿಸೂಕ್ತಿ ಶಿವಭಕ್ತಾನನಶ್ಯಂತಿ ಯೆನುತುಮಾಸ್ಕಾಂದಮುಮಿದೆ || ವಿತತಮಾಗುತ್ತಮಸ್ಸರ್ವ ಪಾತ್ರಾಣಾ ಮೆ|ನುತಿದೆ ಸೌರೋಕ್ತಿ ಪೂಜ್ಯೋಯೆನುತೆ ಸರ್ವೈರೆ| ನುತಿದೆ ಶಿವಧರ್ಮವಿಂಪಲವೇನೊ ದರ್ಶನೀಯಂ ಪೂಜ್ಯನೀಶಭಕ್ತಂ || 109 ||

ಶಿವಭಕ್ತರೇಕುಲಜರವರೇಪವಿತ್ರರಂ | ತವರೆಸತ್ಪಾತ್ರರವರಿರ್ದ ದೇಶಮೆಕಾಶಿ | ಯುವರಸೋಂಕಿಟವೆ ಪಾಪದೋಟವವರುರುತೃಪ್ತಿಶಿವತೃಪ್ತಿಯುವರವೃತ್ತಿ || ಶಿವವೃತ್ತಿಯುವರ್ಗಿತ್ತದಾನವೆ ವಿಮಲದಾನ | ವವರ್ಗಾತ್ಮಶಕ್ತಿಯಿಂದಖಿಲವಸ್ತುಗಳನಿ | ತ್ತವನಸಮಸುಖವನನುಭವಿಸಿ ಶಿವನೋಳ್ಬೆರೆವನಿದು ಸಕಲಶಾಸ್ತ್ರಸಿದ್ಧಂ || 110 ||

---

† (೧) ಯೇರುದ್ರಾಅಧಿಭೂಮ್ಯಾಂ—ವೇದಮಂತ್ರ—

(೨) ಶಿವಭಕ್ತಃಪ್ರಭುರ್ಮಮ—ಹರಿಸೂಕ್ತಿ—

(೩) ಶಿವಭಕ್ತಾನನಶ್ಯಂತಿ—ಸ್ಕಾಂದ—

(೪) ಉತ್ತಮಸರ್ವಪಾತ್ರಾಣಾಂ—ಸೌರೋಕ್ತಿ—

(೫) ಪೂಜ್ಯಸ್ಸರ್ವೈ—ಶಿವಧರ್ಮ.

ಹರನಭಕ್ತನನೋರ್ಮೆಪಳಿದವಂಯುಗಕೋಟಿ|ವರಮಹೋವಿಷ್ಟಿಯೊಳ್ಕ್ರಿಮಿಯಾಗಿಪುಟ್ಟಿಮೇ | ಣ್ಕಿರಿಮೃಗಸೃಗಾಲಾಂಧಕುಬ್ಜ ಪಂಗೂರುಪಾಷಂಡಘನಘೂಕಕಾಕ || ವರಗೃಧ್ರಫಣಿರಾಸಭಂಗಳಾ ಗೊಗೆದಲ್ಲಿ | ಪರಿವಿಡಿಯಿನಖಿಲ ಜನ್ಮಂಗಳಿದುಮಡಿವನಾ | ನರಕಿಗಿಲ್ಲಿಲ್ಲ ನಿಷ್ಕೃತಿಯೆಂದು ಶಿವರಹಸ್ಯಮಿದೆ ಭಕ್ತನೆಅನಿಂದ್ಯಂ || 111 ||

ಶಿವಪಂಚಮುಖಜನಿತ ಪಂಚಭೂತೋತ್ಥ ಪಂ | ಚವಿಧ ಸುಕಲೋದ್ಭೂತ ಪಂಚವರ್ಣಾನ್ವಿತ ವಿ | ಭವ ಪಂಚಧೇನುಪ್ರಶಸ್ತ ಗೋಮಯವನುಕ್ತಪ್ರಕಾರದೊಳೊದವಿಸಿ || ನವಸೃಷ್ಟಿಮುಖಭೇದದಿಂ ಗ್ರಹಣಮುಖದೆ ತ | ತ್ಪವಿಧಿಯಿಂ ಪಂಚಪ್ರಣವಬೀಜಮನುಗಳಿಂ | ಶಿವಶಿಖಿಯೊಳೆಸಗಿ ಭೂತ್ಯಾದಿಗಳನಾಮ್ರಾದಿಪಾತ್ರಂಗಳಲ್ಲಿತೀವಿ || 112 ||

ತ್ರಿವಿಧಾಗ್ನಿವರ್ಣಗುಣಲೋಕಾತ್ಮ ಶಕ್ತಿವೇ | ದವರ ಸಂಧ್ಯಾಸವನದೈವಾತ್ಮಕತ್ರಿಪುಂ | ಡ್ರವನಾಭಸಿತದಿಂ ಸಮಂತ್ರಕದೆಭಾಳಾದಿಗಳೊಳಂಗುಲೀವಿವರದಿಂ || ತವೆಧರಿಪುದಗ್ನಿಹೋತ್ರ ವಿರಜವಿವಾಹಸು | ಪ್ರವಿದಿತೌಪಾಸನಸಮಿಜ್ಝೋತ್ರಿಯಾಗಾರ | ದವ ಭವಸಕಲದೇಶಪಿತೃವನ ಶಿವಾಲಯಸ್ಥಿತಭೂತಿಗಳನೋಳಿಯಿಂ || 113 ||

ತ್ರೈವರ್ಣಿಕಗೃಹಸ್ಥ ಸದ್ಬ್ರಹ್ಮಚಾರಿ ಶೂ | ದ್ರಾವಿಶಿಷ್ಟಜನಯತಿವರ್ಯಾತಿವರ್ಣಾಶ್ರ | ಮಾವಲಂಬಿಗಳೆಲ್ಲರುಂ ಧರಿಪುದದನಾಂತವನ ಸುಕೃತಕಾವುದೆಣೆಯೈ || ಓವೊಪಾಪೋಪಪಾಪಂಗಳಂಗೆಲ್ದು ರು | ದ್ರಾವಗತ ಮನುಜಾಪಿಯಾದಖಿಲವೇದಶಾ | ಸ್ತ್ರಾವಲಿಯನೋದಿದಯುತಪ್ರಣವಮಂ ಸ್ಮರಿಸಿದಾ ಫಲಮನೆಯ್ದಿಬಳಿಕಂ || 114 ||

ತನ್ನೇಕವಿಂಶತಿಕುಲವನುದ್ಧರಿಸಿ ಭೂಮಿ | ಯುನ್ನತಾಶೇಷ ತೀರ್ಥಸ್ನಾನಮಂಮಾಡಿ | ಧನ್ಯನಾಗಿ ಸಮಸ್ತಕರ್ಮಂಗಳೋಳ್ಯೋಗ್ಯನಾಗಿ ದೇಹಾಂತದಲ್ಲಿ || ಪನ್ನಗಧರನನೆಯ್ದಿ ಭವರಹಿತನಾಗಿರ್ಪ | ನೆನ್ನನಾದೊಡಮೆಂದು ಕಾಲಾಗ್ನಿರುದ್ರನುರೆ | ತನ್ನುಪನಿಷತ್ತಿನಿಂ ಜಾಬಾಲದಿಂ ಸನತ್ಸುತನತಿಳಿಪಿದನಂತರಿಂ || 115 ||

ಮುದದಿಂಸಏಷಭಸ್ಮಜ್ಯೋತಿರೆಂದೊದರು । ತಿದೆವಲಂ ಜಾಬಾಲವಂತೆ ಘೂತ್ಕೈನಪ್ರ । ಮದಿತವ್ಯಮೆನುತಿದೆ ಯಜುಸ್ಸುಮೇಣ್ ತ್ರೈಗುಣ್ಯಾಮೆಂದು ಶಾತಾತಪಮಿದೆ ॥ ಪದಪಿನಿಂಜ್ಯೋತಿರಹಮೆಂದು ನಾರಾಯಣಾ । ಖ್ಯದುಪನಿ ಷದುಕ್ತಿಯಿದೆಕೇಳ್ ತ್ರಿಯಾಯುಷಮೆನು । ತ್ತಿದೆ ಲಸಚ್ಛ್ವೇತಾಶ್ವತರ ಮಗ್ನಿರಿ ತಿಭಸ್ಮಯೆಂದಥರ್ವಶಿರಸ್ಸಿದೆ ॥ 116 ॥

ಒಂದಿಕಲ್ಪಾನುಕಲ್ಪೋಪ ಕಲ್ಪಾಕಲ್ಪ । ವೆಂದುನಾಲ್ದೆರನಲ್ಲಿ ಪೂರ್ವೋ ಕ್ತಮುದು ಕಲ್ಪ । ವಂದದಿಂ ವನಶುಷ್ಕಗೋಮಯವ ನೆಯ್ದೆಚೂರ್ಣಿಸಿದಹಿಸ ಲನುಕಲ್ಪಕಂ ॥ ತಾಂದಹಿಸಿಶೋಧಿಸಿದ ಭಸಿತಮಂ ಗೋಮೂತ್ರ । ದಿಂದುಂಡೆ ಗೆಯ್ದು ಮೇಣ್ದಹಿಸಿದುದದುಪಕಲ್ಪ । ಕಂದಲನ್ಯರಿನಾದುದೆಯಕಲ್ಪಮಿವರೊ ಳೊಂದಂಗ್ರಹಿಪುದೆಂದಾಗಮಂ ॥ 117 ॥

ಒಲವಿನಿಂಶ್ರಾದ್ಧೇಯೆನುತ್ತೆ ಲೋಕಾಕ್ಷಿಕೋ । ಜ್ವಲ ಸೂತ್ರಮಿದೆ ಯಭಾವೇಯನುತ್ತಾಗರುಡ । ನುಲಿದನಿದೆಬಳಿಕೆ ವರ್ಣೀಪಾಯೆನುತ್ತೆ ಶಾಂಕ ರಸಂಹಿತೋಕ್ತಿಯುಮಿದೆ ॥ ಸಲೆಶಿವೇನಯೆನುತ್ತೆ ವಿಷ್ಣುಸಾಚ್ಯೈವಯೆನು । ತಲ ಘುವಾಕ್ಯಂ ಸ್ಕಾಂದದಲ್ಲಿದಿದ ಮರ್ಥದಿನ । ಖಿಲ ವೇದಶಾಸ್ತ್ರಮಿವೆ ಯದರಿನಜ ಹರಿ ಮುಖರಿನೀವಿಭೂತಿಯೆಸುಧಾರ್ಯಂ ॥ 118 ॥

ತ್ರಿಪುರಮಂದಹಿಸಲೆಂದುನ್ಮೀಲಿತಾಕ್ಷನಾ । ಗಿ ಪುರಾರಿಯಿರೆ ಯವರಿನಿ ಳಿಗುದಿರ್ದಕಣ್ಬನಿಗ । ಳಪರಿಮಿತ ರುದ್ರಾಕ್ಷಮಾದುವು ಜಗದ್ಧಿತಾರ್ಥಂ ತದಾ ಖ್ಯೋಚ್ಚರಣದಿಂ ॥ ಉಪಮಿಸೆಸಹಸ್ರಗೋದಾನ ಫಲವಂತೆನೋ । ಡೆ ಪವಿತ್ರ ವೆಂದಂಟೆ ತದ್ವಿಗುಣಿತತ್ರಿಗುಣಿ । ತಪರಿಮಾಣ ಫಲವಿದರಿಂಮೇಲೆ ನುಡಿಯ ಲ್ಕಶಕ್ಯ ಮದರಮಹತ್ವಮಂ ॥ 119 ॥

ಪರಮಭೂತಿಸ್ನಾತನಾಗಾತ್ರಿಪುಂಡ್ರಮಂ । ಧರಿಸಿ ಮುಖಭೇದದಿಂ ವ್ಯ ಷ್ಟಿಕ್ರಮದೆಶಿಖಾ । ದ್ಯುರುತರ ಸ್ಥಾನಂಗಳೊಳ್ಸಸಂಖ್ಯೆಯಿನಣುಪುರಸ್ಸರಂ ಸಂ ಕಲ್ಪಿಸಿ ॥ ಉರುಕೃತಿಬ್ರಹ್ಮಚಾರಿ ಗೃಹಸ್ಥವನವಾಸಿ । ವರಯತಿಗಳಾರಾದೊ ಡಂ ಧರಿಸೆಪದಪದ । ಕ್ಕಿರದಶ್ವಮೇಧ ಫಲಮಂಪಡೆವನೆಂದು ಕಾತ್ಯಾಯನ ಸ್ಮೃತಿಸಾರುಗುಂ ॥ 120 ॥

ಇದುಗುಹಂಗೀಶನೊರೆದುಕ್ತಿ ರುದ್ರಾಕ್ಷಮೆನು | ತಿದೆವಲಂ ಧಾರಯೇ ದ್ವಿಪ್ರೋಯೆನುತೆಸೂಕ್ತಿ | ಪದೆದುರುದ್ರಾಕ್ಷಾಣಿ ಯತ್ರಯೋವೇದಾಯೆನುತೆ ಧಾರಯಂತಿಯೆನುತೆ || ಒದರುತಿದೆಜಾಬಾಲವಂತೆ ಖಾದನ್ನೆನು| ತ್ತಿದೆ ಲೈಂಗ್ಯ ವಾಹಾಪ್ರಯಾಣಕಾಲೇ ಯೆನು | ತ್ತಿದೆ ಪಾದ್ಮವಾಲಿಪೊಡೆನಿನ್ನಳವೆ ರುದ್ರಾಕ್ಷಮೇಧಾರ್ಯವಖಿಲರಿಂದಂ || 121 ||

ಘನವದೆಂತೊನಮಶ್ಶಿವಾಯಜಯೆನುತೆ ಯಜು | ಸ್ಸಿನ ಸುಶತರುದ್ರೀಯದಲ್ಲಿದೆಯುದಾಗಿ ಸೂ | ತನವಾಕ್ಕನೇನಸದೃಶಂ ಜಾಪ್ಯಮೆನುತೆ ಸಾಸ್ತಿಯೆನುತ್ತೆ ನಾಸ್ತಿಯೆನುತೆ || ಅನುವಿಂ ಶ್ರುತೌಸ್ಮೃತೌಯೆನುತಿದೆ ಸನತ್ಕುಮಾರನಸಂಹಿತೆಯೊಳೆ ಸಾಸ್ತ್ಯಧಿಕೋಪಿವಾ ಯೆನು | ತ್ತನುವಾದಿಸುತಿದೆ ಜಪತೋವಾಪ್ನುಯಾಚ್ಛಿವಮೆನುತ್ತಾಗವೋಕ್ತಿಯುಮಿದೆ || 122 ||

ಓದಲೇಂಶ್ರುತ್ಯಾಗಮಸ್ಥಗೋಪ್ಯಂ ಶಿವಮು | ಖೋದಿತಂ ಸರ್ವಮಂತ್ರಾಧಿಕಂ ಸಕಲಪ್ರ | ವೋದಕರ ವಣುತತಿಗನಾದಿವಟಬೀಜದಂತಲ್ಪಾಕ್ಷರಂಮಹಾರ್ಥಂ || ಮಾದೇವನಿಷ್ಟಸ್ಥಲಂ ಪವಿತ್ರಂ ಸುಮಹ | ದಾದಿಯಂ ಕಾಣಿಸುವಸಿದ್ಧಾಂಜನಂ ನಿಖಿಲ | ವೇದಶಾಸ್ತ್ರಂ ಭಾಷ್ಯಮಾಗೆಸೆವ ಮೂಲಸೂತ್ರಂ ಪ್ರಣವಪೂರ್ವಕಾಷ್ಯಂ || 123 ||

ಜ್ಞಾನಬೀಜಂ ಭೋಗಮೋಕ್ಷದಮಸಂದಿಗ್ಧ | ಮೇನೋಹರಂ ಪರಮಪದವಾಯುರಾರೋಗ್ಯ | ದಾನಿಯಾಜ್ಞಾಸಿದ್ಧ ಮಾಮ್ನಾಯಸಾರ ಮಖಿಲಾರ್ಥದಂ ಸರ್ವಸೇವ್ಯಂ || ನಾನಾವಿಪದ್ಭವಭಯಾಪಹಮಮೇಯಮೀ | ಶಾನಾತ್ಮಪಂಚಾಕ್ಷರೀಮಂತ್ರವೆಂದು ಹರಿ | ಗೇನೆಂಬೆನುಪಮನ್ಯುವಾಯಮೀಯದಿನೊರೆದನದರಿನೀಮನುವೆಜಪ್ಯಂ || 124 ||

ಶ್ರೀರುದ್ರಸುಪವಿತ್ರ ಶತಧಾರಸಾಹಸ್ರ | ಧಾರಾದ್ಯಣುಗಳಿಂದಖಂಡಿತಾಮಿತವಿಘ್ನ | ದೂರಾಕ್ಷತಾಭೀಷ್ಟದಾಚ್ಯುತ ಪರಮಪೂತಭಗವನ್ಮಹಾದೇವನಂ || ಭೋರನಭಿಷೇಕಿಸಿತದಂಘ್ರಿಜಲಮಂ ವಿಧ್ಯು | ದಾರೋಕ್ತಿಯಿಂ ಕೊಂಡವಂ ಸ್ವಕುಲದಖಿಲರಂ | ಘೋರಭವವಾರ್ಧಿಯಿಂ ದಾಂಟಿಸುವನೆಂದು ಬೋಧಾಯನಸುಶಾಖೆಯುಲಿಗುಂ || 125 ||

ಇಂತೆಂದುಜಾಬಾಲಶಾಖೆಯುಂ ಸಾರುಗುಮ । ನಂತರದೊಳಾಕುರುಕ್ಷೇತ್ರ ನೈಮಿಶಧರಾ । ಭ್ಯಂತರಸ್ಥಶುಭಸ್ಥಲಂಗಳ್ಗೆವಾಂಘ್ರಿಸಲಿಲದಷೋಡಶಾಂಶದೊಡನೆ ॥ ಎಂತುಂಸದೃಶಮಾಗವಪಮೃತ್ಯು ರೋಗಪಾ । ಪಾಂತರಾಯಗ್ರಹಾಶೌಚ ಸೂತಕದುಃಖ । ಸಂತತಿಯುಳಿದಭೀಷ್ಟವಕ್ಕುಂ ಪದಾಂಬುಧಾರಣದಿನಿದು ಶಾಸ್ತ್ರಸಿದ್ಧಂ ॥ 126 ॥

ಆದರಿಸಿಹರಗುರುಚರಾಂಘ್ರಿಗಳ ತೊಳೆದುತ । ತ್ಪಾದಜಲಮಂ ತಳೆವುದಾತ್ಮಮಸ್ತಕದೊಳೆಂ । ದಾದಿತ್ಯಪೌರಾಣದಲ್ಲಿ ಯತಿಥೇಶ್ವರಯೆನುತೆ ಗುರೋಸ್ತಥಾಯೆನುತ್ತೆ ॥ ಆದನುಜರಿಪುಗೊರೆದುದಿದೆಗಣಂಗಳ್ ಹರ್ಷ । ಜಾದಿಗಳ್ ಸಿದ್ಧಮನುಮುನಿಗಳ್ ಧರಿಸಿದರೆಂ । ದೋದುತಿದೆ ರಾಮಾಯಣಂತನ್ನಿಮಿತ್ತವಿಾಶಪದಾಂಬು ಪೇಯನೆಂತುಂ ॥ 127 ॥

ನಿರ್ಮಲಂಶಿವನವನ ನಿರ್ಮಾಲ್ಯವಿಾಕ್ಷಿಸ । ಲ್ನಿರ್ಮಲತ್ವವನುಳ್ಳುದಾಗನಿಂದಿತಮದುಂ । ನಿರ್ಮಲಗ್ಗಲ್ಲದುಳಿದಗ್ಗೆ ತೀರ್ಗುಮೆಅದಂ ದ್ವಿಜರುಣ್ಬುದರಿಮುದಾವಂ ॥ ಒರ್ಮೆಪರದೈವ ಶೇಷಂಗೊಳ್ವನವನ ದು । ಷ್ಕರ್ಮಕಾಚಾಂದ್ರಾಯಣವ್ರತಮುಚಿತಮೆಂದು । ನಿರ್ಮಲತ್ವಾದೆನುತೆ ತಂತ್ರಮಿದೆ ಶಂಭೋರೆನುತ್ತೆವೇದಾಂತಮುಮಿದೆ ॥ 128 ॥

ತ್ರ್ಯಕ್ಷಾಸ್ಪರ್ಶಿತಂಗೆಯ್ದುದುಂಡವಂ ಕಿಲ್ಬಿಷಮ । ಲಕ್ಷ್ಮಲ್ಲಕಕ್ರಿಮಿಶ್ವಾನಂಗಳಂತಿಂದು । ರೂಕ್ಷನರಕಕ್ಕಿಳಿವನೆಂದು ಕಠಶಾಖೆಯುಲಿಗುಂ ತ್ರಿಗುಘ್ನಾತಮೆನುತೆ ॥ ಉಕ್ಷಗನಯುಜಿಸಿಯರ್ಸ್ಪಿಸಿ ತದ್ರುಚಿಯನೊಳಗೆ । ಲಕ್ಷಿಸಿ ಶಿವಾವಧಾನದೆಕೊಂಡುದಮೃತವೀ । ಕುಕ್ಷಿಂಭರಕೊಂಡುದೆ ಪುರೀಷವಿದುಖುಕ್ಕಿನಂತರಿಚ್ಛಂತಿಯರ್ಥಂ ॥ 129 ॥

ಕೃತಿಗಳಾದುದ್ಧಪ್ರಶಾಂತಮಾನಸರಾದ । ನುತವಿಪ್ರರಭವನುಂಡುದನೋತುಕೊಂಡುದಂ । ಹಿತದೆವಾಸಿಸಿದುದುಮನುಣುತುಂಕೊಳುತೆ ಪಾಸಿಸುತಧಂ ಗ್ರಹಿಪರಂತರಿಂ ॥ ಶಿತಿಕಂಠಶೇಷಮಂ ಸೇವಿಪುದು ಭುಂಜಿಪುದೆ । ನುತಿದೆಜಾಭ್ಞಾಲವ್ರಜಹರಿಸುರಾಸುರ ಮನುಮು । ನಿತತಿಕೊಂಡುಳಿದರೆಂದಿವೆ ವೇದಶಾಸ್ತ್ರವದರಿಂ ಭೋಗ್ಯವಿಾಶಶೇಷಂ ॥ 130 ॥

ಇವರ ಮಹಿಮೆಯು ನೊರೆಯಲಾಲಿಸಲೆನಗೆ ನಿನಗೆ | ಪವಣೆಜಲಧಿಯೊಳೊಂದು ಬಿಂದುವ ಬಳಸಿದಂತೆ | ವಿವರಿಸಿದೆ ನಿನ್ನದೇನೆಂತು ಪೊಗಳ್ವೆಂ ಶಿವನ ಕರುಣಾತಿಶಯಮನಮಮ || ಶಿವಭಕ್ತವರ್ಮಾದಸೂನು ಪಂಚಾಕ್ಷನೆಂ | ಬವನಿಸುರನೆಂದು ಕೃತಯುಗದೊಳನಸೂಯೆಯೆಂ | ಬವಳೊಡನೆ ಸುಖಮಿರುತ್ತುಂ ಶಿವಾರ್ಥಂ ಪುಷ್ಪಕೆಂದಡವಿಗೊಂದು ದಿವಸಂ|| 131 ||

ಭರದೆ ಶಿಷ್ಯರ್ವೆರಸುಗಮಿಸಲಿತ್ತಲ್ ಶಿವನ | ವರಬಗೆಯರಿಯಲಟ್ಟಿ ಶಿಖರಾಲಯಾಖ್ಯಗಣ | ವರನನವನಂತ್ಯಜಾಕೃತಿಯಾಂತು ಬರೆಕಾಣುತಾಸತಿ ಭಸಿತಧಾರಿಯೆ || ಹರನೆಂದು ನಂಬಿ ವಂದಿಸಿಯುಪಚರಿಸಿ ಗೃಹಕೆ | ಕರೆಯೆ ಚಂಡಾಲದ್ವಿಜಾಲಯಕ್ಕೆಲೆತಾಯೆ | ಬರಲಕ್ಕುಮೇಭಿಕ್ಷೆಯುಳ್ಳೊಡಿಲ್ಲಿಕ್ಕಿಮೆನೆಶಿವಶಿವಾ ಯೆನುತೆ ಕೊರಗಿ || 132 ||

ಆರಾದೊಡಕ್ಕೆ ಶಿವಭಕ್ತರೋಳ್ಕುಲಮಂ ವಿ |ಚಾರಿಸುವರೇ ಕರುಣಿಸೆಂದು ಸದನಕೆ ತಂದು | ಭೂರಿ ಸತ್ಕಾರಮಂ ಮಾಡುತಿರಲನಿತರೋಳ್ಪತಿಬಂದು ಕಂಡುನಮಿಸಿ|| ಚಾರುಭಯಭಕ್ತಿಯಿಂ ನುತಿಸುತಿರೆ ತದುಭಯದ | ಧೀರಭಕ್ತಿಗೆ ಮೆಚ್ಚಿ ನಿಜರೂಪಮಂತೋರಿ | ಮಾರಾರಿಯೆಡೆಗವರನಾಬಳಗವೆರಸೊಯ್ದನೆಂಗುಮಾಸ್ಕಾಂದಮೊಲವಿಂ || 133 ||

ಮತ್ತೋರ್ವನಂ ಜೋರರಿಂಡೆಸುಗೆವಡೆದಳಿವ | ನಿತ್ತರೋಳ್ ಶಬರರಾಪಥದೊಳೆಯ್ದುತಿರೆಬೆಂ | ಬತ್ತುವ ಸೊಣಗನಾಸ್ಮಶಾನಭಸ್ಮದೊಳೊಂದಿಬಂದವನಪಣೆಯುಮೆಟ್ಟಿ || ಅತ್ತಲೆಯ್ದಲ್ ಮೃತ್ಯುಭೃತ್ಯಗ್ಗ ಕುಡದವನ | ನುತ್ತಮಭಸಿತಮಹಿಮೆಯಿಂ ಶಿವಗಣಾಳಿಸಮು | ದಾತ್ತಶಿವ ಪುರಕೆ ಕೊಂಡೊಯ್ದರೆಂದಿದೆ ಶಿವರಹಸ್ಯವದನೇವಣ್ಣಿಪೆಂ || 134 ||

ಪಿಂದೋರ್ವವಿಪ್ರಸುತ ತರುಣಂಶುಚಿಸ್ಮಿತಾ | ಸುಂದರಿಸಹಿತಮಿರುತೆ ಬಂಧುವೈರದೆ ತಪಕೆ | ಬಂದುಭವನಾಶಿಯುಭವಾರ್ಪಿತಕ್ಕಿದ್ದಜಂಬೀರಫಲಮಂವಾಸಿಸೆ || ನೆಂದುನೊಣನಾಗೆಂದು ಭಕ್ತಶಪಿಸೆ ಸತಿಗ | ದಂದಲೊರೆದಂತಾಗಿರುತೆ ತೈಲದೋಳ್ಮಡಿಯೆ | ತಂದರುಂಧತಿಯುಮುಂದಿಡೆ ಭೂತಿದಳಿದಸುವನಿತ್ತು ಶಾಪವನಲೆಯಳೆ || 135 ||

ಮತ್ತೆಗೌತಮ ವಿವಾಹದೊಳಹಲ್ಯೆಯಸುರರ । ಪೊತ್ತವೀಕ್ಷಿಸಿಕಾಮ ಕಾತರತೆಯಿಂದೆಮರ | ಹೆತ್ತಲುಂ ಮುಸುಕೆ ಮತಿಗೆಟ್ಟು ದುರ್ವಾಸನೆಡೆಗೆಯ್ದಿ ಬೆಸಗೊಳೆಮುನೀಶಂ ॥ ಆತ್ತಶತರುದ್ರೀಯ ಮಂತ್ರಮಂತ್ರಿತಭಸ್ಮ । ವಿತ್ತವರಭಸ್ಮಧೂಳಿತರಾಗಿ ಮೆಂದೊರೆದ | ಚಿತ್ತನಲೆದಂ ಮೇಣ್ಚಿದರ್ಥಂಶರಣ್ಬಗೆನಿಜೋರಸ್ಥಭೂತಿದೆಗೆದು || 136 ||

ಮಲಹರಂ ಪ್ರಣವಪಂಚಾಕ್ಷರೀ ಗಾಯತ್ರಿ | ಗಳಿನೊಲ್ದು ಮಂತ್ರಿಸಿ ಹರಿಯ ಶರೀರದಮೇಲೆ | ತಳಿಯೆಚಾನಿಸಿದೀಪಮಂಕಂಡೆನೆಂದುಸಿರೆ ಭಸ್ಮಮಂ ಭಕ್ಷಿಸೆಂದು || ಬಳಿಕೆಕುಡೆಮೆಲ್ದು ಹರಿ ಪಕ್ವಬಿಂಬಾಭಶಿವ | ಕಲೆಯೊಳಮರ್ದಂದಿಂದೆಧವಲಾಂಗನಾದನಿದ । ತುಳಬೃಹಜ್ಜಾಬಾಲದೋಳ್ ಭ್ರುಶುಂಡಂಗೆ ಕಾಲಾಗ್ನಿರುದ್ರೋದಿತಾರ್ಥಂ || 137 ||

ಓವೊಮುನ್ನೋರ್ವಚಂಡಾಲಂ ಸಹಸ್ರಭೂ | ದೇವರಂಕೊಂದವರವಿತ್ತಮುಮನಪಹರಿಸಿ | ಯಾವಿಧದೆಗೋವಂ ಹತಿಸಿ ಸಕಲ ದೋಷಮಂಮಾಡಿಯೊರ್ಮೆವಿನೋದದಿಂ || ಶ್ರೀವಿಶದರುದ್ರಾಕ್ಷಮಂ ಧರಿಸಿ ಮೇಣಳಿಯೆ । ನೈವಸ್ವತಂ ಮುಟ್ಟಲಣ್ಮದೆವಿಮಾನದೋ । ಳ್ದೇವತತಿಯೊಡನೆ ಶಿವಪುರಕೆ ಕಳಿಪಿದನೆಂದು ವಾಸಿಷ್ಠಲೈಂಗ್ಯಮುಲಿಗುಂ || 138 ||

ಬಳಿಕೊಂದುಶುನಕಂಬೆರಸು ಪುಳಿಂದಂಬೇಂಟೆ । ಗೆಳಸಿವನಕೆಯ್ದಿಯಾರುದ್ರಾಕ್ಷಭೂರುಹದ | ಕೆಳಗೆ ಬಿಸಿಲಡಸೆಕುಳ್ಳಿರ್ದೊಂದು ರುದ್ರಾಕ್ಷಮಂಕೊರೆದುತಚ್ಛುನಕನಾ || ಗಳಕಾತ್ಮಲೀಲೆಯಿಂಕಟ್ಟಿ ಬರುತಿರಲೊಂದು | ಬಳವದ್ವರಾಹನೋಳ್ಸೆಣಸಿಯದುಸಾಯೆನಿ |ರ್ಮಳರುದ್ರಪದವಾಯ್ತುದಕ್ಕೆಂದು ಶಿವವಾಕ್ಯಮಿದೆ ನರರ್ಧರಿಸಲೆಂತೋ || 139 ||

ಆದಿಯೋಳ್ಸಾನಂದನೊಲ್ದುಶಿವಧರ್ಮಮುಮ | ನೋದಿಸುತ್ತಲ್ಲಿನರಕಿಗಳಂಯಮಂಭಾಧಿ | ಪಾದುಃಖಮಂ ಕೇಳ್ದು ಕೃಪೆಯಿನಲ್ಲಿಗೆಪೋಗಿಯಮನಿನಾನರಕವಿಧಿಯಂ || ಸಾದರದಿನರಿದು ಪಂಚಾಕ್ಷರಿಯ ನೊರೆದು ನರ । ಕೋದಧಿಗತರನುದ್ಧರಿಸಿದಂ ಶತಾನಂದ । ನೀದಿವ್ಯಮಂತ್ರದಿಂ ಸಂಗಿರಾದಿಗಳಂ ಪೊರೆದನಿವಾಸಸ್ಕಾಂದಸಿದ್ಧಂ || 140 ||

ತ್ರೇತೆಯೊಳ್ವಿದಳನೆಂಬವನಿಪಂ ಸೊಕ್ಕಿರ್ದು | ನೀತಿಯೊಳ್ನಡೆದರಿಗೆಸೆ ಡೆದಡವಿಯೊಕ್ಕಂಗ | ನಾತುರಗನರಪಶುಗಳಂ ಕೊಂದುತಿಂದುಸಾವೆಡೆಯೊಳ್ ಸುರಾಪನೆಂಬ || ಖ್ಯಾತಸಚಿವಂಗಾಹರ ಪ್ರಹರಯೆಂದೊರೆವ | ಮಾತನಾಲಿಸಿ ಶಿವಗಣಂಬಂದು ಮೃತ್ಯುವಂ | ದೂತರಂಬಡಿದು ಶಿವನೆಡೆಗೊಯ್ದರವನಸಿದುಪದ್ಮಪೌರಾಣಸಿದ್ಧಂ || 141 ||

ಪಿಂದೆನರವರ್ಮಸತಿವಸುದೇವಿಶಿವಗೃಹಮ | ನೊಂದಿಸಂಮಾರ್ಜನಂಗೆಯ್ವುತಿರೆಗಾಲವನಿ | ದೊಂದನೇಕೆಸಪೆಯೆನೆ ಕಿಷ್ಕಿಂಧಗಿರಿಯೊಳೊರ್ವಂಲಿಂಗಕಿತ್ತಶನಕೆ || ಬಂದುಮುಂಪಕ್ಕಿಯಾಗಿರ್ದಾಸೆರಗೆಪಕ್ಷ | ದಿಂದಲೆದ ದೂಳಿಯಫಲದೆವಸುಗೊಗೆದು ನೃಪತಿ | ಗಿಂದಗ್ರಪಥುವಾದೆನೆನೆ ಶಿವಕೃಪೆಯ ಪೊಗಳ್ದನವನಿದಾಸ್ಕಾಂದಸಿದ್ಧಂ || 142 ||

ಮುನ್ನವಿಾಶಾಲಯದೊಳಗೆ ಚಿತ್ರರಥನೆಂಬ | ವಂನಿಪಿಲವರ್ನಕದೆ ಚಿತ್ರಮಂಬಿನದದಿಂ | ಬಿನ್ನಣಿಸೆ ತನ್ನೃಪಂಗೀಶ್ವರಂ ಸಾಯುಜ್ಯವಿತ್ತನೆಂಗುಂಪುರಾಣಂ || ಪನ್ನಗಧರಂಗೆ ಜೀರ್ಣಾರ್ಕಪರ್ಣದಿನರ್ಚ್ಯ | ಮನ್ನಲಿಯುತಾವ್ಯಾಸನೀಯೆಸರ್ವಗುಣಸಂ | ಪನ್ನತೆಮುನೀಂದ್ರತೆಸುಮತಿಯಿವಂ ಶಿವನಿತ್ತನಿದುಧರ್ಮ ಸಂಹಿತಾರ್ಥಂ || 143 ||

ಪೂರ್ನಭದ್ರನಸುತಂ ಪಿಂಗಳಂ ಧೂಪವನ | ಹರ್ನಿಶಂ ಶಂಭುಗರ್ಪ್ಪಿಸುತಿರೆಯುದಂ ತಂದೆ | ನಿರ್ನಿಮಿತ್ತಂಪಳಿಯೆತಾತನಂ ತ್ಯಜಿಸಿಕಾಶಿಯೊಳರ್ಧಮಾಸವದರಿಂ || ಸ್ವರ್ಣದೀಧರನಂ ಯಜಿಸೆದಲಾಯಕ್ಷಂಗೆ | ತೂರ್ಣದೆವರದನಾಗಿಗಣಪತಿತ್ವವನಕ್ಷಿ | ಕರ್ಣಾಭರಣ ನಿತ್ತನೆಂದು ಶೈವದಧರ್ಮ್ಮಸಂಹಿತೆಯೆಮತ್ತಮುಲಿಗುಂ || 144 ||

ಶ್ರೀಕಂಧರಂಗೆ ಘಂಟಾಪ್ರದಾಸಂಗೆಯ್ಸೆ | ಲೋಕಪತಿಯತಿಬಲಗಣೇಶನಂ ಮಾಡಿಘಂ | ಟಾಕರ್ಣಗಣದಾಧಿಪತ್ಯಮುಂಕುಡನೆ ಘಂಟಾಕರ್ಣನೆಂಬವಂಗೆ || ಪ್ರಾಕಟಮಿದುದಧೀಚಿನೀರಾಜನಮನಿತ್ತೊ | ಡಾಕಪಾಲಿಯೆ ಸೌಖ್ಯಮಂನಿಗ್ರಹಾನುಗ್ರ | ಹಾಕಲಿತಶಕ್ತಿಯನವಂಗೀಯನೇ ಶಿವಪುರಾಣದಲ್ಲಿವುಸುಸಿದ್ಧಂ || 145 ||

ಮತ್ತೋರ್ವ ಘೋರನೀಶಾಲಯಂಬೊಕ್ಕುತ | ದ್ವಿತ್ತಮಂ ಕಳಲರಸುವೊಡೆಕೆಡುವದೀವಿಗೆಯು | ನೆತ್ತಿಲಿಂಗದ ಮುಂದದುಜ್ವಲಿಸಿತಾಫಲದಿನಾತಂಗೆ ನಿಜಸೌಖ್ಯಮಂ || ವಿತ್ತಾಧಿಪತ್ಯಮಂ ಯಕ್ಷಪೂಜ್ಯತೆಯನಾ | ಯತ್ತದಿಕ್ಪಾಲಪದಮಂಕುಬೇರಾಖ್ಯಮನು| ದಾತ್ತವಿಭವವನೀಶನಿತ್ತ ನೇಂಚಾಗಿಯೋಯಿದುಶಿವರಹಸ್ಯದರ್ಥಂ || 146 ||

ಶತಶಲಾಕದ್ವಿಜನಸೂನು ಜೈನಿಷತವ್ಯ | ಯತಿನೃತ್ತಗೀತಂಗಳೆಸಗೆ ಶಿವೆವೆರಸಿಬಂ | ದತುಳಭಕ್ತಿಜ್ಞಾನವಿರತಿಗಳ ನಾತಂಗೆ ಶಿವನಿತ್ತನೆಂದು ಶೈವಂ ||
ಪತಿಯುತೆಗೆಸಾವಿತ್ರಿಗಖಿಲ ವಿಭವವನದಿತಿ | ದಿತಿಶಚೀವಿನತಾದಿಗಳ್ಗಮಿತಸುತರನ | ರ್ಚಿತನಾಗಿ ಶಿವನಿತ್ತನೆಂದಿನಪುರಾಣದೋಳ್ ಮುನಿಕುಲಕೆ ಸೂತನೊರೆದಂ || 147 ||

ಅದನೇನನೆಂದಪೆಂಮುನ್ನೊಂದುಫಣಿಪಂಪ | ಸಿದುಬಾಯ್ಬಿಡುತ್ತೊರ್ಮೆಶಿವಪದಾಂಬುಪ್ರಸಾ | ದದ ಮೇಲೆತೀಡಿದನಿಲಂಪೀಸೆ ತದನಿಲಸ್ವೀಕಾರದಿಂದದರ್ಕೆ || ಮದನಹರನವನಿಭಾರಧುರೀಣತೆಯನಹಿಪ | ಪದವಿಯುಂ ಸರ್ವಜ್ಞತೆಯನಾತ್ಮಭೂಷಣ | ತ್ವದಪೆಂಪನಿತ್ತನೆಂದಿಂದ್ರಂಗೆ ನಾರದಂ ಹರಿವಂಶದಲ್ಲಿಪೇಳ್ದಂ || 148 ||

ಮತ್ತೆಕೇಳ್ವೈ ಶ್ವೇತನೆಂಬ ರಾಜರ್ಷಿಸ | ದ್ವೃತ್ತನೆಂದಿನವೊಲೀಶಾರ್ಚನದೊಳಿರೆ ಕಾಲ | ನೊತ್ತಂಬದಿಂಬಂದವನ ನೊಯ್ಯಲೆಳಸಿ ಕೆಡೆನುಡಿದಾಗ್ರಹಿಸುತೆಯ್ತರೆ || ಮತ್ತೆ ಶಿವನವರಳ್ಕುವರೆ ಯೆನುತೆ ಶಿವಮನುವ | ನೆತ್ತಿಜಪಿಸಲ್ಕೆಶಿವನಾಕಾಲನಂಸುಟ್ಟು | ದಾತ್ತಗಣಪದವಿಯಂ ಶ್ವೇತಂಗೆಕೊಟ್ಟನಿದು ವಿಸ್ತೃತಂಸ್ಕಾಂದದಲ್ಲಿ || 149 ||

ಸುತಕಾಮರಾಗಿ ಬಿಲ್ವಾರಣ್ಯದಲ್ಲಿಗುಣ | ವತಿಮೃಕಂಡುಗಳೆಸಗೆತಪವನೀಶಂಬಂದು | ಶತವರ್ಷದಧಮುಷೋಡಶವರ್ಷದುತ್ತಮನು ರೊಳಾವಿಷ್ಟಮೆನೆತ್ತಮಂ ಯು|| ಹಿತಮೆಂದು ಪಡೆದು ಸುಖಮಿರ್ದವಧಿಯೊರೆದೊರಲೆ | ಶಿತಿಗಳನೆನೊಲಿಸಿ ಮಾರ್ಕಂಡೇಯನಂತಕನ | ಹತಿಸಿಪಿತರರನುದ್ಧರಿಸಿ ನಿತ್ಯತೆಯ ಪಡೆದನಿದುತತ್ಪುರಾಣಸಿದ್ಧಂ || 150 ||

ನೆನೆಯುಬಾರದನೇಕದೋಷವನೆಸಗಿವಾರ | ವನಿತೆಗೆಂದೊರ್ಮೆಕಂಮಲ ರಸೊಯ್ವಲ್ಲಿಯೊಂ | ದು ನೆಲಕ್ಕೆ ಬೀಳ್ದೊಡೆತ್ತುವುದು ಘಟಿಸಡೆ ಶಿವಂಗೆನುತೆ ಯ್ದಿಯುಳಿಯಲದರಿಂ || ದಿನವೊಂದನನುಭವಿಸೆರಂಭೆಯೋಳ್ನೆರಪಲಾ | ವನಜ ಮುಖಿಯುಪದೇಶದಿಂ ಶಿವನಭಜಿಸೆ ಕಾ| ಲನನೀಶನುರುಪಿಯಾಶ್ವೇತಂಗೆ ಗಣ ಪದವನಿತ್ತನಿದು ಲೈಂಗ್ಯಸಿದ್ಧಂ || 151 ||

ಸುಕುಮಾರನೆಂಬನೊರ್ವಂ ವಿಪ್ರಸೂನುಕು | ಬ್ಜಕೆಯೊಳಿರ್ದ್ದಲ್ಲಿಯುಸ ಮಸ್ತಪರವಧುಗಳೋ| ಳ್ವಿಕರಿಸಿ ನೃಪಂಪೊರಮಡಿಸೆ ಪರವಿಷಯಕೆಬಂದಿರೆಕೊ ಳಕೆವಿಾಯಲೆಂದು || ಅಕುಲಜೆರಜಸ್ವಲೆ ಬರುತ್ತಮಿರೆಕಂಡು ಪಾ | ತಕನವ ಳರಮಿಸಿ ಮಧುಮಾಂಸಮಂಗ್ರಹಿಸಿಪಾ | ತಕರ ನೈವರ್ಸುತರನಿರ್ವಸುತೆಯರ ನಾಕೆಯೊಳೆಸಗಿಯುವಳಳಿವುದುಂ || 152 ||

ಆಸುತೆಯುರಂನೆರೆದಖಿಲಪಾಪಮಂ ಮಾಡಿ | ಭೂಸುರಶತಮನೆಯ್ದೆಕೊಂ ದುತದ್ದ್ರವ್ಯಮಂ | ಹೇಸದುಣುತಿರೆತದ್ಧರೇಶಂ ಕೊಲಲ್ ಭಟರನಟ್ಟೆಯುರಿ ದೋಡಿಪೋಗಿ || ಭಾಸುರಕಿರಾತದೇಶದವಣಿಕ್ಪಥಪುರದೊ | ಳೋಸರಿಸದಿರಲ ಲ್ಲಿಸೆವ ಭಕ್ತರಾಬಹಿ | ರ್ವಾಸಿನಾಗೇಶನಂ ಮಾಘಕೃಷ್ಣಚತುರ್ದಶಿಯುಮ ಪಾನಿಶಿಯೊಳೊಲವಿಂ || 153 ||

ಪೂಜಿಸುತ್ತಿರಲಲ್ಲಿಗಂತ್ಯಜೆಗೆನುತೆ ಕುಸುಮ | ರಾಜಿಯುಂತಿರಿಯಲೆಯ್ತಂ ದವರ್ಗಳಂನೋಡಿ | ಸೋಜಿಗಂಬಡುತೆ ಗೃಹಕೆಯ್ದಿಯುಂದಿಂಗೆಸಪ್ತತಿವರ್ಷ ಮಾಗಿಮಡಿಯೆ || ಆಜವನ ಭಟರೊಯ್ವುತಿರೆ ಕುಡದೆ ಶಿವದೂತ | ರಾಜಿಯೋ ಳ್ಪಡಿದು ಶಿವನೆಡೆಗೊಯ್ಯಲಾತಂಗೆ | ನೈಜಗಣಪದವಿತ್ತು ಯಮನಸೀಶಂ ಬೋ ಧಿಸಿದನಧಿಕವಿಸ್ತಾರದಿಂ || 154 ||

ಎಂತೆಂಬೆನವನಾಫಲದಿ ನೀಶಪುರದೊಳೋ | ರಂತೊಂದು ಕಲ್ಪಮನುಪ ಮಸುಖಮನನುಭವಿಸಿ | ಮುಂತೆ ಮುನಿಪದಧೀಚಿಯಾಗೊಗೆದು ಹರಿಯುಭಂಗಿ ಸಿಶಿವನೊಳೊಡವೆರೆಯನೇ || ಇಂತುಟುವಲಂಸ್ಕಾಂದ ಮಿದೆಪೂರ್ವದಲ್ಲಿಬಲ | ವಂತಂಹಿರಣ್ಯಾಕ್ಷತನಯನಂಧಕನಾಮ | ವಾಂತಪನುಜಂಹರೀಂದ್ರಾದಿಗಳನಂ ಜಲೆದೊಡಳ್ಕಿತದ್ದೇವನಿಕರಂ || 155 ||

ಮಂದರಕ್ಕೆಯ್ದಿ ಶಿವನಂ ಶರಣ್ಬೊಕ್ಕಿಪ್ಪುರ್ । ದುಂದ್ಯೈತ್ಯನಲ್ಲಿಗುಂಬರೆಯವನ ಬಲವೆಲ್ಲ | ವಂದಪಿಸಿ ಶೂಲದಿಂದವನನಿರಿದೆತ್ತೆ ಚಿರಕಾಲವಲ್ಲಿದ್ರ್ದ್ದತನ್ನಾ || ಮಂದತೆಯುಳಿದುಶಿವಜ್ಞಾನಮುದ್ಭವಿಸಿ ಬಾ | ಲೇಂದುಧರನಂನುತಿಸೆ ಶಂಕರಂಭೃಂಗಿರಿಟಿ | ಯೆಂದೆಂಬ ಪೆಸರಿಟ್ಟು ಗಣಪಪದವಿತ್ತನಿದುಲೈಂಗ್ಯಾದಿಗಳೊಳುಜ್ವಲಂ || 156 ||

ಬಳವಜ್ಜ್ರನಕನ ನೀಕ್ಷಿಸಿ ಭಯದಿನೋಡಿ ಬರು । ತಳಘುಶಿವತೀರ್ಥಕುಂಡಂಗಾಣದಲ್ಲಿ ಬೀ | ಳ್ದಳಿದ ಕಿಟಿಗೀಯನೆ ಶಿವಂಗಣಪಪದವನಿದು ಲೈಂಗ್ಯೋಕ್ತಿಮತ್ತಮೊರ್ವಾ || ಖಳನಾವ್ಯಗಧ್ಯಾನದಿಂ ಬಿಲ್ವವೇರಿಸಂ | ಜಳಿಪೆಸಳ್ಗಳಂ ಪರಿದುಬಿಸುಡುತಿರೆಲಿಂಗವಾ । ಕೆಳಗಿರಲವಡರೆ ಶಿವರಾತ್ರಿಸಮನಿಸೆ ಮುಕ್ತಿಯಾಯ್ತಿದಾಸ್ಕಾಂದಸಿದ್ಧಂ || 157 ||

ಪಿಂದೆಕೋಲಾಹಲಾಖ್ಯಂ ಶೂದ್ರನತಿಪಾಪಿ । ತಂದೆಯಂಕೊಂದು ತಾಯ್ಗಳಿಪಿವೇದವನಕ್ಕೆ | ಬಂದಳಿಯೆ ತನ್ನ ಹಿಮೆಯಿಂ ಮುಕ್ತಿಯಾಯ್ತುವಂಗಿದು ಮುಕ್ತಿಖಂಡದರ್ಥಂ || ಸಂದುಧನದಾಸೆಯಿಂ ತ್ರಿಸಹಸ್ರವಿಪ್ರರಂ | ಕೊಂದಾಪುಲಾಲವಧುಕಾಳಹಸ್ತಿಯೊಳಗೊ | ಲ್ದೊಂದಿಶೈವನನನಘಯಾಗಿಶಿವನೋಳ್ಬೆರೆದಳಿದು ವಲಂಸ್ಕಾಂದಸಿದ್ಧಂ || 158 ||

ಶಿವನೆಂದುಮುಳಲಗುಷ್ಟೆಯರಚಿಸಿ ಯುದರವೆ । ಲೆವಿಶುದ್ಧಗೋವಂಕರೆಯೆತಂದೆಕಂಡದನ | ಳಿವುದು ಮುವನಂಹತಿಸೆ ಚಂಡಂಗೆ ಶಿವನೊಲ್ದನಿದುಬಹುಪುರಾಣಸಿದ್ಧಂ|| ತವೆಹರ್ಯಜೇಂದ್ರಸುರದನುಜನರಫಣಿ ಮನುಮು | ನಿವಿಹಂಗಪಾದ್ಯಖಿಲರೀಶಕಾರುಣ್ಯದಿಂ | ದವೆಬಾಳ್ದರಿದು ಸಕಲಶಾಸ್ತ್ರಸಿದ್ಧಂಬಳಿಕೆ ಬಹುವಿಧದೊಳಾರಯ್ದೊಡಂ || 159 ||

ನೀವೆಹರಿಗಿಲ್ಲದೊಂದಭಿಯೋಗಮೆಸಗಿಪರ | ದೈವಮೆಂದುಲಿವಿರಲ್ಲದೆಪರಮಶಿವಭಕ್ತ | ನಾವಿಷ್ಣುವೆಂತೆನಲ್ ಭಸ್ಮದಿಗ್ಧಾಂಗಂತ್ರಿಪುಂಡ್ರಾಂಕಿತೋಕ್ಷಸ್ಥಲಂ || ಶ್ರೀವಿಶದರುದ್ರಾಕ್ಷಭೂಷಂ ಜಟಾಮಂಡ । ಲಾವಭಾಸಿತ ನಿಂದ್ರನೀಲಮಯಲಿಂಗವೂ| ಜಾವಿಭವನಕ್ಷಮಾಲಾಸ್ಫುರಿತಕರಂ ವ ಊಲಮಂತ್ರ ಪ್ರಸಿತಮಾನಸಂ || 160 ||

ದೇವಮುನಿಸಂಸ್ತುತ್ಯನಾಗಿಂತು ಮೆರೆವನಿದು | ಸಾವರ್ಣಿಕಾಖ್ಯಸಂಹಿತೆಯಾದಿಯಾದಶಾ। ಸ್ತ್ರಾವಲಿಗಳೊಳ್ಪ್ರಸಿದ್ಧಂ ಪ್ರಣವವೇದಗಾಯತ್ರಿಗಳುಮಾವ್ಯಾಸನುಂ || ಆವಿಬುಧರುಂತಾಪಸರು ಮಂತೆಸೆವರಿಳೆಯೊ । ಳೋವ್ರೊ ಹರಿತನ್ನಯುದಶಾವತಾರಂಗಳೊಳು | ಮಾವರನನಚಿಸನೆ ತತ್ತದಾಖ್ಯೆಗಳಿಂದಮಿವೆಲಿಂಗಮುವೆಪೇಳವೇ || 161 ||

ಶಿವನ ಶುದ್ಧತೆಯೋಳ್ನಿಮಿತ್ತವಿಲ್ಲದು ನಿಸ | ರ್ಗವೆಯಾದುದರಿ ನಾಸ್ಫಟಿಕದಂತುಳಿದದೇವ | ರವಿಶುದ್ಧಿಯೋಳ್ಹೇತುವಿಲ್ಲದು ನೈಜವಾದುದರಿನಾತಾಮ್ರದಂತೆ || ಇವನಿಂತುತಿಳಿಯದಿರಲಿಲ್ಲಿಯಾತ್ಮಾಶ್ರಯಾ | ದಿವಿಪಕ್ಷಭಾಧಕಂತರ್ಕಮೊಗೆಗುಂಬಗೆಯೆ । ಶಿವನಿಂದೆಶುದ್ಧರಪ್ಪರನಾದಿ ಶುದ್ಧಂಗೆಣೆಯೆ ಬಿಡಿಂಪಲವುಮಾತೇಂ || 162 ||

ಸಕಲಪ್ರಮಾಣಸಿದ್ಧನನೆಸಿದ್ಧಿಪುದತಾ । ರ್ಕಿಕವಲ್ಲಿಸಿದ್ಧಸಾಧನವೆಂಬದೋಷಂಸ್ಫು | ರಿಕುಮುದರಿನೀಶ್ವರನೆ ಪತಿ ಹರಿಮುಖರ್ಭೃತ್ಯರಿಂತೆಂದು ಗುರುವಲ್ಲಭಂ || ಪ್ರಕಟಮಿರ್ಪತ್ತೆಂಟು ದಿವಸಂಬರಂಪಾದಿ। ನಿಕರಂ ಪುರೇಯೆನಲ್ಶ್ರುತದಿನನುಮಾನದಿಂ | ದೆಕರಂತಿಳಿಪೆ ವಾದಿ ನುಡಿಯುಡುಗಿ ದೃಷ್ಟಾಂತಮುಂಟೇಯಿದಕ್ಕೆಂದನೆ || 163 ||

ಶರಧಿಮಧ್ಯದ ಮತ್ಸ್ಯಕೇಶನಿದಿರೋಳ್ಖ್ಯಾತಿ | ಯುರುಜಯಸ್ತಂಭದೋಳ್ ರಾಮಸಾಧಿಕ್ಯಮಂ । ಬರೆಯುತಿರೆವಾಯುಬಂದಾಹರಿಯ ಕುತ್ಸಿತದೊಳಗನೊರೆಯೆ ಬಿಟ್ಟು ಹರನೇ || ಪರವೆಂದು ತದ್ವಿಭವಮುಂಬರೆದನದೆ ದೃಷ್ಟ | ಮೊರೆವುದೇನೆನೆಯದಂತೋರಲಾಂ ಸೋಲ್ತೆನೆನೆ | ಗುರುವರನೊಡಂಬಟ್ಟು ಶರಧಿಪತಿಗೋಲೆಯುಂಬರೆಯಿಸಿದ ನಳವದೆಂತೋ || 164 ||

ಎಂತೆನಲ್ ಶ್ರೀಶಿವಾದ್ವೈತಸಾಕಾರಸಿ । ದ್ಧಾಂತಪ್ರತಿಷ್ಠಾಪನಾಚಾರ್ಯಪದ್ಮಣಾ। ರ್ಯಂತಚ್ಛಿವಾಜ್ಞೆಯಿಂಜಲಧಿಪಂಗಾ ಶೀಸ್ಸನೆಸಗಿ ಕಳಿಪಿದಲೇಖನಂ||ನೀಂತಡೆಯದಾಮತ್ಸ್ಯಕೇಶನಿದಿರಲ್ಲಿಹನು | ಮಂತಂಬರೆದ ಜಯಸ್ತಂಭೋಕ್ತಿಯಂಕಳಿಪು | ಕಂತುಜನಕನೆ ಭೃತ್ಯನೀಶನೇ ಸ್ವಾಮಿಯಾದೊಡೆನುತ್ತೆ ತಾಂಬರೆಯಿಸಿ || 165 ||

ಧರಣೀಶನಂನೋಡಿ ನಿನ್ನಮುದ್ರೆಯುಮನು । ಸ್ಥಿರಕೈಯ್ಯೊಳಿದ ನಿತ್ತು ಪಾದಿಯುವರಿವ್ಮ ವ । ವೆರಸಬ್ಧಿಗಟ್ಟಿನೆ ನೃಪಂತದ್ವಿಧಿಯೊಳಟ್ಟುವೆಡೆಯೊಳವರೆಂದರೊಂದಂ ॥ ಶರಧಿಯೇನೊಬ್ಬರ್ಮನುಜನೆ ನೀಗ್ಗೆರ್ಕೊಡುವವೋ । ಲ್ನಿರವಿಸುವ ವೋಲ್ಮಾಳ್ಪದಕ್ಕುಮೇಯೆನೆ ನೃಪತಿ । ಗುರುವನೀಕ್ಷಿಸೆ ವಿಸ್ಮಯಂ ಸಭಾಜನವನಾವರಿಸುತಿರೆ ನುಡಿದರಿಂತು ॥ 166 ॥

ಏವಣ್ಣಿಪೆಂ ಶಿವಶಿವಾ ಗುರುಕುಲಾಗ್ರಣಿಯು । ಭಾವೈಕನಿಷ್ಠೆಯೆಂತೋ ದೃಢಸ್ವಾಂತದೊಳು । ಮಾವರಧ್ಯಾನಮುಂ ಮಾಡಿ ಕಾಲತ್ರಯಜ್ಞನಿವಾರ್ಥಿಗೆಪೋಪರಂ ॥ ಓವೊಕರುಣಾದೃಷ್ಟಿಯಿಂ ನೋಡಿ ನಸುನಗುತೆ । ನೀವಿನಿಬರುಂ ಕಡಲತಡಿಗೆಯ್ದುವನಿತರ್ಕೆ । ಶೈವನೋರ್ವಂಪ್ರಸನ್ನಾನನಂ ಪಾಶಹಸ್ತಂ ಪಡುವಣಿಂದೆಬಪ್ಪಂ ॥ 167 ॥

ಆತನೀಸ್ಥಿತಿಯೆಲ್ಲವಂ ನಿಮ್ಮಮುಖದಿನರಿ । ದಾತತವಹಿತ್ರದೊಳ್ನಿಮ್ಮನೇರಿಸಿಕೊಂಡ । ನಾತಂಕದಿಂಜಲಧಿಯೊಳ್ನಡೆಯಿಸಲ್ಕೆ ಪಟವಿಲ್ಲದೆಯೆ ನಡೆದು ಚಲಿಸದೆ ॥ ಓತದಾವೆಡೆನಿಲ್ವುದದು ಜಯಸ್ತಂಭಮಿ । ಪ್ಪಾತಾಣವಲ್ಲೆಮ್ಮಪೆಸರ್ಪ್ಪೇಳ್ದುಶಿವಯೆಂಬ । ಮಾತುಗೆಡದೀಲೇಖಮಿರಿಸ ಲೊಡನಾಜಲಂ ಸ್ಥಲಮಾಗೊಳಗುದೋರ್ಪ್ಪುದು ॥ 168 ॥

ಆಮಾರ್ಗದೊಳ್ಪಡಂಗಿಳಿದುರುಜಯಸ್ತಂಭ । ಸೀಮೆಯೊಳ್ನಿಲ್ಪುದಾಗಳ್ತಲ್ಲಿಖಿತದೊರೆಯ । ನೀಮುಯ್ಯಣವಲಗೆಯೊಳ್ನಾಡೆ ಪತ್ತಿಸಿಕೊಂಡುಬಳಿಕಂ ವಹಿತ್ರಮೇರೆ ॥ ಏಮಾತೊಮೇಗಣ್ಗಡರ್ದುತಡಿಯನೆಯ್ದುಸುವು । ದೀಮಾಳ್ಕೆಯಿಂತನ್ನಿಮಿದುಪುಸಿದೊಡಾಂಭಕ್ತ । ನೇಮಹೇಶಂಪರಮೆಲ್ಲತ್ತಲ್ತು ಹರಿಯೆ ಪರವೀವಾದಿಯೇಗೆಲ್ದವಂ ॥ 169 ॥

ಪಲವೇಕೆಪೋಗಿಮೆಂದೆನೆಯುವರ್ಬೀಳ್ಕೊಂಡು । ಜಲಧಿಗೆಯ್ದಿದರತ್ತಲಿತ್ತಲಾಸಭೆಯೊಳಿದು । ನೆಲದೆಳೊಗೆದಂದವಲ್ತೆಂಬರ್ಕೆಲಬರಕ್ಕಟಇದೇನಂನೆಗಳ್ದನೋ ॥ ಉಲಿಯಲೆರ್ದನಡುಗುತಿದೆಯೆಂಬರ್ಕೆಲಬರಿದೆ । ನೆಲೆಗೆನಿಲ್ವುದೆಯೆಂಬುವರ್ಕೆಲಬರಾಭರ್ಗ । ನೊಲವುಳ್ಳವಗ್ಗಿರ್ದೇನರಿದೆಂಬುವರ್ಕೆಲ ಬರಿಂತುಗಜಬಜಿಸುತುಮಿರೆ ॥ 170 ॥

ಇನ್ನೇಕೆಗೆಲ್ದೆ ವೆನುತಿರ್ದವರಕೂಡೆಬರು। ಪನ್ನತಿಕೆಯಂಬೀರುತೇನಪ್ಪುದೋ ಯೆನುತೆ । ತನ್ನೊಳಗೆಚಿಂತಿಸುತೆವಾದಿಯಿರೆಕೆಲವು ದಿವಸಂಗಳೆದವರ್ಶೀಘ್ರದಿಂ ॥ ಮುನ್ನೀರತಡಿಗೆಯ್ದಲನಿತರೊಳ್ಪಡುವದಿ । ಕ್ಕಿನ್ನಾಡೆಗುರುವೊರೆದಕುರುಪಿನಿಂದೋರ್ವಶ್ಚೈ । ವನ್ನಿಟ್ಟನಿವರಪೊರೆಗೆಯ್ದಿಯನ್ಯೋನ್ಯಸಂಭಾಷಣಂಗೆಯ್ದುಮೇಲೆ ॥ 171 ॥

ಈಯಥಾಕಥನಮಂ ಕೇಳ್ದುಪುಳಕಿಸಿಯಾಂಸ । ಹಾಯಿಯಾಗಿಪಡಂಗನುರೆನಡೆಯಿಸುವೆನೆನು । ತ್ತಾಯೆಲ್ಲರ್ಥಂತರಂಡದ ಮೇಲೆಕುಳ್ಳಿರಿಸಿಕೊಂಪುಪಟಮಂಹಾರದೆ ॥ ಒಯ್ಯಾರಮುಳಿದವಸ್ರೋರ್ಜಿಗಂಬಡೆನಡೆಯಿ । ಪಾಯುವಸರದೊಳದಭ್ರಾಭ್ರಮುಭ್ರಾಜಿತಾ । ಭ್ರಾಯತ್ತಕಣಗಣೋಡ್ಡಿಂಡೀರಪಿಂಡದವನಧಿಯೆಸೆದುದೇವಣ್ಣಿಪೆಂ ॥ 172 ॥

ವಿದ್ರುಮವನಾವೃತಂ ವಿದ್ರುಮವನಾವೃತಂ । ಭದ್ರಮುಕ್ತಾಶೋಭಿಭದ್ರಮುಕ್ತಾಶೋಭಿ । ಯುದ್ರಾವಮ್ಯೆನಾಗವರ ಶರಣನುದ್ರಾವಮ್ಯೆನಾಗವರಶರಣಕಂ ॥ ಸದ್ರತ್ನಸಂಗಸತ್ರೋದ್ರೇಭಶರನಿಜಯ ।ಸದ್ರತ್ನಸಂಗಸತ್ವೋದ್ರೇಭಶರನಿಜಯ । ಮುದ್ರಿಕ್ತತಾಶೂನ್ಯಮುದ್ರಿಕ್ತತಾಶೂನ್ಯಮಂಭೋಧಿಯುಜ್ಜೃಂಭಿಕುಂ ॥ 173 ॥

ಕುವಲಯಾವೃತ ಶೋಭಿಮಾರ್ತಂಡಮಂಡಿತಂ । ವಿವಿಧಭೇರುಂಡಾತ್ತಮಪಿಲಹರಿರಿಪುಸೇವ್ಯ । ಮವಿರತಂಜಡನಿಧಿಯಶೇಷಾನಿಮಿಷ ಮಹಾಕ್ರೀಡಾಸ್ಥಲಂಭಾವಿಸೆ ॥ ನವವಿದ್ರುಮಾಭಾಸಿವನವಸುಪ್ರಥಿತಮು । ಧ್ಭವನವೀಚಿಸ್ಫೂರ್ತಿಮುಕ್ತಾವಲೀವಿಲಸಿ । ತವೆನಿಸಿಸಮುದ್ರಮೆಸೆದುದುವೈರವೃತ್ತಿ ಶಾಂತರಸಾತ್ಮರೆಡೆನಿಲ್ವುದೆ ॥ 174 ॥

ವನಗಜಧ್ವನಿಮರ್ದಲಸ್ವನಂ ವೇಲಾವಿ । ಪಿನಕೀಚಕವೆಸುಷಿರವಾಮಹಾಘೋಷವೇ । ಘನಗೀತಮೂರ್ಮಿಘಟ್ಟನವೆ ತಾಳಂನೀಗ್ಗಿಳಿವಘನವಸಿತಯವನಿಕೆ ॥ ಮಿನುಗುವತತಟಸ್ಥಶುಕ್ತಿಜಮೆಪುಷ್ಪಾಂಜಲಿಪ।ವನನೇನಟಂಶೀಕರಾಳಿನರ್ತಕಿಯಿಂತಿ । ವನುಗೊಳಿಪಯೋಧಿವರುಣನ ನಾಟ್ಯರಂಗಸ್ಥಲವೊಯೆನಿಸಿಕಣ್ಗೆಸೆದುದು ॥ 175 ॥

ಇಂತೆಸೆವವಾರ್ಧಿಯಂ ನೋಡುತುಂಕೊಂಡಾಡು | ತುಂತರಂಡದಮೋಲವರ್ಪೊಗುತಿರೆಜವದಿ | ನಂತದೆಯ್ದುತೆಜಲಧಿಮಧ್ಯದಲ್ಲೊಂದೆ ಡೆಯೊಳೆತ್ತಲುಂಜಲಿಸದೆನಿಲೆ || ಅಂತವರಿದಾಜಯಸ್ತಂಭದಸಸಿನವೆಂದ | ನಂತಜೋದ್ಯಂಬಡುತ್ತಾರ್ಯನಟ್ಟಿದನೆನು | ತ್ತಾಂತಲೇಖವನೀಶಮನುವೊರೆವುತಾನೀರೊಳಿಡಲೊಡನದೇವಣ್ಣಿಪೆಂ || 176 ||

ಮುದನಪರಮತ್ಸ್ಯಕೇಶ್ವರನಾಲಯುವನಮುಮ | ಪದಪಿಂಪ್ರದಕ್ಷಿಣಂಗೆಯ್ವುಬಗೆಯೊಳಿವಾಂಕಿ | ತಪಜಯಸ್ತಂಭಮಂ ತೋರಿಸೆಂದಪ್ಪಪತಿಯಂಗುರುವಿನಧಿಕಶಕ್ತಿ || ಅದಿರದ ತೆಗೆದು ನಿಲಿಸೆಗೆರೆಯ ಬರೆವಿರವೊಳಿವ | ಪದವನರಿಯದವ ತೊರ್ಗಳಲ್ಪರಿಂತು ಭವಾರ್ಣ | ವದೊಳೆಂದುತೋರ್ಪ್ಪನುವೊ ಎನೆಲೇಖವಾಪಡಂಗಂಬಳಸಿ ಬಳಸಿತಿರುಗೆ || 177 ||

ಪಿಂದೋರ್ವಶಿವಭಕ್ತಮುನಿಮುನಿದು ತನ್ನಕೈ | ಗೊಂಡುಪಂದುವವೊಲೆನ್ನಂವಾಡಿಕುಡಿದನದ | ರಿಂದೆಗುರುಪೇಳ್ದಟ್ಟಿದಂತೆಸಗದೊಡೆ ಕೆಡುವೆನೆಂದನಿತುನೀರ್ದ್ದೆಗೆದನೋ || ಮುಂದೆವಾದಿಯಗರ್ವ ರಸವರೆವಿರವ ಸೂಚಿ | ಪಂದವೋಮೇಣ್ ಗುರೋ ರಾಜ್ಞಾಂ ನಲಂಘಯೇ | ದೆಂದುಲಿವ ಶಾಸ್ತ್ರೋಕ್ತಿಯಂಜನಕೆ ತಾಂನಡೆದು ತೋರ್ಪಬಗೆಯೋ ಬಳಿಕ್ಕಂ || 178 ||

ಸಾರತರಶಿವನಾಮುಮಂ ಸ್ಮರಿಸಿದಗ್ಗಮುಮ | ವಾರಾಂನಿಧಿಧ್ರುವಂಸ್ಥಲತಿಯೆಂದೊರೆದಾದ್ಯ |ರಾರಸೋಕ್ತಿಯ ಸತ್ಯಮೆಂದು ದೃಷ್ಟಂದೋರ್ಪನುವೊ ದೇಶಿಕನಕೀರ್ತಿಯಂ || ಚಾರುಪಾತಾಳಕೆಯ್ದಿಪೊಡೆವರುಣಂ ಸಮೆದ | ಧಾರಿಯೋ ಗುರುಮುಹಿಮೆಗಳ್ಕಿಜಜ್ಜನೆ ಜರಿದ | ವಾರಿನಿಧಿಯೆರ್ದೆಯೊ ಗುರುರಾಟ್ರ್ಪತಾಪಾಗ್ನಿಯನಿತುದಕಮಂ ಪೀರ್ದುದೊ ಎನೆ || 179 ||

ಆಪತ್ರಿಕಾಭ್ರಮಣದನಿತು ವಲಯುದೊಳುಳ್ಳ | ಕೂಪಾರವಾರಿಕೂಪಂದೋಡಿದವೊಲಾಗೆ | ಮಾಪನುತಮತ್ಸ್ಯಕೇಶ್ವರನೆಡೆಗೆ ಸುರರೇರಿಪೋಪಪುಷ್ಪಕವೋಎನೆ || ಆಪಥದೊಳಾಪಡಂಗಿರ್ದವೊಲಿಳಿಯೆವಹಿ | ತ್ರೋಪರಿಸ್ಥಲದಿನವರಿಳಿದಾಶಿವಂಗೆರಗಿ | ದೀಪಿತಜಯಸ್ತಂಭ ಲಿಖಿತಮಂ ಮಯಣ ವಲಗೆಯೊಳೊಪ್ಪವೋಲ್ಪತ್ತಿಸೆ || 180 ||

ಸೀರೆಯಂಸುತ್ತಿ ಮುದ್ರೆಯನಿಕ್ಕಿ ತಲ್ಲಿಂಗ | ಕೋರಂತೆನಮಿಸಿಬೀಳ್ಕೊಂಡುಭೈತ್ರವನೇರಿ | ಮಾರಾರಿಸಮಯಮಿಂತೂರ್ಧ್ವಗತಮಪ್ಪುದೆಂದರಿಪುವೊಲದೂರ್ಧ್ವಕಡರೆ|| ಚಾರುದೇಶಿಕನೊಡನೆ ಪೆಣಸುವನಬಾಯ್ಮುಚ್ಚು|ವಾರೀತಿಯಂತೋರ್ಪವೋಲ್ಮುನ್ನಿನಂತೆ ತ| ದ್ವಾರಿಯಮುರ್ದುದು ಬಳಿಕ್ಕಾನಾಪಿಕಂ ಪಡಂಗಂತಡಿಯನುರೆಸೇರಿಸಿ || 181 ||

ಹರಹರಾನೋಡನೋಡಲದೃಶ್ಯನಾಗಲ | ಚ್ಚರಿವಡುತ ವರ್ತದ್ವಪಿತ್ರಮನಿಳಿದುದೋರ | ಶರಧಿಗೆಭರದೆಬಂದು ತತ್ಸಮಸ್ತರಿನೆಸೆವ ಭೂಪಂಗೆಕ್ಕೈಮುಗಿವುತುಂ || ಗುರುವಿಂಗೆರಗುತೆ ವಾದಿಯನುಡಿಸುತುಂ ಸಭಾ| ಸ್ಥರನೀಕ್ಷಿಸುತ್ತಾಮಯಣವಲಗೆಯುಂ ನೃಪನ | ಕರದೊಳಿಟ್ಟಾಸ್ಥಿತಿಯನೆಲ್ಲವಂಬಿನ್ನವಿಸೆ ಕೇಳ್ದುಚೋದ್ಯಂಬಡುತ್ತುಂ || 182 ||

ಮೋದದಿಂಸಾಮಾಜಿಕರ ಕರದೊಳೀಯುತಿದ | ನೋದಿಮೆನೆ ಕೈಕೊಂಡು ತತ್ಫಲಕಮುದ್ರೆಯಂ| ಪಾದಿಯೆರ್ದೆಯೊಡೆಯಲೊಡೆದವನ ಮರವೆಯನುಗಿವವೋಲದರ ಮುಸುಕನುಗಿದು || ಆದಿಜರಮುಂಬರಮುದಂ ನೋಡಿಮೇಣ್ಬುರುವ| ನಾದರಿಸುತಾವಾದಿಯುಂ ನೋಡಿನಸುನಗು | ತ್ತೋದಿದಘೂಪಚಿತ್ತವಿಸೆಂದುತತ್ಸರ್ವರುಂಕೇಳುತಿರಲೆಂತೆನೆ || 183 ||

ಸ್ವಸ್ತಿಸರ್ವಾಮರಾನರ್ಘ್ಯಮಣಿಮುಕುಟ ವಿ | ನ್ಯಸ್ತಪಾದಂಗೆ ನಿತ್ಯಾಮಲಾನಂದ ಪರ | ವಸ್ತುಗೆ ಲಸನ್ಮಹಾದೇವಂಗೆ ನಿರುಪಮುಜಮಪ್ರಾಪ್ತಿಯಲ್ಲದುಳಿದಾ|| ವಾಸ್ತೋಷ್ಪತಿಬ್ರಹ್ಮ ವಿಷ್ಣ್ವಾದ್ಯಖಿಲಸುರರ್ಗೆ| ಶಸ್ತಮಿಲ್ಲಿಲ್ಲಪಜಯಪ್ರಾಪ್ತರೆಂತುಂ ನಿ| ರಸ್ತರದರಿಂ ಪಶುಗಳೀಶನೇಪತಿ ತಚ್ಛಿವಾಸ್ಥಾನದೋಳ್ಗಣಕುಲಂ || 184 ||

ರವಿಗೆಪುಂಡ್ರೇಕ್ಷುವಂಶಿಖಿಗೆ ಮಣಿಕಂಕಣಮ | ನವಿಕಲಿತ ಮಂದಾರ ಮಾಲೆಯಂ ಶಾರದಾ | ಯುವತಿಗೈಮೊಗದ ಮಕುಟವನಬ್ಜಜಂಗೀಪರಿಯೊಳಖಿಲಸುರರ್ಗೆ ಕೊಟ್ಟು || ಅವರನುರೆ ನಾಣ್ಚಿಸುತ್ತಿರೆ ನಂದಿಕೇಶ ನೊ| ಪ್ಪುವಹಾಸ್ಯಮುಖನಾಗಿ ವೇತ್ರಮಂಜಡಿಯುತಾ | ದಿವಿಜರಂಭಂಗಿಸುವುದಂಬಿಡಿಪನಾತಂ ಸಲಹುಗೆನುತೀಯರ್ಥಮಂ || 185 ||

ಎತ್ತಿಪೊಣ್ಣೇಯೆನುತೆ ಪುಂಡ್ರೇಕ್ಷುಕಾಂಡಮೆನು | ತ್ತುತ್ತಮಾಶೀರ್ಮುಖದಿನೀಶನ ಘನವನಿಂತು | ಬಿತ್ತರಿಸಿವಾತಿಬರೆದಿರಿಸಿದ ಜಯಸ್ತಂಭದೊರೆಯನವರೋದಲೊಡನೆ || ಸುತ್ತೇನೊನೃಪತಿಯುಂ ವಿಬುಧರುಂಸಭ್ಯರುಂ | ಮತ್ತುಳಿದ ಜನಮುಂ ಪುರೇಯೆಂದು ಕರಯುಗವ | ನೆತ್ತಿನಮಿಸಿದರೀಶಭಕ್ತರುಘೆಯುಘೆಯೆಂದರಾ ವಾದಿನುಡಿಯುಡುಗಿದಂ || 186 ||

ಪರವಾದಿವೋಹಾಂಧಕಾರ ಮಾರ್ತಂಡಜಯ | ಪರವಾದಿಗರ್ವಪರ್ವತದಳನವಜ್ರಜಯ | ಪರವಾದಿಮಹಿಮೋನ್ನತಿಪ್ರಬಲಭೂಜವಿಚ್ಛೇದನಪರಶ್ವಥಜಯಾ || ಪರವಾದಿವಾಹಿನೀ ವಾರ್ಧಿವಡಬಾಗ್ನಿಜಯ | ಗುರುಪದ್ಮಣಾರ್ಯ ಜಯಜಯಯೆಂದು ಪಾಠಕಾ | ದ್ಯರನೇಕವಿಧದೊಳಂಕಿಸಿದರಾಗಳ್ ನೃಪಪ್ರಮುಖರ್ಗುರುವನೀಕ್ಷಿಸಿ || 187 ||

||ಇದುಚಕ್ರವಾಳಂ||ನೆನೆಯಲಕ್ಕುಮೆನೆನೆದೊಡಂ ನುಡಿಯಲಕ್ಕುಮೇ | ನೆನೆದೊಡಂನುಡಿದೊಡಂ ಬರೆಯಿಸಲ್ಬಕ್ಕುಮೇ | ನೆನೆದೊಡಂ ನುಡಿದೊಡಂಬರೆಯಿಸಿದೊಡಂ ಕಳಿಪಲಕ್ಕುಮೇತಾಂ ನೆನೆದೊಡಂ || ನಿನೆನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ| ನನಸಾಗಿತೋರಲಕ್ಕುಮೆ ನೆನಪುನುಡಿಬರೆಯಿ | ಪನು ಕಳುಪುವುದು ತೋಪ್ಪುರ್ದಿನಿತುವುಂ ನಿನಗಲ್ಲದಿಲ್ಲೆಂದು ಬಂಣಿಸುತಿರೆ ||188||

ತಲೆದೂಗದವರಿಲ್ಲ ನಾಸಾಗ್ರಭಾಗಕಂ | ಗುಲಿಯನಿಡದವರಿಲ್ಲ ಶಿವಶಿವಾಪೊಸತಿದೆಂ | ದುಲಿಯದವರಿಲ್ಲೆಂದುವುಂ ಕಂಡುಕೇಳ್ದುದಲ್ಲೆಂದು ಕುರುಪಿಡದರಿಲ್ಲಾ || ಉಲುಪಡಂಗಿದವಾದಿಯುಂನೋಡಿ ನುಡಿಸಿಮೂ | ದಲಿಸದವರಿಲ್ಲ ಪೊಗಳದವರಿಲ್ಲಾಶ್ಚರ್ಯ | ಜಲಧಿಯೋಳ್ಮುಡಿಮುಳುಗಾಡದವರಿಲ್ಲಾ ಸಮಯದಲ್ಲಿಪದ್ಮಣಾರ್ಯಂ || 189 ||

ಮುಂದಿರ್ಪವಾದಿಬಲಮುಂನೋಡಿ ಮದ್ಭಾಷೆ | ಸಂದುದೇಪಾಸನೀನಿನ್ನಿಂತಸತ್ಯದ | ಲ್ಲೊಂದಿಕಾಳ್ಗಿಡೆಯದಿರ್ ವೇದದೊಳ್ಪುರುಷಾರ್ಥಮಿಲ್ಲೆಂಬ ಪಾಂಚರಾತ್ರ|| ನೀಂದಲುಲಿಯದಿರು ಪಾಷಾಣತ್ವವಪವರ್ಗ | ಮೆಂದೆಂಬ ವೈಶೇಷಿಕನೆ ಮಿಡುಕದಿರನಿತ್ಯ | ವೆಂದೆನಿಪಚಿತ್ತಿಗಾಶ್ರಯನಾತ್ಮನೆಂಬ ನೈಯ್ಯಾಯಿಕನಿನಗೆನಿಲ್ಲುಕುಮೇ || 190 ||

ಕೆಡುವೀಪ್ರಪಂಚಮಂ ನಿತ್ಯವೆಂದೆಂಬ ಬಾ | ಯ್ಬಡಿಕಮೀಮಾಂಸಕಾ ನೀಂಸುಮ್ಮನಿರ್ ಪುಂಸ್ತ್ವ | ಜಡಭಾವಪುರುಷ ಪ್ರಕೃತಿಗಳವಿವೇಕಿಸಿಯರಿಯೆ ಮೋಕ್ಷವೆಂಬಸಾಂಖ್ಯಾ || ಉಢುಗುಷಡ್ವಿಂಶ ಮೀಶ್ವರತತ್ವಮೆಂದು ನಿಜ | ದೆಡೆಯನರಿಯದೆ ಭವಕೆಬರ್ಪಪಾತಂಜಲನೆ | ನುಡಿಯದಿರ್ ಬ್ರಹ್ಮಕ್ಕೆಜೀವತೆಯ ನೊರೆವವೇದಾಂತಿ ನಿನಗೇತರರಿವೈ || 191 ||

ಪರಶಿವಂಪರಿಣಮಿಪನೆಂಬೆಲೆ ಪ್ರಾತ್ಯಭಿ | ಜ್ಞರಿರ ಪರಿಣಾಮವುಂಟೇ ಚಿನ್ಮಯಂಗಿದು ಬು | ಧರಮೆಚ್ಚೆ ಘನಶಿವಾದ್ವೈತದ ರಹಸ್ಯವರಿಯದ ಭೇದವಾದಿತೊಲಗೈ || ಕರಣೇಂದ್ರಿಯಂಗಳಂ ಚೈತನ್ಯವೆಂದರಿಯ | ದೊರೆವತತ್ತ್ವಚ್ಚೈತನಿಕವಾದಿಗಳಿರಸ್ಯೆ | ತಿರಿಮಕಟನಿಷ್ಫಲಂ ನಿತ್ಯಕರ್ಮಯೆನಲ್ಕೆ ಸಲ್ಲುವೇ ಪ್ರಾಭಾಕರಾ || 192 ||

ಓವಲರಿಯದಯಜ್ಞಪುರುಷನೆಲೆ ಯಾಜ್ಞಿಕಾ | ದೈವವೆ ಪಿತಾಮಹನ ಬಗೆಯರಿಯ ಪೌರಾಣಿ | ಕಾವಚಿಸುವರೆ ದೈವವೆಂದವನನೀಶ ಕೃತವೇದಂ ಸ್ವಯಂಭುವೆಂಬಾ ||ಗಾವಿಲನುಡಿಯ ಭಾಟ್ಟವಾದಿಮುಟ್ಟಮಿರ ಶೌ | ಚಾವಿಷ್ಟ ನರಕಪಾಲದೊಳೆ ಭಿಕ್ಷೆಯನೆರೆದು | ಸೇವಿಸಲ್ವೇಳ್ಕುಮೆಂದೆಂಬ ಕಾಪಾಲಿಕಾ ನಿನ್ನ ಮಾತುಂಸೇವ್ಯಮೇ || 193 ||

ಯುಕ್ತಿಸಲ್‌ಸಂಸ್ಕೃತ್ಯವಸ್ಥೆಯೊಳಮಣುಗೆ ಚಿ | ಚ್ಛಕ್ತಿಯೇಯೆಂಬೆಲೆ ಮಹಾವ್ರತನೆನಿನ್ನದುದು | ರುಕ್ತಿಬಿಡು ಶಿವನ ಚಿತಿಯಾತ್ಮರೋಳ್ಸಂಕ್ರಮಿಪುದೆಂಬಪಾಶುಪತನಿಲ್ಲೈ||ಯುಕ್ತಿಯಂಬಿಟ್ಟು ಜಡಕರ್ಮವೇದೈವ ಮೆಂ|ದುಕ್ತಿಸುವ ಕರ್ಮವಾದಿ ಸಮಂತಿರಚಿದಧಃ | ಶಕ್ತಿತತ್ವವನೆಯ್ದುವುದೆ ಮುಕ್ತಿಯೆಂಬುದಶಾಕ್ತನೆ ನಿನ್ನತಿಳಿವೆಂತುಟೈ || 194 ||

ಎಲೆಲೆಹಿಂಸಾಮೈಥುನಂಗಳುಳ್ಳುದರಿನು | ಜ್ವಲಿಕುಂಪಿಶಾಚ ಪದವದನಡರ್ವ ಕೌಳಯಾ | ಮಳರಿರಾಕೆಲೆಯದಿರಿ ಮಚ್ಛೈತನ್ಯಭೂತಂಗಳುಂ ರಾಹುಭಯದೆನೋವಾ || ಜಲಜಾರಿರವಿಗಳುಂ ಬದ್ಧಾತ್ಮನುಂ ಶಿವನ | ತುಲ ತನುಗಳಂತರಿಂದಿವೆ ದೈವವೆಂದರಿಯು | ದುಲಿವಷ್ಟಮೂರ್ತಿವಾದಿಯವಕ್ಕೇ ಶಿವನೊಡೆಯನೆಂದರಿಯೆ ನಿನಗೆಮಾತೇಂ || 195 ||

ಹರಿಹರಗರ್ಾಹರಿಹರಾಜಗ್ಗರ್ಗ ಭೇದವೆಂ | ಬೊರೆಯಿಂ ದ್ವಿಮೂರ್ತಿತ್ರಿಮೂರ್ತಿ ವಾದಿಗಳಿರಿ|ಸೊರಹದಿರಿಮವರ್ಗೆ ಹರನೊಡೆಯನೆಂದಾಮ್ನಾಯಮುಖದೆ ಸಿದ್ಧಿಸಿದೆವಾಗಿ || ಇರದಳಿವ್ವೊಡಲೆಯಾತ್ಮನಳಿದುದೆಮುಕುತಿ ಯೆಂಬ | ನರಕಿಲೋಕಾಯತನೆ ಗಳಪದಿರಶುದ್ಧಿಗಾ | ಕರವಾದ ಬುದ್ಧಿಪರವೆಂದು ಯತ್ಸತ್ತತ್ಕ್ಷಣಿಕಮೆಂಬ ಬೌದ್ಧಮತದಾ || 196 ||

ಸರ್ವಶೂನ್ಯತೆಯೊರೆವ ಮಾಧ್ಯಮಿಕ ಮತಿಯುಡುಗು | ಗರ್ವಿಯೋಗಾಚಾರಬುದ್ಧಿಮಾತ್ರವನೆ ಬಗೆ |ದುರ್ವದಿರು ಬುದ್ಧಿಯಾಕಾರದಿಂದಖಿಲ ಬಾಹ್ಯಾರ್ಥಮನುಮೇಯಮೆಂಬಾ ||ದುರ್ವಿದಗ್ಧತೆಯನುಳಿ ಸೌತ್ರಾಂತಿಕನೆ ನಿನಗ | ನಿರ್ವಾಹ್ಯವೆನಿಸುವವಯವಮಾತ್ರವನೆನೆರ್ವಿ | ಕೊರ್ವದಿರು ವೈಭಾಷಿಕಾ ವ್ಯಕ್ತಚಿತಿಯಳಿವುದೇಪ್ರವಾಹೇಶವಾದಿ || 197 ||

ಸಲೆಯಚೇತನತಾಧ್ರುವತ್ವಾದಿ ದೋಷಂಗ | ಳಲೆವುವು ಶರೀರಪರಿಮಿತನಾತ್ಮನಾದೊಡೆಂ|ದೆಲೆತಿಳಿಯದಪ್ರಬುದ್ಧ ಕ್ಷಪಣಕಾಬೆಸೆಯದಿರನೇಕ ಮುಖದಿನೊಗೆದು || ನೆಲೆಯಿಲ್ಲದಳಿವ ಕಾಲವೆದೈವವೆಂಬನು | ಜ್ವಲಕಾಲವಾದಿಯುಬ್ಬದಿರನೇಕೇಚ್ಛೆಯಿಂ | ಫಲಿಸದಾವುದುಮೆಂದರಿಯದನೇಕೇಶ್ವರಾಹ್ವಯವಾದಿಸೊಕ್ಕರ್ನುಳಿಯೈ || 198 ||

ಜಡನಿಸರ್ಗಂಗಳ್ ನಿವೃತ್ತ್ಯಾದಿಭುವನಂಗ | ಳಡಸಿಯವನೆಯ್ದಿದುದೆ ಮುಕ್ತಿಯೆಂಗುಳ್ಳ ಗಾ | ರುಡ ದಕ್ಷಿಣಸುವಾಮಭೂತ ತಾಂತ್ರಿಕರಿರಾನಿಮ್ಮ ನುಡಿಗಳ್ಶ್ಲಾಘ್ಯಮೇ || ಬಿಡಿಮಭವಮತಕೆ ಸರಿಯಿಲ್ಲಿಲ್ಲಯಿಾನುಡಿಗೆ |ಮುಡಿಗೆಯ್ಯಿಕ್ಕದೆ ಸಾರ್ಪೊಡೆತ್ತಿಮೆಂದಾರ್ಯನವ | ಗಡಿಸಿ ವಾದಿಗಳೆರಗುವಿನ ಮಿಂತೊರೆಯೆನೃಪಾದಿಗಳೇಳ್ದು ನಿಂದುನಮಿಸಿ || 199 ||

ಸೂರ್ಯಾಂಶುಗಿದಿರೆ ತಿಮಿರಾಳಿಯುರ್ವ್ವಿಲೆ ಪದ್ಮ | ಣಾರ್ಯನಿನ್ನುಕ್ತಿಗಿದಿರೇವಾದಿತತಿಯಚಾ | ತುರ್ಯವೆಂದಿಂತು ಪಲತೆರದೆಪೊಗಳ್ದುಚಿತಸತ್ಕಾರಮನೆಸಗೆ ಗುರುವರಂ || ತೌರ್ಯತ್ರಿಕಂಪೊಣ್ಮಲೇಳ್ದು ನಡೆತಂದುನರ | ವರ್ಯಮುಖರಂ ನಿಜಗೃಹದ್ವಾರದೊಳ್ಕಳಿಪಿ | ಯಾರ್ಯೇಶಭಕ್ತತತಿವೆರಸಂತವುರಕೆಯ್ದಿ ಶಿವಸುಖದೊಳೊಪ್ಪುತಿರ್ದ್ದಂ || 200 ||

ಮದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದಭ್ರಮಕರಂದಲೀಲಾ ಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರಣೀತಮಾಗಿ || ಸದಮಳಾಖಿಳಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣಕಥೆಯೊಳಿಂ | ತಿದು ವಾದಿಯಂಗುರುವೊಡಂಬಡಿಸಿಗೆಲ್ದಪಂನೊಂದನೆಯ ಸಂಧಿಯೆನಿಕುಂ || 201 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶಕಕೆರೆಯ ಪದ್ಮಣಾರ್ಯನ ಲಸ | ಚ್ಛ್ರೀಶಿವಾದ್ವೈತ ಸಾಕಾರಸಿದ್ಧಾಂತ ಪ್ರತಿಷ್ಠಾಪನಾಚಾರ್ಯಸಾ || ಈಶುದ್ಧಚರಿತಮಂ ತಿಳುಹಿದರ್ಗೋದಿದ|ರ್ಗಾಸೆಯಿಂ ಕೇಳ್ದರ್ಗೆಭುಕ್ತಿಮುಕ್ತಿಗಳಂ ಮಹಾ | ಶುಭಂಗಳನಾಯುವಂಕೊಟ್ಟು ಗುರುರೂಪವಿಶ್ವನಾಥಂ ರಕ್ಷಿಪಂ || 202 ||

ಅಂತು ಸಂಧಿ 11 ಕ್ಕಂ ಪದ 1,137 ಕ್ಕಂ ಮಂಗಳಮಗಮತ್ ಶ್ರೀ ಶ್ರೀ ಶ್ರೀ ಶ್ರೀಗುರುರೂಪ ವಿಶ್ವನಾಥಾಯನಮೊನಮಃ.

## ಹನ್ನೆರಡನೆಯ ಸಂಧಿ.



ಆರರಿಯಲಕ್ಕುಮೋ ಶಿವಶಿವಾನರರ ಸಂ | ಸ್ಕಾರಮಂತದ್ವಾದಿಗುರುಪುಂಗವನನೊಲಿಸಿ | ಚಾರುಶಿವದೀಕ್ಷೆಯಂ ನಿಜಕುಟುಂಬಂ ವೆರಸುಪಡೆದಮಲಸುಖದೊಳೆಸೆದಂ || ಪಲ್ಲ ||

|| ಪದ || ಭದ್ರತರಘನಕೂಲಮುದ್ರುಜವಿಸ್ಫೃತ್ವರೋ | ದ್ಯದ್ರೇಭಶೋಭಿತಾಶೀರ್ಣ ಶೀಕರವಿಕೀ | ರ್ಣೋದ್ರಿಕ್ತಭೂರಿಭಂಗಾಭೋಗ ಭಂಗಿಭರಿತಭಾಸ್ವಮಾನಫೇನ || ಸದ್ರಾಜಿರಮಣೀಯಭಾರ್ಗವಚ್ಛಾತ್ರದು | ಹೃದ್ರುಚಿರಮುಂದಿರವರ ತರಂಗಿಣೀಪೂರ | ಭೃದ್ರುಂಫಿತೋರುನೀರಂಧ್ರಮೇದುರ ಜಟೋನ್ನಿದ್ರ ಜಯವಿಶ್ವನಾಥಾ || 1 ||

ಅಂತಾರ್ಯವರ್ಯಂಗೆ ವಾದಿವಾದದೆ ಸೋಲ್ತು | ನಂತರದೊಳವರೊಡನೆ ಸಂಭಾಷಿಸಿದ ಪುಣ್ಯ | ದಿಂತಚ್ಛಿವಜ್ಞಾನಶಕ್ತಿಪಾತಂಸ್ಫುರಿಸೆ ನಿಜಭವಿತ್ವಕ್ಕೆ ಪೇಸಿ || ಕಂತುಹರದೀಕ್ಷೆಯಂ ಕೈಗೊಂಡು ದುಷ್ಕೃತ|ಧ್ವಾಂತಮುನಲೆಪೆನೆಂದು ನೆನೆದು ತನ್ನಕುಟುಂಬ | ವಂತಡೆಯುಷಾಪುರಕೆ ಬರಿಸಿವಾಸಂಗೆಯ್ದು ಗುರುಕೃಪೆಯ ಪಡೆವೆನೆನುತುಂ || 2 ||

ಏವಣ್ಣಿಸುವೆ ಸಾತ್ಮಮಲಿನವಂ ತೊಳೆವಂತಿ|ರೋಽವೊತಷ್ಟ್ವೀತಮೃತ್ತಿಕೆ ಯುಮಂತೊಳೆದಸಮ | ಪಾವನವಿಭೂತಿಯಂ ತಳೆದುಭವಪಾಶಮಂ ಪರಿವಂತೆ ಕಂಠದಲ್ಲೀ || ತೀವಿಪ್ಪ‌ತುಳಸೀಮಣಿಯ ಮಾಲೆಯಂ ಪರಿದು | ಶೈವಾಂಕರುದ್ರಾಕ್ಷಮಾಲೆಯಂ ಧರಿಸಿಸ | ದ್ಭಾವಿಯಂತಿರದೆ ಮುಕ್ತಿಯೊಳಿಚ್ಚೆಯುಣ್ಮೆ ಸಂಸ್ಕೃತಿಗುದಾಸೀನ ಮೊದವೆ|| 3 ||

ಶಿವಭಕ್ತರೋಳ್ಭಕ್ತಿ ಸಂಘಟಿಸೆ ಶಿವಶಾಸ್ತ್ರ | ನಿವಹದೋಳ್ ಶ್ರದ್ಧೆಯೊಗೆಯೆ ಶಿವಾರ್ಚನೇಚ್ಛೆಸಂ | ಭವಿಸೆ ಭಕ್ತ್ಯಾವೇಶದಿಂ ಕೆರೆಯಪದ್ಮಣಾರ್ಯರಸಭಾಸ್ಥಲಕೆ ಬಂದು || ಶಿವಶರಣಗೋಷ್ಠಿಯಲ್ಲಿಸೆವ ಗುರುವಂಕಂಡು | ನವಸಾತ್ವಿಕಂ ಸಮಂತಡರೆದಂಡಪ್ರಣಾ | ಮವನೆಸಗಿ ಚರಣದೋಳ್ಬೀಳ್ದೆೀಳ್ದು ಕೈಮುಗಿದು ಭಯಭಕ್ತಿಸಹಿತನಾಗಿ || 4 ||

ಗುರುವೆ ನತಜನಕಲ್ಪತರುವೆ ಭಕ್ತಿಗೆನೆಗಳ್ದ | ಕರುವೆ ಭಜಕರಭಾಗ್ಯದಿರವೆ ಶಿವಚಿತ್ಸುಖಾ | ಕರವೆ ಕಾರುಣ್ಯಸಾಗರವೆ ಸಾಕ್ಷಾತ್ಪರಾತ್ಪರವೆ ಸುಸ್ಥಿರವೆವರವೇ || ನರಕಿಯೋಳ್ದುರ್ಮಾರ್ಗಿಯೋಳ್ಶಿವ ದ್ರೋಹಿಯೋಳ್ | ಹರಿದೈವವೆಂದುಗೆಡೆದಜ್ಞಾನಿಯೋಳ್ದಯಾ | ತುರನೊಳೆನ್ನೋಳ್ಗುಣವನರಸದುಳುಹೆಂದುದೈನ್ಯಂ ದೋರಿಮತ್ತಮೆರಗೇ || 5 ||

ನಸುನಗುತ್ತೇಳೇಳದೇಕಿನಿತಳಲ್ವೆಯಂ | ದೊಸೆದವನನೀಕ್ಷಿಸಿಸಹಸ್ರಜನ್ಮಾಂತರದೊ |ಳೆಸಗಿದ ಸುಕೃತದಿನಲ್ಲದೆ ಶೈವಮತಿಯೊಗೆಯದೇಗೆಯ್ವನೀನೆನೆಯವಂ || ಅಸಮಗುರುಕೃಪೆಗೆ ಪುಳಕಿಸಿ ನಿಮ್ಮಚರಣಸಾ | ರಸದಮರೆಯೊಕ್ಕೆನಗೆ ಶಿವದೀಕ್ಷೆಯಿತ್ತು ರ | ಕ್ಷಿಸನಾಥನಂ ಕಾಡಲೇಕೆಂದು ಮುಗುಳೆ ಮೆಯ್ಯಿಕ್ಕೆ ನಿನಗದು ಶಕ್ಯಮೇ || 6 ||

ಮಾಡುಪೀಠಾರ್ಚನಮನೆನೆ ಕೇಳದಿರೆನಾಳೆ | ನಾಡಿದೆಂದಿಂತೊಂದು ಬರಿಸಂಬರಂ ಶಿಷ್ಯ |' ಚೂಡಾಮಣಿಯಚಿತ್ತಮಂ ಬಹುವಿಧದೊಳೊರೆದು ನೋಡಿಮನಮೊಲ್ದುನಿನಗೆ || ಮಾಡುವೆವನುಗ್ರಹವನೆಂದೊಂದು ಶುಭದಿನದೊ | ಳಾಡೆಪೆಚ್ಚಿರ್ತದಾಜ್ಞೆಯಿಂದೆಸುಸ್ನಾನಮಂ | ಮಾಡಿ ಧೌತಾಂಬರಾಭರಣಮಾಲ್ಯತ್ರಿಪುಂಡ್ರಾದ್ಯಲಂಕಾರಿಯಾಗಿ || 7 ||

ಗುರುಪದಾಬ್ಜದಬಳಿಗೆ ಬಂದು ಮೆಯ್ಯಿಕ್ಕಿ ಶುಭ | ಕರಸುವರ್ಣಪ್ರಸೂನಾದ್ಯಖಿಲ ವಸ್ತುವಂ | ವರಭಕ್ತಿಯಿಂ ಸಮರ್ಪಿಸಿ ನಲಿವಶಿಷ್ಯನಂನೋಡಿ ವಿಧ್ಯುಕ್ತಮಾಗಿ || ಕರಮೆಸೆವ ಋತ್ವಿಕ್ಕುಗಳ ನರ್ಚಿಸಿಸಿ ಶಂಭು | ಶರಣಸಂಘಕೆ ಭಸಿತತಾಂಬೂಲಮಂ ಕಾಣ್ಕೆ | ವೆರಸುಕೊಡಿಸಿಯನಂತರಂ ತತ್ಸಭಾಪ್ರದಕ್ಷಿಣಮನೆಸಗಿಸಿ ಬಳಿಕ್ಕಂ || 8 ||

ಸ್ಫುರದಲಂಕೃತಮಂಡಪದವರ್ಣಮಂಡಲದೊ | ಳುರುನವಸ್ವರ್ಣಾದಿಕಲಶಪಂಚಕಮನವ | ರಿರವೆಸೆಯೆಮಧ್ಯದಲ್ಲೊಂದಂ ಚತುಷ್ಕೋಣದಲ್ಲಿ ನಾಲ್ಕಂ ಸ್ಥಾಪಿಸಿ || ತರದಿಂದವಂ ನೂತ್ನವಸ್ತ್ರದೊಳ್ಸುತ್ತಿಯು | ತ್ಕರಹೇಮರತ್ನಾದಿಗಳನವರೊಳಿರಿಸಿಭಾ | ಸುರಶುದ್ಧತಂತುಪಂಚಕದೆವೇಷ್ಟಿಸಿ ಮಧ್ಯಕಲಶವಂತಾನರ್ಚಿಸಿ || 9 ||

ಉಳಿದವಂ ಋತ್ವಿಕ್ಕುಗಳ ಕರದಿನರ್ಚಿಸಿಸಿ | ಬಳಿಕೆತತ್ತೀರ್ಥಾಂಬುಪೂರ್ಣೋರ್ಧ್ವಕಳಶಾಳಿ | ಗಳನಾಮ್ರಪಲ್ಲವಸುದೂರ್ವಾಂಕುರ ಕ್ರಮುಕತಾಂಬೂಲಪತ್ರಂಗಳಿಂ || ಜ್ವಳಿಸೆಸಾಂಗಂಗೆಯ್ಸಿಮೂಲದಿಂದಾಕಲಶ | ಜಲಮನಭಿಮಂತ್ರಿಸಿಸದುಕ್ತಾಸನಸ್ಥನಾ | ಗಲಘುತೂರ್ಯತ್ರಯರವಂ ಮಿಗಲ್ ಸ್ವಸ್ತಿಕಾರೋಹಣಮೆಸಗಿಯವಂಗೆ || 10 ||

ಕ್ಷಾರಕ್ರಿಯೆಯನೋವಿ ಶಿವಮನುನ್ಯಾಸಮಂ | ಪೂರಯಿಸಿದೂರ್ವಾಂಕುರಾದಿಗಳಿನುದ್ಧೃತೋ | ದಾರಕುಂಭಾಂಬುವಂ ಋತ್ವಿಕ್ಸಮೇತಂತ್ರಿವಾರಂ ಯಥಾನ್ಯಾಯದಿಂ || ಚಾರುಮೂರ್ಧಾಭಿಷವನೆಸಗಿ ಶಿವಶಾಂತಿಕಮ | ನಾರಯ್ದು ಶಿವಹಸ್ತಮಂ ಮಾಡಿ ಶಿರದೊಳಿ | ಟ್ಟಾರುದ್ರತೇಜೋಮಯೋರುಪಾಣಿಯನೀಶಮನುವ ನೊರೆವುತೆ ಗೂಢದಿಂ || 11 ||

ಭಾವಿಸಿ ಶಿವಾಸನಮನಾಶಿಖಿಯೊಳಂತದರೊ | ಳಾವಾಹಿಸಿಯಥಾವಿಧಿಯಿನೀಶನಂ ಮನದೊ | ಳೋವಿ ಪೂಜಿಸಿ ಜೇಡಿಕೊಂಡಂಜಲಿಯನಿತ್ತುದೇವನೀಂ ತೊಲಗದಿಲ್ಲಿ || ಆವಗಮಿರೆಂದು ವಿಜ್ಞಾಪಿಸಿ ಮಹೇಶತೇ | ಜೋವಿಭವದಿಂದೆಸೆವ ಘನಮನುವನವನಕ | ರ್ಣಾವಗತಮಪ್ಪಂತುಪಾಂಶೂಪದೇಶಮಂಮಾಡೆ ಹೃಷ್ಟಾತ್ಮನಾಗಿ || 12 ||

ಅಂಜಲ್ಯುಪೇತನಾಗಿರ್ದ್ದ ಸಚ್ಛಿಷ್ಯಂಚಿ | ದಂಜನ ವೆನಿಸುವ ತನ್ಮಂ ತ್ರಾತ್ತಮನನಾಗ | ದಂಜಗದ್ಗುರುಪೇಳ್ದವೊಲ್ಮೆಲ್ಲಮೆಲ್ಲ ನೊರೆವುತಿರೆ ಕರ್ತ್ತರಿಯಿನವನಾ || ಭಂಜಿಸುವಶೇಷ ಪಾಶಚ್ಛಿತ್ತಿಗೆಯ್ದುಮು | ನ್ನಂಜಲದೊಳಧಿವಾಸಿಸಿರ್ದ್ದ ಘನಲಿಂಗಮಂ | ರಂಜಿಸುವವ್ರೋಲ್ಸಾಂಗದಿಂ ಯಜಿಸಿಯಘಹಾರಿಯಾದವಿಸ್ಫುರಿತಮಾದಾ || 13 ||

ಪರವಾದಸೂಕ್ಷ್ಮವಾದಖಿಲಮಂತ್ರಾಳಿಗು | ತ್ತರಪರಮಬೋಧವಾದಾಶಿಖಾಕಲೆಯನು | ತ್ಕರಭಾವದಿಂ ಮನಕ್ಕಾಮನದಿನಕ್ಷಿಗದರಿಂಕರಾಂಭೋಜದಲ್ಲಿ || ಸ್ಫುರಿಪತಲ್ಲಿಂಗದೊಳ್ತಂದಿರಿಸಿ ಯದನವನ | ಕರಶುದ್ಧಿಗೆಯ್ದಿತ್ತನನ್ಯಂಗೆಯಿಸಿನಿನಗಿ | ದುರುತರಪ್ರಾಣಲಿಂಗಮಿದಂ ಸಮಂತೊರ್ಮೆಯುಂ ತೊಲಗದಿರ್ಚಿಸೆನುತುಂ || 14 ||

ತತ್ತದಾಚರಣಮಂ ತಿಳಿಪಿ ಬಳಿಕೆಂದನಿದ | ನುತ್ತಮಾಂಗಾದಿಸ್ಥಲಂಗಳೊಳ್ತಳೆನಾಭಿ | ಯತ್ತಣಿಂ ಕೆಳಗೆ ತಳೆಯದಿರಿದಿರ್ದ್ದವನಕರವೀಶಸಂಪದಕಾಕರಂ || ಚಿತ್ತಿನೊಳ್ದಿರುಳಿದು ನಿಜೋಜ್ವಲವಿಮುಕ್ತ್ಯಂಗ | ನೋತ್ತಮಾಂಗಾಗ್ರಸ್ಫುರತ್ಪರಂ ಜ್ಯೋತಿಯಿದು | ದಾತ್ತಸಂಜೀವನೀ ಘುಟಿಕೆಯಿದು ದಿವ್ಯಾನುಭವರಹಸ್ಯಾಶ್ರಯವಿದು || 15 ||

ಮತ್ತಂ ಸಕಲಕಲಾತತ್ವಭುವನೋದ್ಭವ | ಣಾರ್ತ್ತಪದಮಂತ್ರಭರಿತಾಮಲಕರಂಡಮು | ತ್ಯುತ್ತರಪದದ್ಯೋತಕಂ ವಿವಿಧಸಿದ್ಧಿಬೀಜಮಪಾರಮಹಿಮಾರ್ಣವಂ || ಸುತ್ತೇನಿದಂ ಹರಿಮುಖತಾರ್ಗಳ್ದರಿದನಾಂತ | ನುತ್ತಮನವಂಗಾವಭಯಮಿಲ್ಲಹುತವಹಾ | ಯತ್ತಲೋಹದವೊಲೀಶೈಕ್ಯ ಮೆಲ್ಲರವೊಲಲ್ಲೆಂದರಿಪಿಮತ್ತಮೊರೆದಂ || 16 ||

ಅಮಲಿನಶ್ಲಿಷ್ಟಕೇಶೌಘ ಮರ್ಧೇಂದುವಿ | ಭ್ರಮಭಾಳಮಂಭೋಜಲೋಚನರ ಮಂದಹಾ | ಸಮುಖಾಂಬುಜಂ ವರಾಂಸದ್ವಯೋಪೇತಂಕವಾಟವಿತತೋರಸ್ಥಲಂ || ಸುಮಹದಾಜಾನು ಭಾಹೂದ್ಧದೋಸ್ತಂಭಮುರು | ಣಿಮಹಸ್ತಪಲ್ಲವಂಘನನಿತಂಬಂ ಸುರ | ಕ್ತಿಮತಳೋನ್ನತಪದಾಬ್ಜಂಜಗಸ್ಮಾನಸಾಕ್ಷಿವಿಮೋಹನ ಪರಿವೃಢಂ || 17 ||

ಅತಿಸುಂದರಾಕಾರಯುಕ್ತಂ ವಿಲಾಸವ | ಕ್ಷತಘನಂಭೋಗೈಕಲಾಲ ಸಂತದ್ವಿಶ್ವ | ಪತಿಯತೇಜೋಮೂರ್ತಿಯದನನುದಿನಂ ಧ್ಯಾನಿಸೆಂದುಪೇಳ್ದ ಕ್ರೋಧಮುಂ || ವಿತತಗುರುಶುಶ್ರೂಷೆಶೌಚಮಾಹಾರದಲ | ಘುತೆಯಪ್ರಮಾದಮಿವುನಿಯಮವನಮರ್ಚಿಸೂ | ನೃತಸಂವಿಭಾಗಕ್ಷಮಾದಮಾನುಗ್ರಹ ಸುದಾನಮಿವುಶೀಲಮೆನಿಕುಂ || 18 ||

ಗೌರವಂ ಲೈಂಗಿಕಂಚಾರಂಪ್ರಸಾದಪದ | ವಾರಿ ಭಾಕ್ತಿಕಮಿವಾರುಂ ವ್ರತಮಿವುಂ ವರಿಪು | ದೋರಂತಕೃಪಣತಾಸಾಯಾಸ ಶೌಚಶಾಂತಿದಯಾಸ್ಪೃಹಾನಸೂಯೇ || ಸಾರಂಗಳೆಂದರಿದು ಯತ್ನದಿಂಭಾವಿಪುದು | ದಾರಮನು ಜಪವೀಶಪೂಜೆಗಳನಾತ್ರಿಕಾ | ಲೋರುವಿಧಿಯಿಂಚರಿಪುದೊದವಿದುಪಚಾರಂಗಳಿಂತೋಷಿಪುದು ಶಂಭುವಂ || 19 ||

ಹರಣಮಳಿದೊಡಮಾತ್ಮಶಿರಮನರಿದೊಡಮುಮಾ | ವರನಂಭಜಿಸದುಣಲ್‌ನರಕಮುರೆಹರನಿಂದ | ಕರನಿರಿವುದಾರದೊಡಳಿವುದಲ್ಲದಿರ್ದೊಡಲ್ಲಿಂಪೋಪುದಿವರೊಳೊಂದಂ || ಚರಿಸದೊಡೆ ದೋಷಂ ಶಿವಾಲಯಶಿವಾರಾಮ| ವರಶಿವದ್ರವ್ಯ ಶಿವಪುರವೆಂಬಿವಂಪೊರೆವು | ತಿರವೇಳ್ಕುಮವನಪಹರಿಸಿದನಂ ಕೊಲ್ವುದಾಕೊಂದಂಗೆ ಮುಕ್ತಿಯಕ್ಕುಂ || 20 ||

ಲಿಂಗಮುದ್ರಾಂಕಿತವೃಷಾದಿಗಳ್ಗಾ ಶಿವಗ | ಣಂಗಳ್ಗಕೃತ್ಯಮಂನೆಗಳ್ದಪಾತಕನೋಳ್ದ | ಯಂಗೆಯ್ಯದುರೆಹರಿಪುದೀಶಾರ್ಥ ವೀಶಭಕ್ತಾರ್ಥ ವೀಶಾಗಮಾರ್ಥಂ || ಸಾಂಗಮಾದೀಶ್ವರಾಚಾರಾರ್ಥಮಳಿದವನ | ಭಂಗಗಣನಪ್ಪಂ ಶಿವಾರ್ಚಕರ್ಬರೆನಮಿಸಿ | ಮಂಗಳೋಕ್ತಿಗಳಿಂ ಯಥಾಶಕ್ತಿಯಾಗಿ ಸತ್ಕರಿಸುವುದುಭಕ್ತಿಯುಕ್ತಂ || 21 ||

ಪರಧನಪರಸ್ತ್ರೀಜನಕಳುಪದಾವಗಂ | ಹರನಕಿಂಕರನೆಂಬ ಭಾವಂಬಲಿದುಲಸ | ದ್ಗುರುವಿಂಗೆ ಜಾತಿವಿದ್ಯಾಧನಾದಿಗಳಿನಭಿಮಾನಿಸದೆ ಭಯಭಕ್ತಿಯಿಂ || ಕರಮೆದಂಡಪ್ರಣಾಮಂಗೆಯ್ದು ಕಯ್ಮುಗಿದು | ಗುರುವಾಕ್ಯಮಂ ಮಿಾರದಾಗುರುವಿನಲ್ಲಿ ತ | ತ್ಪರನಾಗಿ ತಾಯ್ತಂದೆಮೊದಲಾದ ಬಳಗಮೆಲ್ಲಂ ಗುರುವೆಯೆಂದುನಂಬಿ || 22 ||

ತನಗೆನಿತುವಸ್ತುವುಂಟನಿತುಮಂ ಶ್ರೀಗುರುವಿ | ನೆನುವಿಂಗೆ ನಿರ್ವಂಚಕದೆ ಸಮರ್ಪಿಸುತಾತ್ಮ | ತನುವನಂತಿತ್ತು ಗುರುಶಿವನಾಗುರುಸ್ತ್ರೀಗಿರಿಜೆಯೆಂದರಿದು ಗುರುವಿನಾ || ತನುಜಾನುಜಾಗ್ರಜರನಾಗುರುಸಮಾನರೆಂ | ದೆನಸುಂ ಬಗೆದು ತನಗೆಪಿರಿಯರಂ ಗುರುಚರಣ | ವನಜದವೊಲೀಕ್ಷಿಸಿ ಕನಿಷ್ಠರಂತನ್ನಂತೆ ತಿಳಿದುವಿಶ್ವಾಸಿಯಾಗಿ || 23 ||

ತನುಮನೋಧನವೆಂಬಿವಂ ಗುರುಪರಚರಕ್ಕೆ|ವಿನಯದಿಂದರಿದರ್ಪ್ಪಿಸುತೆ ಪಂಚಸೂತಕವ | ನನುಕರಿಸದಿತರ ಪಾಪವನೊಲ್ಲದೀಶಾನುಭವ ಗೋಷ್ಠಿಯೋಳ್ಪಿತ್ತ್ರಮಂ || ಅನುಗೊಳಿಸಿಭಸಿತರುದ್ರಾಕ್ಷಾದಿ ಸತ್ಕ್ರಿಯಾ | ವನನಾಗಿ ದೇಹವುಳ್ಳನ್ನೆವರಮಿಂತು ನಡೆ |ವನೆ ನರಾಕೃತಿಯರುದ್ರಂ ಪುನರ್ಭವಕ್ಕೆಬಾರಂ ಬಳಿಕ್ಕಾಸುಕೃತಿಗೆ || 24 ||

ಎಲೆಲೆಸೌಭಾಗ್ಯಂ ಸಮಸ್ತಭೋಗಂಗಳು | ಜ್ವಲಿಕುಂ ಸದಾಯುರಾರೋಗ್ಯ ಸತ್ಕೀರ್ತಿ ನಿ | ರ್ಮಲಿನಾನವದ್ಯ ವಿದ್ಯಾಭೂತಿಗಳ್ದ್ಯೋತಿಕುಂ ನಿಖಿಲ ಮಂಗಳಂ || ನೆಲೆಯಾಗಿನಿಂದಘಚಯಂ ಪರೆಗುಮುರುಭೂತ | ಕುಲದುಷ್ಟರೋಗಾದಿ ಭೀತಿಗಳ್ಕೆಡುಗುಂ ಸ | ಕಲಭೋಗಮುಮನವಂಭೋಗಿಸಿವಲಂ ಮುಕ್ತನಪ್ಪನೆಂದಾಗಮೋಕ್ತಂ || 25 ||

ಸುತ್ತೇನದರಿನಿವು ಮೊದಲೆನಿಪ್ಪವಣುಗದೀ | ಕ್ಷೋತ್ತರಾನುಷ್ಠೇಯ ಕರ್ಮಂಗಳಿವರೊಳಾ | ಯತ್ತನಾಗಿ ಯಥಾತ್ಮಶಕ್ತಿಯಿಂದಾಚರಿಪುದೆಂದು ಬೋಧಿಸೆವಂದಿಸಿ || ಮತ್ತಂಸುಖಾವೇಶದಿಂ ಗುರುಪ್ರಭೃತಿಗ | ಳ್ಗಿತ್ತು ದಕ್ಷಿಣೆಯನಾತ್ಮಕುಟುಂಬಕಾಪರಿಯೊ | ಳುತ್ತಮನನುಗ್ರಹಂಗೆಯ್ಸಿ ಗಣಪರ್ವಮಂಮಾಡಿ ಪರಮಾನಂದದಿಂ || 26 ||

ಸಲೆಗುರುದೀಕ್ಷಾಚಾರದೋಳ್ನಿಘ್ನನಾಗಿಂತು|ಕೆಲವುಸಗಳಿರ್ದೊಂದುದಿವಸಮಾಚಾರ್ಯಕುಲ | ತಿಲಕನಪದಾಬ್ಜದೋಳ್ಬೀಳ್ದೆಲೆಸ್ವಾಮಿ ಯೆನ್ನಂಘೋರಭವಜಲಧಿಯಿಂ || ತಲೆವಿಡಿದುತೆಗೆದು ಶೈವಾಚಾರಸಂಪದದ | ನೆಲೆಯುನರಿಪಿಕೃತಾರ್ಥನಂ ಮಾಡಿ ಪೊರೆದಿರಿದ | ನುಲಿಯಲೇನೀಗಳೊಂದುರುಶಂಕೆ ಪುಟ್ಟಿಯುಲೆವುತಿದೆ ಚಿತ್ತಮನೆಂತೆನೆ || 27 ||

ಲಿಂಗಕರ್ಪಿಸದೆಭೋಗಿಸಿದ ವೆಲ್ಲಂಕಿಲ್ಬಿ | ಷಂಗಳಿಂದೊರೆದಿರೀ ದೂಪಾದಿಗಳನಿಷ್ಟ | ಲಿಂಗಕೀಯಲ್ಬರ್ಕು ಮಲ್ಲದಾರುಚಿಯನೆಂತೀಯಲಕ್ಕು ಮದಲ್ಲದೇ || ಪೊಂಗುವಖಿಲೇಂದ್ರಿಯ ಮುಖಂಗಳಿಂದೆಯ್ದು ವಸು | ಖಂಗಳೀಕ್ಷಿಸಲರೂಪಂಗಳವನೀಶಾರ್ಪಿ | ತಂಗೆಯ್ಬತಿರನಾವುದಿದ ನರಿಯುದುರೆಬಳಲ್ವಂಗೆನಗೆಕೃಪೆಗೆಯ್ಯನೇ || 28 ||

ಅಸಮಗುರುರಾಜನಾತನ ಒಗೆಗೆಮೆಚ್ಚಿ ಸಂ | ತಸದಿನಿಂತೆಂದನೆಲೆ ಮಗನೆಕೇಳ್ನಿನ್ನಮಾ | ನಸದಳಲ್ಪ್ರಾಣಲಿಂಗದನೆಲೆಯನರಿದಲ್ಲದಳಿಯದೆನೆ ಗುರುವರೇಣ್ಯಾ || ಉಸಿರ್ದರಿದೆದಲ್ ಪ್ರಾಣಲಿಂಗವೆಂದಂದು ದೀ | ಕ್ಷಿಸುವಾಗಳೀಗಲರಿವುದದಾವುದೆನೆಸೋಡ | ನಸುನಗುತಿದೇತಪ್ಪದಾರಹಸ್ಯಂ ಷಟ್ಸ್ಥಲಜ್ಞಾನನಿಷ್ಠನಾಗಿ || 29 ||

ಲಿಂಗಾಂಗಸಂಯೋಗ ಸಂಪನ್ನನಾದ ಮಹಿ | ಮಂಗಲ್ಲ ದರಿಯಲಳವಲ್ತುದಂ ಪೇಳ್ವೆವೆಲೆ | ಮಂಗಲಾಂಗನೆಕೇಳ್ ಪರಾತ್ಪರವೆನಿಪ್ಪ ಶಿವತತ್ವಂ ಚರಾಚರಕ್ಕೆ || ಪೊಂಗಿಲಯಗಮನ ಸಂಸ್ಥಾನವಾದುದರಿಂದೆ | ಲಿಂಗಮೆನಿಸುಗುಮಾಮಹತ್ವದಯುತದೆ ಮಹಾ | ಲಿಂಗವಾಯ್ತುದರಿ ನಾಚಾರಲಿಂಗಾಂತಂ ಕ್ರಮದೆಲಿಂಗಷಟ್ಕವೊಗೆಗುಂ || 30 ||

ಅವುದಲಾಚಾರಾದಿಯಾಗಿ ಯೊಂದಕ್ಕೊಂದು| ಸುವಿದಿತಪ್ರಾಣವಾಗಿರ್ಪವವರಲ್ಲಿ ಭೇ | ದವಿವಕ್ಷೆಯಂಮಾಡಲಾಗದಿದು ಲಿಂಗಷಟ್ಸ್ಥಳದ ನಿರ್ಣಯಮಿದಕ್ಕೆ || ತವೆಯಂಗವಾದ ಭಕ್ತಾದ್ಯೈಕ್ಯಚರಮವೆನಿ | ಸುವವಂಗ ಷಟ್ಸ್ಥಲಮೆನಿಪ್ಪ ವಿನ್ನಿವರವ್ಯ |ತ್ರಿವಿಧಾನವೆಂತೆನೆ ಸದಾಚಾರದೊಳ್ನಿರತನಾಗಿ ಶಿವಭಕ್ತಿಘಟಿಸಿ || 31 ||

ಗುರುಲಿಂಗಜಂಗಮದೊಳೆರವುಗಾಣದೆ ವೇಷ | ಧರರಂ ಪರೀಕ್ಷಿಸದವಂ ಭಕ್ತನೆನಿಸುವಂ | ಪರಧನಪರಸ್ತ್ರೀರಹಿತನಾಗಿ ಸದ್ಭಾವದಿಂ ಲಿಂಗನಿಷ್ಠೆಬಲಿಮ || ಚರಿಪವಂಮಾಹೇಶನೆನಿಸುವಂ ಶಿವಲಿಂಗ | ದುರುಶೇಷಮಲ್ಲದಿತರವಸೊಲ್ಲದಾಲಿಂಗ | ಭರಿತನಾಗಿಪ್ಪಂ ಪ್ರಸಾದಿಯೆನಿಸಂ ಮುಂದೆಕೇಳುಳಿದವರಭೇದಮಂ || 32 ||

ಪ್ರಾಣಗುಣವಂಲಿಂಗದೊಳ್ನಿಲಿಸಿ ಲಿಂಗವೇ|ಪ್ರಾಣವಾಗಸುಖಸುಖವೆಂಬಿವನರಿಯದವಂ | ಪ್ರಾಣಲಿಂಗಿಸಮಂತು ಪತಿಲಿಂಗವಾನೆಸತಿ ಯೆಂದೀಪ್ರಪಂಚಸುಖಮಂ || ಕಾಣದನೆಶರಣಂ ಷಡೂರ್ಮಿಷಡ್ವರ್ಗಂಗ | ಳಾಣತಿಯನತೆದು ಪೂಜಾಭ್ರಾಂತಿಗೆಟ್ಟು ನಿ | ರ್ವಾಣಭಾವದೊಳುರಿಯನಪ್ಪಿದುರು ಕರ್ಪೂರದಂತೆಸೆವನೈಕ್ಯನೆನಿಪಂ || 33 ||

ಇಂತುಭಕ್ತಾಂಗಷಟ್ಸ್ಥಲಮೂದವೀಷಟ್ಕ | ಮುಂ ತಿಳಿಯಲೇಕಮಿವು ಲಿಂಗಷಟ್ಸ್ಥಲವನೋ | ರಂತೊಂದಿಪುರೆವುದಾವುದರಲ್ಲಿ ಮುಕ್ತಿಸಂಘಟಿಸಿ ಸಂಸೃತಿಯುಳಿವುದು || ಅಂತನೆಬುಧಾಳಿಯಿಂಸ್ಥಲಮೆನಿಕು ಮಿನ್ನಿವರೊ | ಳಂತಸ್ಥಮಾದಂಗಹಸ್ತಭಕ್ತಿಗಳಂ ಸ | ಮಂತಕ್ಷುಲಿಂಗ ವಕ್ತ್ರಾಪಿ‍ತಸುಶೇಷ ಸಿದ್ಧಿಗಳನೊರೆದಪವಾಲಿಸೈ || 34 ||

ಧರೆಯುಂಬುಶಿಖಿವಾಯುನಭವಾತ್ಮ ವೆಂಬವೆಲೆ | ತರುಣಾಭಕ್ತಾದಿಗಳ್ಗಂಗವೆಂದೆನಿಪವಂ | ತುರುಸುಚಿತ್ತಸುಬುದ್ಧಿ ನಿರಹಂಕೃತಿಲಸನ್ಮನೋಜ್ಞಾನವಮಲಭಾವಂ || ತರದೆಹಸ್ತಂಗಳೆಂದೆನಿಪವಮಿತ ಶ್ರದ್ಧೆ | ವರನಿಷ್ಠೆಯವಧಾನವನುಭಾವವಾನಂದ | ಮುರುಸಮರಸಂಗಳಿವು ಭಕ್ತಿಗಳೆನಿಪ್ಪ ವಿನ್ನರಿಶೇಷಸಿದ್ಧಿಯುನುವಂ || 35 ||

ನಾಸಿಕೇಂದ್ರಿಯದೊಳಾಚಾರ ಲಿಂಗಕ್ಕತಿವಿ | ಲಾಸದಿಂ ಪೃಥ್ವೀಮುಖದೆಗಂಧಮಂಕೊಟ್ಟು | ಭಾಸಿಸುವಜಿಹ್ವೇಂದ್ರಿಯದೊಳೆಗುರುಲಿಂಗಕಂ ಭೋಮುಖದೆರಸವನಿತ್ತು || ಆಸೌಮ್ಯನೇತ್ರೇಂದ್ರಿಯದೊಳೆಶಿವ ಲಿಂಗಕು | ಲ್ಲಾಸದಿಂದಗ್ನಿಮುಖದಿಂದೆ ರೂಪಮನಿತ್ತು | ಲೇಸಿಂತ್ವಗಕ್ಷದೊಳ್ಚರಲಿಂಗಕನಿಲಮುಖದಿಂ ಸ್ಪರ್ಶಮಿತ್ತುಬಳಿಕಂ || 36 ||

ವೋದದಿಂಶ್ರೋತ್ರೇಂದ್ರಿಯದೊಳುಜ್ವಲಿಸುವಾ ಪ್ರ | ಸಾದಲಿಂಗಕೆಗಗನೆಮುಖದೆ ಶಬ್ದವನಿತ್ತು | ಸಾದರದೆಮನಇಂದ್ರಿಯದೊಳಾ ಮಹಾಲಿಂಗಕಾತ್ಮಮುಖದಿಂದೆಕೂರ್ತು || ಈದಿವ್ಯಪರಿಣಾಮವಿತ್ತು ತತ್ತತ್ಪ್ರಸಾ | ದೋದಧಿನಿಮಗ್ನನಾಗುವುದು ತನುಸೋಂಕಿದ ಸು | ಖಾದಿಗಳ್ಗೇಷಂಗಳಪ್ಪವಿಂತಖಿಳಾಂಗದೋಳ್ ಲಿಂಗಮಿರ್ಪಕತದಿಂ || 37 ||

ತರುಣಕೇಳೀಶರನನರಿದರ್ಪ್ಪಿಸಿದೊಡವನೊ | ಳಿರದನರ್ಪ್ಪಿತದೋಷವ ದುನಿಮಿತ್ತಂ ಪಲವು | ಪರಿಯಿನೊದವಿದಸಕಲ ಭೋಗಮುನವಂಚಕದಿ ನೀಶ್ವರಾ ರ್ಪಣಬುದ್ಧಿಯಿಂ || ವರಿಪುದೊಂದಿಂದ್ರಿಯ ಸುಖಮನೊಂದು ಮುಖಕಿತ್ತೊ| ಡೆರವಪ್ಪುದಾಭರಣಮಂ ಪಲ್ಲಟಂಗೆಯ್ದು | ಧರಿಸಿದವೊಲಂತರಿಂದಾಸುಖಮ ನಾಮುಖಕ್ಕಿತ್ತು ಭೋಗಿಪುದೆಚ್ಚರಿಂ || 38 ||

ಎನೆಶಿಷ್ಯನೆಂದನೆಬೆದೇವ ಹೇಯಂಗಳೀ | ತನುವನಂಟಲ್ ಶೇಷಮಪ್ಪ ವಿಧಿಯಾವುದೀ |ತನುಲಿಂಗಮಯವಾದುದರಿ ನಿದರಸೋಂಕೆಲ್ಲವುಂ ಶೇಷಮೆಂ ದಿರದರಾ || ಅನುವಾವುದೆನೆಮಗನೆ ಕೇಳಾತ್ಮಹಿತವಾದು | ದನಘಲಿಂಗಾರ್ಪಿ ತಕೆಸಲ್ವುದಲ್ಲದೆತನ್ನ | ಮನವೊಪ್ಪದದು ಸಲ್ವುದೇಇದರ ಸರಣಿಲಿಂಗಪ್ರಾ ಣಿಗಳಿನಲ್ಲದೆ || 39 ||

ತಿಳಿಯಲರಿದೆನೆಯುದಂ ಬೆಸಸಿಮೆಂದೆರಗೆ ಪೊರ | ಗೊಳಗೆಂಬ ಸಂದಳಿ ದುಲಿಂಗಮಯವಾಗಲ್ಲ | ದಳವಡದೆನಲ್ಕೆ ಲಿಂಗಂಪ್ರಾಣವಾಗದೊಡೆಕೇಳೀ ಯಂಗಮಂ || ಬಳಿಕೆಮುಟ್ಟಿದವೆಲ್ಲವೆಂತುಟರ್ಪ್ಪಿತವೆನೆ ಮ | ರುಳ ಕೊಡುತೆ ಕೊಳುತೆ ತತ್ಪ್ರಾಣವೇಲಿಂಗವೆಂ | ಬಳವಿನಿಂ ಪ್ರಾಣಮುಖವಾಗರಿವವಂ ಪ್ರಾ ಣಲಿಂಗಿಗಳೆನಿಪ್ಪರದರಿಂ || 40 ||

ಕೊಡುವಕೊಳ್ವೆರಡನರಿಯದೆ ಲಿಂಗಮುಖವಾಗಿ | ನಡೆದುತಲ್ಲಿಂಗವೇ ಪ್ರಾಣವಾಗಾಲಿಂಗ | ಮೊಡಲುಸುರನೊಳಕೊಂಡವ ರ್ಸ್ರಲಿಂಗಪ್ರಾಣಿಗಳ್ದ ಲೆ ನಿಪರವರ್ಕಳಾ || ಅಡವೆಲ್ಲಲಿಂಗದಡವವರ ಚರಿತಂಗರಂ | ಪೊಡೆದವರವೋಲ್ ಸೆವುದರ್ಪಿತಾನರ್ಪಿತದೊ | ಳೆಡಹರಿಪ್ಪಾನಿಷ್ಟ ಮರಿಯರವರಖಿಲಾಂಗಮುಂ ಲಿಂಗವದರಿಂದೆನೆ || 41 ||

ಗುರುವೆನೀವವರ್ಗೆ ಸರ್ವಾಂಗಮುಂ ಲಿಂಗಮೆಂ | ದೊರೆದಿರೀಯಂಗ ಗತಲಿಂಗವೊಳಗಂ ವೇದಿ | ಪಿರವದೆಂತೆನೆಯುದಕಘಟದ ಬಾಹ್ಯಕ್ಕಿಕ್ಕದಗ್ನಿ ಯೊಳಗಂವೇದಿಪಿ || ಕರಮೆಬಿಸುಗೆಯ್ದು ಬರಿಯುಷ್ಣಮೇಳ್ವಂತೆ ಮೇ | ಣುರಗ ದಷ್ಟಾಂಗ ವಿಷವೇಥೆಯಂತೊಳಗನಾ|ವರಿಸಿತಲ್ಲಿಂಗಮೇ ಪ್ರಾಣವೆನಿಕುಂ ಭಾವ ಗತಮಾಗಿ ತೃಪ್ತಿಯೆನಿಕುಂ || 42 ||

ಇಂತೆಂದನೇಕದೃಷ್ಟಂಗಳಿನವನ ಸಂಶ | ಯಂತವಿಸಲೊರೆಯೆಸರ್ವಂ ಲಿಂಗವಾದೊಡೆಲೆ | ಶಾಂತಿರೂಪನೆ ಭಕ್ತನೆಲ್ಲಿರ್ಪನೆನೆ ಲಿಂಗದಖಿಲಾವಯುವ ದೊಳಮರ್ದು || ತಾಂತದ್ವಿಧಿಯೊಳೆ ಚೇಷ್ಟಿಸುತಿರ್ಪನಾಲಿಂಗ | ಮುಂತಜ್ಞರ ಣಚೇಷ್ಟೆಗೂಡಿಯುವಿಸಾಭಾವ | ದಿಂತೊಳಪುದವನಬ್ಧಿಯಲ್ಲಿ ಬೀಳ್ದಾಲಿವರ ಲಂತೆಬೆರೆದೊಪ್ಪುವನೆನೆ || 43 ||

ವಲ್ಲಭನೆಸತ್ಕ್ರಿಯಾಮುಖದಿಸಾಭಕ್ತಾಂಗ | ವೆಲ್ಲವುಂ ಲಿಂಗವಾದೊ ಡೆಕೇಳ್ಪ್ರಸಾದ ಮಿ | ನ್ನೆಲ್ಲಿಯದುಭಯುವಳಿದಬಳಿಕದರ ಸಿದ್ಧಿಯೆಂತೆನೆ ಗುರುವ ದಕ್ಕೆಮೆಚ್ಚಿ || ಸಲ್ಲಲಿತಕೇಳ್ತನುಮನೋಭೇದದಿಂ ಶೇಷ | ಮಿಲ್ಲಿ ಸವ್ಯಕ್ತ ಮವ್ಯಕ್ತ ಮೆನಿಸುಗುಮದಂ | ಬಲ್ಲರಾರೊಪದಾರ್ಥ ಪರಿಣತಿಗಳಿಂ ಖಂಡಿತ ಮುಮಖಂಡಿತಮುಮೆನಿಕುಂ || 44 ||

ಆಮಹತ್ತಾದಖಂಡಿತ ಸುಪ್ರಸಾದವಕ | ಟಾಮುಟ್ಟದೀ ಮನಸ್ಸಂಶಿ ವಂಗಿತ್ತುಭಯ |ಸೀಮೆಯುಳ್ಳನುಪಮಂಗಲ್ಲದಾಶಿವನಕಲೆ ಸರ್ವಗತಮಾಗಿಮೊ ದಲೇ || ಪ್ರೇಮದಿಂಮುಟ್ಟಿದ ಪದಾರ್ಥಚಯಮುಂಬಳಿಕೆ | ನೇಮಿಸುವವಂಗೆ ಸಿದ್ಧಿಪುದೆಅಂತರ್ಪ್ಪಿಪರ್ | ಭೂಮಿಯೊಳಗೋಚರರವರ ಸಿದ್ಧಿಹರ್ಯಜಾದ್ಯರ್ಗ ಸಾಧ್ಯಮೆನಲ್ಕವಂ || 45 ||

ಎಲೆಕೃಪಾಂಬುಧಿಯೆ ತತ್ಕಲೆಯಿಾಯಖಿಲದಲ್ಲಿ | ಕಲಸಿರ್ಪ್ಪನುವಸರಿ ಯೆ ನರಿಪೆಂದಳಲ್ಪಂಗೆ | ಮಲರಹಿತಗುರುವೆಂದನವರೊಳಿರ್ದ್ದದ ನರಸುವರೆ ಘಟಾಂಬುವಿನೊಳೊಂದಿ || ಸಲೆಮೆರೆವತ್ತೈಲದಂತಮರ್ದು ಕಾರ್ಮುಗಿಲೊಳು | ಜ್ವಲಿಪಮಿಂಚಿನಗೊಂಚಲಂತೆ ಬೆಳಗುವುದದ | ಕೊರ್ಲವಿನಿಂಪ್ರಾಣಾರ್ಪಿತಂಗೆ ಯ್ದು ತಾನಿಲ್ಲದಿರವೇಳ್ಕುಮೆನೆ ಕೊರಗುತೆ || 46 ||

ಗುರುವೆತತ್ಕಲೆಯನಾನೆಂತು ತಂದುರದೆನ್ನ | ಹರಣಮುಮನರ್ಪ್ಪಿಸುವೆ ನೀಯಿಷ್ಟಲಿಂಗವೇ | ಪರವೆಂದು ಕೊಡಲೊರೆದರೀಗಳಿದನೊಂದ ನೊರೆದಿರೆನ ಲ್ಕೆನಸುನಗುತ್ತೆ || ತರುಣಚೇರಾಗಿ ತಿಳಿಯದಿರಾಶಿರಃಕಲೆಯ | ಗುರುಕೃಪೆಯಿ ನೀಲಿಂಗದೊಳ್ಪರಿತಮಾಗಿ ನಿ | ನ್ನಿರವನೊಳಕೊಂಡು ಸಮರಸದೊಳಸ್ಯಾನನ್ಯತೆ ಯಿನುಪಮೆಖಿಲ್ಲದೆಸೆಗುಂ || 47 ||

ಇದೆಸಕಲಸಕಲ ನಿಷ್ಕಲ ನಿಷ್ಕಲಮುಮೆನಿಪ | ದಿದು ಜಗತ್ಸೃಷ್ಟಿಸ್ಥಿತಿ ಪ್ರಹೃತಿಯಂಮಾಳ್ಪ | ದಿದೆ ಲಿಂಗದೋಳ್ಧ್ಯಾನಪೂಜೆಗಳ ಕೈಕೊಳ್ವುದಿದೆ ಭು ಕ್ತಿಮುಕ್ತಿಬೀಜಂ || ಇದೆಹರ್ಯಜೇಂದ್ರಾದಿಗಳ್ಗೆ ನಿಲ್ಕದವಸ್ತು | ಏದೆ ವೇದಶಾ ಸ್ತ್ರಾಗಮಾಭೇದ್ಯಸಂವಿತ್ತು | ಏದುಹರಣದೊಡನೆಯ್ದೆ ಯಾಲಿಂಗಮೇತರ್ಕ್ಕ ಮಾಗದಿದೆ ಮುಖ್ಯವದರಿಂ || 48 ||

ಇದುನಾದಬಿಂದ್ವಾತ್ಮಕಮುಮಾಗಿ ಸರ್ವರ ಶಿ| ರದೊಳಿರ್ಪುದಿದರೊಳ ಗನರಿಯದೆಲ್ಲರ್ಕೆಡುವ | ರಿದುನಿನಗೆ ಸುಕೃತಬಲದಿಂ ವ್ಯಕ್ತಮಾಯ್ತಿದೊಂದೇ ತನುತ್ರಯಭೇದದಿಂ || ಪುದಿದಮೂರಾಯ್ತಿಂದ್ರಿಯಾವಗತಮಾಗಿ ಮೇ | ಣೆದೆದಲಾರಾಯ್ತಾಸ್ಥಲಸ್ಥಲ ವಿಭಜನದಿಂ | ದೊದವಿ ಛತ್ತೀಸಮಾಯ್ತುವರ ಮಿಶ್ರತೆಯಿನಿನ್ನೂರಪದಿನಾರೆನಿಸಿತು || 49 ||

ಇಂತುಭಕ್ತಾನುಗ್ರಹಾರ್ಥಂ ವಿವಿಧವಿಧಮ |ಸಾಂತೇಕಮಾಗಿ ತೊಳಗು ವಪರಬ್ರಹ್ಮವನಿ | ದಂ ತಿಳಿವರಾರೊ ಗುರುಕರುಣಾಯತಂಗಲ್ಲ ದುಳಿದವರ್ಗ್ಗಿ ದುಸಾಧ್ಯಮೇ || ಅಂತರಿನಿದಂ ಕ್ರಿಯಾಚಿದ್ದ್ವಯದಿನೆಯ್ದಿ ಸೈ | ರಂತಯ್ಯ ಶಿವಸುಖವನನುಭವಿಸುನೀಂ ಮೇ | ಣೆದಂತಳೆದವಂ ಜೀವಿಸುತಿರ್ದುಂವೃಂ ಮು ಕ್ತನವನಖಿಲಗುಣಗಣಾಢ್ಯಂ || 50 ||

ಎಂದಿಂತುಶಿವತತ್ವಗೋಪ್ಯಮಂ ಗೋಪ್ಯದ | ಲ್ಲೊಂದಿನಿಸುಮುಳಿಯದೆ ಲ್ಲವನರಿಪೆ ಬೂದಿಯ | ಲ್ಲೊಂದಿದನಲಂ ಮುಗಿಲ್ಮುಸುಕಿದಿನನುಂ ಚಂಡಪವನ ನೆಸಕದೆಮಿನುಗುವಾ ||ಚಂದದಂತಾರ್ಯಬೋಧದಿನವನ ಮರಹಳಿದು | ನಿಂದನಿಜ ದರಿವುಸಾಕ್ಷಾತ್ಕರಿಸೆ ಘನಹರ್ಷ | ದಿಂದುರ್ವಿಕೊರ್ವಿ ಗುರುಚರಣದೋಳ್ಬೀ ಳ್ದು ಪರವಶನಾಗಿಬಳಿಕೆತಿಳದು || 51 ||

ಎನ್ನವೋಲ್ಸುಜ್ಞಾನ ಹೀನರ್ಧರೆಯೊಳಿಲ್ಲ|ನಿನ್ನವೋಳ್ತಿಳಿಪುವ ಸಮರ್ಥ ರಿಲ್ಲಕಟಕಟ | ನಿನ್ನಕರುಣೌಷಧಂ ಸಮನಿಸದೊಡೀ ಭವವ್ಯಾಧಿಯೊಳಗಾನುಳಿ ವೆನೆ || ಅನ್ನಯದತವರನೆನ್ನಂತಂದು ಸಜ್ಜರಣ | ಸನ್ನಿಹಿತನಪ್ಪಂತೆ ಕೃಪೆಗೆಯ್ದೆ ಹರಹರಾ | ನಿನ್ನಮಹಿಮೆಗೆಮಲೆವರಾರ್ ನೀನುಳಿಯೆಕೊಲ್ವಕಾಯ್ವ ಸಾಹಸಿ ಗಳುಂಟೆ || 52 ||

ಎಂದಿಂತುಪಲವುಪರಿಯಿಂದೆ ವರ್ಣಿಪಶಿಷ್ಯ | ನಂ ದಯಾಪಾಂಗದಿಂ ನೋಡಿ ಪುಳಕಿಸುತೆನ್ನ | ತಂದೆಬಾ ಯೆನ್ನಣ್ಣಬಾಯನ್ನನುದ್ಧರಿಪಕಂದ ಬಾ ನಿನ್ನೊಳಿನಿತುಂ || ಕುಂದಿಲ್ಲವಿಶ್ವಸಾಧನ ಸಕಲಸಾಮ್ರಾಜ್ಯ | ಮಂದಲಾಳ್ವನಿತ ಭಾಗ್ಯಂನಿಂನ ವಶಮಾದು | ದೆಂದಂಕಿಸುವಗುರೂಕ್ತಿಗೆ ಕಂದಿಕುಂದಿನಿಜನುತಿಗಳ್ಕುವನನೀಕ್ಷಿಸೀ || 53 ||

ತೆಗೆದೆತ್ತಿಸಂತವಿಸೆ ತದ್ಗುರುಕೃಪಾಲಬ್ಧಿ | ಗಗಣಿತಾನಂದಾಶ್ರುಸೂಸೆ ಪುಳಕಶ್ರೇಣಿ | ಯೊಗೆಯೆಗದ್ಗದವಚೋವಿಭವದಿಂನುತಿಸಿ ತತ್ಸೇವಾನಿಮಗ್ನನಾಗಿ || ಮಿಗೆಮುದ್ರಿಸಿದಚಿತ್ಸುಖದಿ ನಾತನಿರ್ದನಾ | ಸೊಗಸನೀಕ್ಷಿಸಿಪೊಳೆವ ದೀವಿಗೆಯೊಳೊಂದು ದೀ | ವಿಗೆಯುಪೊತ್ತಿಸಿದಂತೆ ಸಮಕಲೆಘಟಿಸಿತಿಂತು ತಿಳಿಪುವಸಮರ್ಥರುಂಟೇ || 54 ||

ಭಾಪುದೇಶಿಕಶಿರೋರತ್ನ ಧರೆಯಂಪೊರೆಯ | ಲೌಪಚಾರಿಕವಿಗ್ರಹಂಪಾಳ್ದುಬಂದಗುರು | ರೂಪವಿಶ್ವೇಶನಲ್ಲದೆ ಪೆರನೆನಿನಗಿದರಿದೇಯೆಂದುಭಕ್ತರುಲಿಯೆ || ಓಪಶಿಷ್ಯನಬೋಧಿಸಿದ ರೀತಿಯಿಂದೆರಘು | ಟಾಪದ್ಧತಿಯೊಳುರೆಸಸಾಕ್ಷಿಕಂವೀರಶೈ | ವೋಪಕಾರಾರ್ಥವಿಂಪಮರೆದೀಕ್ಷಾ ಬೋಧಮೆಂಬಕೃತಿಯುಂವಿರಚಿಸಿ || 55 |

ಬಳಿಕೆಸಮಯಸ್ಥಾಪನಾರ್ಥಂ ಶ್ರುತಿಸ್ಮೃತಿವಿ | ಮಲಪುರಾಣಾಗಮೋಪನಿಷತ್ಪ್ರಭೃತಿಶಾಸ್ತ್ರ | ಕುಳದಸಾರಂದೆಗೆದು ದೃಷ್ಟಕೆಬರೆದುಸರ್ವರರಿಯೆ ಕರ್ಣಾಟಮಾಗಿ || ಅಲಘುವರ್ಣಕರೀತಿಯಿಂ ರಸಂಮುಸುಕಿಯು | ಜ್ವಳಿಪಂತೆಸಾನಂದಚರಿತಾಖ್ಯಶಾಸ್ತ್ರಮನ | ತುಳಗುರುವರಂ ನಿಜಾತ್ಮಜನಿನೊರೆಯಿಸುತೆಶಿವಸುಖದೊಳಿಂತೊಪ್ಪುತಿರ್ದ್ದಂ || 56 ||

ಮದಕುಧರವಿದಳನ ಭಿದುರಪರಮಶಿವಭಕ್ತ | ಪದಶತದಳಾದಭ್ರಮುಕರಂದಲೀಲಾಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರಣೀತಮಾಗಿ || ಸದಮಳಾಖಿಲಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣಕಥೆಯೊಳಿಂ | ತಿದುದೇಶಿಕಂವಾದಿಗೊಲ್ದುದೀಕ್ಷಿಸಿದ ಪನ್ನೆರಡನೆಯಸಂಧಿಯೆನಿಕುಂ || 57 ||

ಈಶಾಪರಾವತಾರನ ವಿಬುಧನುತನಭವ । ಪಾಶನಾಶಕಕೆರೆಯ ಪ ದ್ಮಣಾರ್ಯನಲಸ । ಚೇಟ್ಟ್ರಶಿವಾದ್ವೈತಸಾಕಾರ ಸಿದ್ಧಾಂತಪ್ರತಿಷ್ಠಾಪನಾಚಾ ರ್ಯನ ॥ ಈಶುದ್ಧಚರಿತಮಂ ತಿಳಿಪಿದರ್ಗೋದಿದ । ರ್ಗಾಶೆಯಿಂಕೇಳ್ದರ್ಗೆ ಭು ಕ್ತಿಮುಕ್ತಿಗಳಂ ಮ।ಹಾಶುಭಂಗಳನಾಯುವಂಕೊಟ್ಟು ಗುರುರೂಪ ವಿಶ್ವನಾಥಂ ರಕ್ಷಿಪಂ ॥ 58 ॥

ಅಂತು ಸಂಧಿ 12 ಕ್ಕಂ ಪದ 1195 ಕ್ಕಂ ಮಂಗಳಮಸ್ತು ॥ಶ್ರೀ॥

---

ಶ್ರೀ ಗುರುರೂಪ ವಿಶ್ವನಾಥಾಯನಮಃ.

ಹದಿಮೂರನೆಯ ಸಂಧಿ.

ಪಲ್ಲ ॥ ಒಡನೆ ವಿಧಸಾಧನವ್ಯಾಜದೆಶಿವಂಕುಡುವ । ಪಡಿಯನುಳಿದು ಸುತಂಗೆಪಟ್ಟಮಂ ಕಟ್ಟಿರಿಸಿ । ಮೃಡನಿರೂಪದೆಕಾಶಿಗೆಯ್ದಿ ಗುರುವಿಶ್ವೇಶನಲ್ಲೈಕ್ಯಮಾಗಿ ಮೆರೆದಂ ॥

ಪದಂ॥ ಪ್ರಾಥಮಿಕಪುರುಷ ಗಣಯೂಥದೀಪಕಗರ್ವ । ಸೀಥುಪ್ರ ಮತ್ತಜನವೀಥೀವಿಗಮನಾಥ । ಪಾಥೋಧಿವಾಡಬಾನಾಥಬಾಂಧವಲೋಕ ನಾಥಾತಿರಿಕ್ತಚರಿತ ॥ ಯೂಥಾರ್ಥ್ಯಪರವೃಷವರೂಥ ಶಮತಾಜಿತ ನಿ । ಶೀಥಿ ನೀಥವಭವೋನ್ಮಾಥಕರದುರ್ಮೋಹ। ಯೂಥನಾಥ ಮೃಗಾಧಿನಾಥನಾಥಾರ್ಯಾ ಸನಾಥ ಜಯವಿಶ್ವನಾಥಾ ॥ 1 ॥

ಈ ಪ್ರಕಾರ ದೊಳಿಳಾಜನವನುದ್ಧರಿಸಿ ಶೈ । ವಪ್ರತಿಷ್ಠಾಪನಂಗೆಯ್ದಿ ರುತ್ತಾರ್ಯನು । ಕ್ಷಪ್ರಕಾರದೊಳೀಶ ಪೂಜೆಯುಂಸೆಗಳ್ದು ಮೇಣ್ಮೃಡನಿತ್ತ ಪಡಿವೊಂಗಳಂ ॥ಕ್ಷಿಪ್ರದಿಂತೀರ್ಥಭಾಜನದೆತೆಗೆದುಚಿತವ । ಸ್ತುಪ್ರಕರಮಂತರಿಸ ಲೆಂದಿನಂತೀವೆಡೆಯೊ । ಳಪ್ರತಿಮನರಮನೆಯನೆರೆಮನೆಯೊಳೋರ್ವಳುಚ್ಚಪ್ರ ಲಪೋಕ್ತಿಗೂಡಿ ॥ 2 ॥

ಶಿವಧೋೀಯೆನುತ್ತಳುತ್ತಿರೆ ಕೇಳ್ದಿದಲ್ಲಿಯುದೊ । ಶಿವಭಕ್ತರೋದನಮೆನುತೆ ಶಿಷ್ಯರಂಕಳುಪಿ । ಯುವಳನಲ್ಲಿಗೆ ಕರೆಯಿಪ್ಪಲ್ಕೆತನುಜಂ ಗೂಡಿಬಂದು ಗುರುಚರಣದಲ್ಲಿ ॥ ತವೆಬೀಳ್ದುಮರುಗುತಿರೆ ತಲೆವಿಡಿದು ನೆಗಪಿಶೋ । ಕವದೆತ್ತಣಿಂ ಬಂದುದೆಲೆ ಮಗಳೆಕೇಳೆಂದು । ಭುವನರಕ್ಷಾಮಣಿ ವಿಚಾರಿಸಲೊಡಂಪೇಳ್ದಳಾಕೆ ಕಣ್ಣೀರ್ದೊಡೆಯುತೆ ॥ 3 ॥

ಗುರುವೆಯವಧಾರುಕಿರಿಯಂದೆನಗೆ ಪತಿಯಳಿದು । ಪೊರೆವರಿಲ್ಲದೆಕೊಟ್ಟಣಂಗುಟ್ಟಿಕೊಡನೀರ । ನಿರದತಂದೊಪ್ಪೊಳ್ತುಸಾವಾಸಮೊಪ್ಪೊಳ್ತುಪಾರಣೆಯನೆಸಗಿಪಲವೂ ॥ ಪರಿಯಬೇವಸದಿನೀಯಣುಗನಂ ಸಲಹುವಾ । ತುರದೊಳಿರ್ದ್ದೀರಾರುಪೊಂಗಳಂ ನೆರಪಿಯೋ । ವರ್ರುಮರಿಯದಂತೆ ತಂಡುಲಭಾಂಡದೋಳ್ಮುಚ್ಚುಳಿಟ್ಟಿರಿಸಿತದ್ದ್ರವ್ಯದಿಂ ॥ 4 ॥

ಈಸುತಂಗೊಂದು ಬಡಮದುವೆಯಂ ಮಾಳ್ಪೆನೆಂ । ದಾಸೆಗೆಯ್ದಿರ್ದ್ದಿಂದದಂನೋಡಲೆಳಸಿ ಯು । ಲ್ಲಾಸದಿಂದೀಕ್ಷಿಸಲ್ಕಿಟ್ಟ ಮುಚ್ಚುಳನಿಳುಹುದಾಕುರಪನಿನಿಸಳಿಯದೆ ॥ ಆಸುವರ್ಣದಗಂಟ ಸಾವನೋಬಲ್ಗಳ್ಳ । ನೋಸರಿಸದೊಯ್ದನಿನ್ನೇಗುವೆಂ ಕೆಟ್ಟೆಂಪ್ರ । ಯಾಸವೇ ಕೈದಟ್ಟಿತೆಂದೊರಲು ತಾತ್ಮಜಂಬೆರಸುಮೆಯ್ಯಿಕ್ಕಲೊಡನೆ ॥ 5 ॥

ತಂಗಿತಲ್ಲಣಿಸಲೇಕೇಳೇಳೆನುತೆ ದಯಾ । ಪಾಂಗದಿಂನೋಡಿ ನಿಜಹಸ್ತದಲ್ಲಿರ್ದ್ದ ಪಡಿ। ಪೊಂಗಳನಿವೇಂನಿನ್ನವಕ್ಕುಮೋ ಅಂಜವೇಡುಸಿರೆನಲ್ಕಬಲೆತನ್ನಾ । ಪೊಂಗಳಂಕಂಡು ಪುಳಕಿಸಿನುಡಿಯಲಳ್ಕಿರೆ ತ। ದಿಂಗಿತವನರಿದಾಧನವನಾಕೆಗಿತ್ತುಗುರು । ಪುಂಗವಂ ಬೀಳ್ಕೊಟ್ಟನದು ಭೂತಹಿತಚರಿತ್ರಂಗಕಟ ಸಹಜಮಲ್ತೆ॥ 6॥

ಅತ್ತಲಾವಿಧವೆನಲಿವುತೆ ನಿಜಗೃಹಕೆಪೋದ । ಳಿತ್ತಗುರುವನಿತರಿಂ ಮೇಲೆಶಿವನೋಳ್ಮುಳಿದು । ವಿತ್ತನಾಥಾಪ್ತಂ ಸುವರ್ಣಾದ್ರಿವಾಸನೆಮಗಾಗಿಂತು ಚಾರ್ಯಗುಣಮಂ ॥ ಪೊತ್ತನೇಗಣಪತಿನೃಪಾಲ ಸನ್ನರಮನೆಯ । ವಿತ್ತಮಂಕೊಂಡ್ಪೊಡಂ ಕೊಳ್ಗೆಬಡವೆಯಬಾಯ । ತುತ್ತನೇಕಪಹರಿಸಿದಂ ತಕ್ಕಿಸುವತನ್ನನಿಜಗುಣವನೇಕೆಮಾಣ್ಬಂ ॥ 7 ॥

ತಿರುನೀಲಕಂಠರಂ ಮಾಂಜೆಸೂರುಳಿಗ್ಗೊಂಡ । ನಿರತಂಗಮರನೀತಿಯಂ ತಮಾಳಿಸಿಮಟ್ಟ । ಮಿರದೊಕ್ಕಲಂ ಮಾರುಗೊಂಡಂಗೆ ನಂಬಿಯನಳಿಪಿತ್ತೊಳ್ತು ಗೊಂಡವಂಗೆ ॥ ಅರಿದಾವುದಿದರಲ್ಲಿ ಮೇಣ್ಗೊಪನಾಗಿ ಶಂ । ಕರ ದೇವನಂ ಬಿಟ್ಟಿಗೆಯ್ದುಪಿಟ್ಟಾಂಬಿಯಂ । ಬರದೆಪೊರೆವೊತ್ತುಮುಗಿದೇವಗಳನಿಂತು ಪಲರೆಂ ಪೊರೆದನಂತಲ್ಲದೆ ॥ 8 ॥

ಇಂದುಗತಿಗೆಟ್ಟಿಮ್ಮವಂ ಪೊರೆವೆನೆಂಬೊಂದು । ದಂದುಗಂಬೊತ್ತು ಏಧವಾವಿತ್ತಮಂಕಳ್ದು । ತಂದಿತ್ತನವರಟ್ಟಿಬಂದೊಡಾನೇಂ ಗುಂಡಬೊಮ್ಮಯ್ಯ ನೇಕಾಯ್ವೊಡೆ ॥ ಚಂದವಾಯ್ತೆಮಗೆ ತಾಂನೆಗಳ್ದದದ ನಾಡಲೇಂ । ಸಂದ ವಿಶ್ವಕುಟುಂಬಿಯೆಂತೊದವಿಪಂ ಬಿಟ್ಟ । ಎಂದುಮೊದಲಾಗಿತಾನಿಂತೀವಪಡಿಯು ನೆಂದೊರೆದುಗುರುಮತ್ತಮೆಂದಂ ॥ 9 ॥

ತನ್ನನೆನ್ನುವನುಂಟುಮಾಳ್ಪಧಿಕಶಕ್ತಿ ಸಂ । ಪನ್ನ ಶರಣರಕರುಣವೆಮಗುಂಟು ತಾಂಬಳಲ । ಲಿನ್ನೇಕೆನುತೆ ಕಟಾಕ್ಷಿಸಿಶಿವನನುಡಿದು ಮುಸುಕಿಟ್ಟ ಮಣಿಮುಂಜದಲ್ಲಿ ॥ ಚಿನ್ನಿಧಾನಂಮಲಗಲೊಡನೆ ಗುರುವಿಶ್ವಪತಿ । ಮುನ್ನಿನಾಕಾರದಿಂ ಬಂದವರಮುಂಡೆಗಡೆ । ಯುನ್ನತಾಸನದಲ್ಲಿಕುಳ್ಳಿರ್ದು ಮುಸುಕನುಗಿವುದುಮಿಾಕ್ಷಿಸುತೆಪುಳಕಿಸಿ ॥ 10 ॥

ಇನಿಸಿನಿಸುಭಯವದರೊಳಿನಿಸಿನಿಸು ಭಕ್ತಿಯೊಡ । ನಿನಿಸಿನಿಸು ಮುಳಿಸುಗೂಡಿನಿಸಿನಿಸುಮುದ್ದು ಮೇ । ಣಿನಿಸಿನಿಸುಗದ್ಗದಂಗಳ್ವೆರಸು ತದ್ಗುರುಸ್ವಾಮಿಗಭಿನಮಿಸೆನಗುತೆ ॥ ವಿನಯದಿಂತಗೆದುಬಿಗಿಯಪ್ಪಿನೀಂ ಶಿವನೊಳೇ । ಕಿನಿತು ಮುಳಿಸಂತಾಳ್ದೆಮಗನೆಯೆನೆ ನೀನರಿಯ । ದನುವೇ ಸ್ವತಂತ್ರಚರಿತಾನುಡಿದು ತೋರಲೇಂ ನಿನ್ನೊಳ್ಪ್ರಮಾಣವುಂಟೇ ॥ 11 ॥

ಪಾಲೆರೆದರಂ ನಿರಾಕಾರದಲ್ಲಿರಿಸಿದೆ ಮ । ಹಾಲಯದ ವಿಷವನಿಕ್ಕಿದರಂ ಸಲಹಿದೆ ಮ। ತ್ತಾಲೋಕಬಾಂಧವನ ಪಲ್ಗಳೆದೆ ಪೊರ್ದಿದರೆ ತಿಂಬವನನೊಲ್ದು ಪಿಡಿದೆ ॥ ನೀಲೋತ್ಪಲದಲಿಟ್ಟನಂಕೊಂದೆ ನಡುದಲೆಯ । ಮೇಲೆ ಕಲ್ಲೆತ್ತಿಹಾಯ್ಕಿದನ ಮನ್ನಿಸಿದೆ ಛಲ । ರೇಲೇಸುಲೇಸು ವಿಶ್ವಾಧಿಪಾಪ್ರಭುಗಳೇನಂನೆಗಳ್ದೊಡಂ ಮೆರೆಯದೇ ॥ 12 ॥

ಎಂದಿಂತುಸವ್ಯಾಜನುತಿಗಳಿಂ ತನ್ಮಹಿಮ | ನಂದು ಗುರುವೇಷದೀಶ್ವರ ನೊಡನೆ ನುಡಿಯಲೊಡ | ನೆಂದನೆಲೆಕಂದ ಕೇಳ್ದನನಿಮಿತ್ತಂನೆಗಳ್ದುದಲ್ತು ನೀನೀ ಮರ್ತ್ಯಕೆ || ಬಂದುಪರವಾದಿಗಳ್ಗಖಿಲದೃಷ್ಟಂದೋರಿ | ನಿಂದುಸದ್ಭಸಿತರು ದ್ರಾಕ್ಷಾದಿಕಂಥಾರ್ಯ | ಮಿಂದುಧರನೇ ದೈವವಾಸಮಯವೇ ಶ್ರೇಷ್ಠವೆಂದುನಿಜ ಮಂಸ್ಥಾಪಿಸಿ || 13 ||

ಸ್ಥಿರಬೋಧವೆಂಬ ವರ್ಷಂಗರೆದು ಸುಜನರಾಂ | ತರವೆಂಬ ಸುಕ್ಷೇತ್ರ ಮಂಶುದ್ಧಿಗೆಯ್ದು ಶುಭ | ಕರ ಸತ್ಕ್ರಿಯೆಗಳೆಂಬ ಬೀಜಮುಂಬಿತ್ತಿ ಮರಹೆಂಬ ಕಳೆದೆಗೆದದರ್ಕೆ || ಪರರದುರ್ಬೋಧಾದಿವಿಘ್ನಂಗಳೊಂದದಂ | ತಿರೆ ನಿಯ ಮವೆಂಬಕಾಪಿಟ್ಟಮಲಮುಕ್ತಿಯೆಂ | ಬುರುಫಲಂಬಡೆದು ಭಕ್ತಿಯಬರನನಲೆ ದುಶುಭಮಂ ಮಾಡಿಪೊರೆದೆಧರೆಯುಂ || 14 ||

ನೀಂಬಂದಕೃತ್ಯಮಂ ಕುಂದಿಲ್ಲದೀಶಂಗ | ಳುಂಬಮಪ್ಪಂತೆ ಸಾಗಿಸಿದೆ ನಿನ್ನಂವಿಜಿತ | ಶಂಬರಹರಂಮೆಚ್ಚಿ ನಿಜದೊಳೊಂದಿಸುವೆನೆಂದೆಯ್ದೆನೆನೆದಿಂತು ನೆಗ ಳ್ದಂ || ನಂಬಿನೀನೀಮುಳಿಸನುಳಿಪುಗನೆ ನಿನ್ನಪು |ತ್ರಂ ಬಗೆಯೆನಾಡಾಡಿಯಲು ಕಾರಣಿಕನವ | ನಿಂ ಬಣ್ಣವಪ್ಪವುಕೆಲವು ಶೈವಕರ್ಮಂಗಳುಂಟಂತರಿಂದವಂಗೆ || || 15 ||

ಹರಿಸದಿಂದಾಚಾರ್ಯಪಟ್ಟವಂ ಕಟ್ಟಿನೀ | ನಿರದೆ ಕಾಶಿಗೆಬಪ್ಪುದಲ್ಲಿ ವಿಶ್ವೇಶ್ವರನ | ಕರುಣದೊದವಂ ಕಾಣಿಸುವೆನೆನೆಮುದಂಬೆತ್ತು ವೇಷಮಂಪಲ್ಲ ಟಿಸಿದಾ || ಪರಿಯೊಳೆರಡಿಟ್ಟು ನುಡಿವಂದವಲ್ಲದೆ ಬೇರೆ | ಹರನದಾರ್ನೀನಲ್ಲ ದೆನ್ನೊಳೇಕಿನಿತೆಂದು | ಚರಣಕೆರಗುವುದು ಮಂತರ್ಧಾನನಾದನೀಶಂ ಚೋದ್ಯ ರಸಮನೆಸಗೀ || 16 ||

ಅಲ್ಲಿಗುರುರೂಪಮಂಕಾಣದೆಗುಣಾರ್ಣವಂ | ತಲ್ಲಣಿಸಿ ಯೊಡನೆತಿಳಿದೆ ನ್ನಮೇಗಣಕೃಪೆಯಿ | ನಿಲ್ಲಿಗೆಯ್ತಂದು ನಂಬಿಸಿಪಂಬಲಿಕ್ಕಿಪೋದನೆ ಅಕಟವಿಕಟ ಚರಿತಂ || ಇಲ್ಲಿತಾನೇಂಭಿನ್ನನೇಆದೊಡಂ ತನ್ನ | ಸೊಲ್ಲನೇಮನ್ನಿಸುವೆನೆಂದು ನಿಶ್ಚೈಸಿ ಪರ | ಮೋಲ್ಲಾಸದಿಂ ಸಕಲಭಕ್ತರಂಬರಿಸಿ ಕಾಲೋಚಿತಕ್ರಿಯೆಯು ನೆಸಗಿ || 17 ||

ಏತತ್ಕಥನಮನುಳಿಯದೆತಿಳಿಪಿತದ್ಗಣ | ವ್ರಾತಂಬೆರಸು ಶಿವಾರ್ಚನಮಂ ನಿಮಿರ್ಚಿ ಪರಿ | ಪೂತಪ್ರಸಾದ ಸಂತುಷ್ಟರಾಗಿಯನಂತರಂ ತದನುಮತಿಪೂರ್ವಕಂ || ಓತುವಿಧ್ಯುಕ್ತಮಾಗಾಚಾರ್ಯಪಟ್ಟಮಂ | ಖ್ಯಾತಸುಕುಮಾರಪದ್ಮರಸಗ್ಗೆರಚಿಸಿಸಂ | ಪ್ರೀತಿಯಿಂದಾಶರಣಸಭೆಗೆ ಸಾಷ್ಟಾಂಗದಿಂನಮಿಸಿ ಕೈಮುಗಿದುನಿಂದು || 18 ||

ಎನ್ನನಿಂದುವರಮತಿಮೋಹದಿಂದಾರಯ್ದು | ಮನ್ನಿಸಿಮಹಾನುಭವಸುಖಿಯೆರೆದುರಕ್ಷಿಸಿದಿ | ರಿನ್ನುಂ ಶಿವಪ್ರಸಾದಾಮರಕುಜಂನಿಮ್ಮ ಕರುಣಾಜಲದಿನಲ್ಲದೆ || ಚೆನ್ನಾಗಿಫಲಿಸದಂತರಿನದಂ ಮರೆಯವೇ | ಡೆನ್ನೊಳೆಂದೊರೆದೆರಗಿಪೇಳ್ದೊಳಿಶರಣಕುಲಂ | ಬಿನ್ನವಾಗಿಪುರಾರಿಯಕ್ಕಟಾ ಮಾಹೇಶ್ವರರಸುಖವನಿಂದಳಿದನೇ || 19 ||

ಕುಲಹೀನನಂ ಕುಷ್ಠನಂ ಶ್ರೇಷ್ಠನೆಂದು ನಿ | ರ್ಮಲತನುವನಿತ್ತುದರಿನಿದೆ ಮಹಾಸತ್ವವವಿ | ಚಲ ವಾದಿಬರೆಕುಂದದವನಂ ಗೆಲಲ್ಪೆರ್ಚಿದುದರಿನಿದೆ ಯತಿಗಭೀರಂ|| ಸಲೆವಿಧವೆಯಂಪೊರೆದುದರಿನಿದೆ ಕೃಪಾಳುತ್ವ | ವಲಘುನಿಜನುತಿಗಳ್ಕುವದರಿನವಿಕತ್ಥನಂ | ಫಲಿಸುತಿದೆ ಪದ್ಮಣಾರ್ಯಂ ಸುಧೀರೋದಾತ್ತನಾಯಕಗಾಂಭೀರ್ಯನಲ್ತೆ || 20 ||

ಆರುಂಟುಶಿವಶರಣರೋಳ್ಕುಲಗುಣಾದಿಗಳ | ನಾರಯ್ಯದವರಮುದ್ದಂಸಲಿಸಿಸಂತವಿಪ| ರೀರಸೆಯೊಳೆಂದು ಕರಗುತಿರೆಸುತನಂನೋಡಿ ಸಾಧಯಾಮಾಣಿತಿವಾಕ್ಕಿಂ || ಚಾರುಪ್ರಯಾಣಮಂಬೆಸಗೊಳೆಕರಂ ಕೊರಗಿ | ಯಾರಾಧ್ಯಕುಲಚಕ್ರವರ್ತಿನೀವಗಲಲ್ ಶ | ರೀರಮಂಧರಿಸಿ ಯಾನಿರಲಾರ್ಪ್ಪೆನೇನಿಮ್ಮ ಚರಣಸೇವನಮನುಳಿದು || 21 ||

ಅನೇಕಕೆಸಂಸ್ಕೃತಿವ್ಯಾಪಾರಮೇಕೆ ಪರ | ಮಾನಂದ ಸಾಗರಾಗುರುರೂಪಶಶಿಧರಾ | ಜ್ಞಾನೈಕಗೋಚರಾಯೆನುತೆ ನಿರ್ಮಾಯಿಕವ್ಯಥೆಯಿನಡಿಯಲ್ಲಿಪೇಳ್ದು || ತಾನೆಯ್ದೆಮರುಗುತಿರೆ ತೆಗೆದಪ್ಪಿನೀಂ ಶಿವ | ಜ್ಞಾನಿನಿನಗೇಕೀತಸುಪ್ಪಾವಹಾರಿಕ | ಗ್ಲಾನಿನಿನಗೆಮಗೆಬಗೆಯೆ ವಿಯೋಗಮುಂಟೇಯೆನುತೆ ಸಹಜಪದೆಳ್ಪೇಳ್ದಿದಿಂ || 22 ||

ತಿಳಿಪೆನಿನ್ನಿಂದಿನ್ನು ಮೆಸಪಶಿವಕಾರ್ಯದು | ಜ್ವಲವೃತ್ತಿಗಳ್ಕೆಲವೊಳವು ಬಳಿಕೆನಿನ್ನುದರ| ದೊಳಗೋರ್ವಸತ್ಪುತ್ರನೊಗೆವನವನಿಂದೆಮ್ಮ ಸಮಯಂಸಫಲ ಮಂತರಿಂ|| ಉಳಿವುದೀವೈರಾಗ್ಯಬುದ್ಧಿಯನೆನುತ್ತಾರ್ಯ| ತಿಳಕಂ ಬಹುಪ್ರಕಾರ ದೊಳೊಡಂಬಡಿಸಿ ಗುಣ | ನಿಳಯನಂ ಸತ್ಕರಿಸಿಬೀಳ್ಕೊಟ್ಟುಳಿದ ಬಂಧುಗಳನಂತೆ ಸಂತವಿಟ್ಟು || 23 ||

ಕರಮೆಶಿಷ್ಯಾಳಿಯಂನೋಡಿ ಸುಕುಮಾರ ಪ | ದ್ಮರಸ ನಿರ್ದ್ದಪನಾತನಿಂ ಕೃತಾರ್ಥತ್ವಮಂ | ಧರಿಸಿಮೆಂದಿರಿಸಿ ಯುಘೇಟಾಂಗುಭಲಜೇಯ ಜಯಯೆಂಬ ಮಂಗಳಘೋಷದಿಂ || ಸ್ಫುರದಾತ್ಮವಾಸಮಂ ಪೊರಮಟ್ಟುಪೋಗಿಮೆಂ | ದೊರೆದೊಡಂ ಕೇಳದೊಡನೆಯ್ತರ್ಪ ಕೆಲವು ಶಿ | ಷ್ಯರುಮಂತೆ ಭಕ್ತರುಂಬೆರಸು ಕೇಳಿಕೆಯುಣ್ಮೆ ಘನ ವಿಭವಸಹಿತನಾಗಿ || 24 ||

ಭಾಪುರೇಗುರುವರ್ಯನಿಂತಧಿಕತೇಜಃಕ | ಲಾಪದಿಂದವಿಮುಕ್ತಪುರಕೆಂದು ನಡೆವೆಡೆಯೊ | ಳಾ ಪಥದೊಳಿದಿರ್ವಂದು ತಂತಮ್ಮ ಪುರಕೆಕೊಂಡೊಯ್ದುಮನ್ನಿಪಭಕ್ತರಾ || ಓಪಸತ್ಕಾರಂಗಳಂ ಗ್ರಹಿಸುತೊಲ್ದು ಪಂ | ಪಾಪುರಕೆಗಮಿಸುವನಿತರೊಳಾಹರೀಶನಂ | ಬಾಪತಿಯನರ್ಚಿಸುತ್ತಾಲಿಂಗದೋಳ್ಪದ್ಮರಸರಬರವಂಕಾಣುತೆ || 25 ||

ಪ್ರಮುದಿತಾಂತಃಕರಣನಾಗಿ ಪುಳಕಿಸಿಶೈವ | ಸಮಯಾಬ್ಧಿಶಶಿಕೆರೆಯುಪದ್ಮಣಾಂಕಂ ಕಾಶಿ | ಗಮಮ ಪೊರಮಟ್ಟುದಕ್ಕುಮಿದೆನುತೆ ಸುಜ್ಞಾನಿತಿಳಿದುತತ್ಪುರದೊಳಿಸೆವಾ || ಅಮಿತಭಕ್ತರ್ವೆರಸು ಸಕಲಸಂಭ್ರಮದೆ ಬಂ| ದಮಲಿನನನಿದಿರ್ಗೊಂಡು ಕಂಡುಪರಿರಂಭಾದಿ | ಸಮುಚಿತಮನಾಚರಿಸಿ ಗುರುವಿರೂಪಾಕ್ಷಾಲಯಕ್ಕೆ ಕೊಂಡೊಯ್ಯೆಪೋಗಿ || 26 ||

ದೇವಕುಲಸಾರ್ವಭೌಮನನೆಯ್ದೆ ಕಂಡುನಾ | ನಾವಿಧದೆ ನುತಿಸಿತತ್ಕರುಣಮುಂಪಡೆದು ಸ | ದ್ಭಾವಿಹರಿಹರದೇವನೊಡನೆ ನಾಲ್ಕೆರಡು ಪಗಲೀಶ್ವರಾನುಭವಸುಖದಿಂ || ಆವಿಮಲಪುರದೊಳಿರ್ದಲ್ಲಿಂದೆ ತಳರ್ವೆಡೆಯೊ | ಳೋವೊತದ್ಧರಿದೇವನಂ ಪರಿವಿಾತಕೆಕರೆದು | ಮೂವರಂ ನಿಮ್ಮನಿಂದಿಂಗೆಂಟನೆಯ ದಿನಕೆತನ್ನೋಳ್ನೆರಪಲಿರ್ದಪಂ || 27 ||

ಅಂತರಿಂನೀವೀಗಳೊರೆವೀಮಹಾಕಾವ್ಯ | ಮಂ ತಡೆಯದನಿತರೋಳ್ಪ್ರಕ ಶವೆಯ್ದಿಪುದೆಂದ | ದಂ ತಿಳಿಪಿಯವರಿಂದೆ ಬೀಳ್ಕೊಂಡು ಕಾಶೀಪುರಾಭಿಮುಖ ಮಾಗಿಗಮಿಸಿ || ಮುಂತೆಸೆವಶಿವಪುರಶಿವಕ್ಷೇತ್ರತತಿಗಳುಮ | ನಂತಸಮವು ಣ್ಯಾವನಪುಣ್ಯಾನದಿಗಳುಮವೋ | ರಂತೀಕ್ಷಿಸುತ್ತಮಲ್ಲಲ್ಲಿ ಮೂಳ್ಪುಪಚಾರ ಮಂ ಭಕ್ತರಿಂಗ್ರಹಿಸುತೆ ‖ 28 ‖

ಪರಮಾನುರಾಗದಿಂ ಕೆರೆಯಪದ್ಮರಸಾಂಕ | ಗುರುವಿಂತು ವಾರಾಣಸಿ ಗೆ ಗಮಿಸುತಿರಲಿತ್ತ | ಹರಿದೇವನೊಪ್ಪ‍ುಗಲ್ಪಥದೋಳ್ವಿ ಮುಕ್ತಾಂಗನಾದಳಿಯ ನುರುಮಹಿಮೆಯಂ|| ಕರಮೆವಿಪ್ರರ್ಗೆಕಾಣಿಸಿ ಯಾತನಂಶಂಭು | ಪುರಿಯನೆ ಯ್ದಿಸಿ ಬಳಿಕ್ಕಾಯೆಂಟನೆಯದಿನದೊ | ಳರರೇ ವಿರೂಪಾಕ್ಷನಂಯಜಿಸಿ ಸಮು ಚಿತಸ್ತೋತ್ರಮಂಮಾಡೆಮೆಚ್ಚಿ || 29 ||

ಕರುಣದಿಂತನ್ನುದರಮಂತೆರೆದು ಸರ್ವರ | ಜ್ಜರವಟ್ಟುಘೇಯುಘೇಯೆ ನಲಡಂಗಿಸಿದನಾ | ಪರಿಯೊಳಗುಳಿದ ನಾಲ್ಕುಲಿಂಗದೋಳ್ಕಾಣಿಸಿ ಹರೀಶ್ವರಂ ಮುಕ್ತಿಸತಿಯಂ || ವರಿಸಿಸುಖಮಿರ್ದ್ದನಿತ್ತಲ್ಕೆರೆಯ ಪದ್ಮರಸ | ಗುರು ಕೆಲವು ದಿವಸಂಗಳಿಂಮೇಲೆ ಕಾಶಿಗುರು | ತರ ಹರ್ಷದಿಂದೆಯ್ದುವಲ್ಲಿ ಭಾಗೀರಥೀನದಿ ಮುಂದದೇಂಮೆರೆದುದೊ || 30 ||

ಹರಹರಾಸಕಲರಘಮಂ ತೊಳೆಯುಲೆಂದು ಶಂ | ಕರನ ಸಮ್ಯಜ್ಞಾನರ ಸವೆಜಲರೂಪಮಂ | ಧರಿಸಿಪರಿದುದೊವಿಶ್ವಪತಿತನ್ನ ನಿಜವಾಸವಾದಕಾಶಿಯು ನೆಯ್ದಿದಾ || ನರರಪ್ರಯಾಸದಿಂಬದುರ್ಕುಗೆಂದುರೆಸುರಿದ | ಕರುಣಾಮೃತವೊ ಭಗೀರಥನುಗ್ರತಪಕೊಲ್ದು | ಪರಮನೆರ್ದೆ ಕಟ್ಟನೆ ಕರಗಿಮೇಣ್ಪ್ರವಾಹಿಸಿತೊಯೆ ನೆ ಗಂಗೆಕಂಗೊಳಿಸಿತು || 31 ||

ಆನದೀತಟದೋಳ್ಪಪಂಗೆಯ್ವ ಪರಶಿವ | ಧ್ಯಾನಮಂಮಾಳ್ಪ ಶಿವಪೂಜೆ ಯಂನೆಗಳ್ವ ವಿಮ| ಲಾನುಭವದೋಳ್ಸಲ್ವ ವೇದಮಂಪಠಿಪ ವಿವಿಧಾಧ್ವರಂಗಳ ನೆಸಗುವಾ || ನಾನಾವಿಧೋರುಯೋಗಾಭ್ಯಾಸಮಂ ರಚಿಪ | ನೂನಮನುಸಂ ಸಿದ್ಧಿಯಂಮಾಡಿಕೊಂಬ ಸು | ಜ್ಞಾನಿಗಳ್ಮಾನಿಗಳ್ತಾಪಸರ್ಮೆರೆದರತಿಶಾಂತಿರ ಸಮಂಸೂಸುತೆ || 32 ||

ಅಂತುಭಯಕೂಲದೋಳ್ ಸಿತ್ಯನಿಯಮಂಗೆಯ್ವ|ಸಂತರಂತೆರೆಗಯ್ಯನೆತ್ತಿ ನಂಬುಗೆಗೊಟ್ಟು । ಸಂತವಿಸುತುಂ ನಿಜೇಷ್ಟವನೀವೆನೆಂದು ಘೋರ್ಗ್ರರೆವರವ ದಿಂದುಲಿಯುತುಂ || ಕಂತುಕಾಲಾದಿಭಯಮಿಲ್ಲಿಲ್ಲಿ ವರ್ತಿಪ | ರ್ಗೆಂತು ಮೆಂ ಪಾವರ್ತಮೆಂಬ ಬಾಯ್ದೆರೆದರಿಪು | ತುಂತತ್ತ್ರಳಯವನಾಘೋಷದಿಂ ನಗುತಿಸಿಪ ಗಂಗೆಯಂನೋಡಿನಲಿದು || 33 ||

ಈವಿಮಲಗಂಗಾಜಲವನಿನಿಸುಸೋಂಕಿಸುಳಿ | ವಾ ವಾಯುಪಾವವರ ಮೇಲೆತೀಡುವುದವ । ಪಾರ್ವನಾತ್ಮಕರಸ್ಪರ್ಶನಲಿದರ ತೀರವಾಸಿಗಳ ಸುಕೃತದ ಸುಗ್ಗಿಯಾ || ಏವೇಳ್ವೆನೀಜಾಹ್ನವೀಸ್ಮರಣವೇಮುಕ್ತಿ | ಭಾವಕಿಯನೊಲಿಪು ದೆಸೆ ದರ್ಶನಾದಿಗಳಿನ | ಪ್ಪಾ ವಿವಿಧಫಲಕೆಶಂಕರನೆ ಸಾಲಿಗನಲ್ಲದೇನನಿತ್ತಪನಿ ಸುತ್ತುಂ || 33 ||

ಜಯಸಕಲಜನನಿ ಜಯಲೋಕೈಕಪಾವನೇ | ಜಯಮಂಗಲಾಂಗಿ ಜಯದರ್ಶನಾನ್ಮುಕ್ತಿದೇ । ಜಯಜಗದ್ಧರಜಟಾಜಾಲಮಧ್ಯಾಲಯೇ ಜಯ ನಿರ್ವಿಕಾರಾಮೃತೇ || ಜಯಸರ್ವಪಾಪೋಪಪಾಪತಾಪಾಪಹೇ । ಜಯಸ ಕೃತಾಸ್ನಾತಜನಶತಯಜ್ಞಸುಫಲದೇ । ಜಯಲಸತ್ತ್ರಿಪಥಗೇ ಜಯಜಹ್ನು ಪುತ್ರಿ ಜಯದಿವ್ಯಗಂಗೇಜಯಜಯ || 35 ||

ಎಂದಿಂತುನುತಿಸುತದರ ಮಹತ್ವಮಂ ಶರಣ| ವೃಂದಕುಸಿರುತ್ತದಂ ಪಾ ಯ್ದುಕಾಶಿಗೆಬಂದು|ಸಿಂದನಿತರೋಳ್ವಿಶ್ವನಾಥನಾ ಪುರದವರಕನಸಿಸೋಳ್ಪೋಗಿ ಯೆಮ್ಮಾ || ಕಂದಂಕೆರೆಯಪದ್ಮಣಾರ್ಯನೆಯ್ತರುತಿರ್ದ್ದ । ಪಂ ದಿವ್ಯಸಂಭ್ರಮದೆ ಸೀವೆಯ್ದಿಯಾತನಂ । ಚಂದದಿಂದಿದಿಗೊಂಡು ಮೆರೆವೀಮಹಾಕ್ಷೇತ್ರ ವಲ ಯವಂ ನೆರೆತೋರಿಸಿ || 36 ||

ಬಳಿಕಮಿಲ್ಲಿಗೆಕರೆದು ತನ್ನಿ ಮೆಸೆಗುಡಿಗಟ್ಟಿ | ಪುಳಕಿಸುತವರ್ಶಿವಂ ಪೇ ಳ್ದಂತೆಪೋಗಿಯು । ಜ್ವಳವಿಭವದಿಂದಿದಿಗ್ಗೊಂಡು ಕಂಡಸ್ಯೋನ್ಯಸಮುಚಿತಕ್ರಿ ಯೆಯನೆಸಗೀ || ಮಲಹರನದೇಂಸೋಲ್ತನೋಇಂತು ನಿನ್ನ ಪೋ | ಲೊಳರೆ ಶಿವ ನಿಂದೆಮನ್ನಿಸಿಕೊಳ್ವ ಮಹಿಮರೆಂ | ದೆಳಸಿ ಗುರುವಂಪೊಗಳುತೊಯ್ಯುತಿರೆ ತನ್ಮ ಹತ್ವವನೊರೆವುತೆಯ್ದುತಿರ್ದಂ || 37 ||

ಹೇಮಾರುಣಾಸಿತೋಜ್ವಲ ನೀಲಲೋಹಿತೋ|ದ್ದಾಮಸ್ಫಟಿಕ ಹರಿನ್ಮದ ಮಣಿರಜತವೆಂಬ | ಸೀಮಾತ್ತವರ್ಣದಿಂ ಮೂಲೆಗೊಳಗಾಗಿದಿಗಿನಾಂಕಮಾದವು ರಾವತೀ || ಭೀಮತೇಜೋವತಿಸುಸಂಯಮಿನಿ ಕೃಷ್ಣಾ ವ| ತೀ ಮಹಾನಗ ರಿ ಶುದ್ಧವತಿ ಗಂಧನತಿ ಮ | ತ್ತಾಮಹೋದಯೆ ಯಶೋವತಿಗಳೆನಿತಾಣೆಯುಂ ಬುಗದಕಾಶಿಗೆಸಾಟಿಯೇ || 38 ||

ಇಲ್ಲಿವಿಹರಿಸುವಂತ್ಯಜಗ್ಗೆ ಸರಿಯೇನಾಕ | ದಲ್ಲಿ ಯಗ್ರಜರಿಲ್ಲಿ ಯೊಡ ಕುಗಲ್ಗಿದಿರೆದಿವ | ದಲ್ಲಿಯುಪರುಷವಿಲ್ಲಿ ಪುಟ್ಟಿರ್ದಶಾಲ್ಮಲಿಗೆಸರಿಯೆ ಸಗ್ಗದಭೂ ರುಹಂ || ಇಲ್ಲಿಪ್ಪಬಂಜೆಹಸುಪಿಂಗೆ ಪಡಿಯೇತ್ರಿದಿವ | ದಲ್ಲಿರ್ಪ ಪಶುಗಳಿಲ್ಲಿಯ ಪಲ್ವಲೋದಕ | ಕ್ಕಲ್ಲಸಿತಸುರಲೋಕದಮರ್ದಣೆಯೆಪಲವೇಸಿದೇ ಪರಬ್ರಹ್ಮ ಸದನಂ || 39 ||

ಸುಮ್ಮನೀಸುಕ್ಷೇತ್ರವಾಸಿವಿಹರಿಸಿದುದೇ | ಅಮ್ಮಮ್ಮ ಸತ್ತ್ರದಕ್ಷಿಣಮುವಂ ನುಡಿದುದೆ | ಲ್ಲಂ ಮಂತ್ರವವನಕರಧೃತವೆಲ್ಲವುಂ ಸೇವೆಯುವನಮ್ಮೈಸೋಂಕೆಲ್ಲ ವುಂ || ದಿಮ್ಮಿತಪ್ಪೊಡನಾಟವವನಿರವೆಯೋಗವಾ | ತಂಮಾತನಾಡದಿರ್ದುದೆ ವಲಂಧ್ಯಾನವೆಂ | ದೆಮ್ಮ ವಿಶ್ವೇಶ್ವರಂಕೈಕೊಂಡು ಮುಕ್ತಿಯಂಕೊಡುವನೆನ ಲೇಂಮುಹಿಮೆಯೋ || 40 ||

ಸಕಲವಿಧಿವಿಧುಜಿಷ್ಣುಸುರದನುಜ ಮನುಜಗು | ಹ್ಯಕಸಿದ್ಧಸಾಧ್ಯಮ ನುಮುನಿಯತಿವಸೂರಗರ | ವಿಕಲಾನಿಧಿಗ್ರಹನಿಧಿನಿಧಾನ ಗರುಡಗಂಧರ್ವ ಭೂ ಶಾಚಭೂತ || ಸುಕರಕಿಂಪುರುಷ ಭೈರವ ಯಕ್ಷವಿದ್ಯಾಧ | ರಕಲಾಪ್ಸರಶ್ಶಕ್ತಿ ಮಂತ್ರಸಿದ್ಧಿನದೀನ | ದಕುಧರೌಷಧಷಡಂಗಾವಮ್ನಾಯ ಶಾಸ್ತ್ರಾಗಮಾದಿಗಳ ಲೀಲಾಸ್ಥಳಂ || 41 ||

ಭಾವಿಸಿದವಂ ಪುನರ್ಭೂತಿತನಗಿಲ್ಲೆಂದು | ಭಾವಿಸಿದವಂ ನೆನೆದವಂ ಸ ಗ್ಗದೊಡೆತನವ | ದೇವಿರಿದೊ ಎಂದು ನೆನೆದವನೊಮ್ಮೆನುಡಿದವಂ ಹರ್ಯಜಾದಿ ಗಳಪದಮಂ|| ಓವೊಪುಲ್ಮಾಡಿನುಡಿದವನೇಳಡಿಯು ನಿಟ್ಟ | ನಾವಿಮಲಮುಕ್ತಿಗ ಡಿಯಿಟ್ಟವನಿದಂ ಪೊಕ್ಕ | ನೇ ವಿಶ್ವಪತಿಯ ಗರ್ಭಂ ಬೊಕ್ಕವಂ ಪೊಗಳ್ವದೇ ನನ್ನದಿನ್ನದೆಂದು || 42 ||

ಆವನಿಲ್ಲ ಸುಗಳೆವುತಿಪ್ಪ ನಾಕಾಲದೋ| ಳ್ದೇವಿ ಮೇಲುದರಿಂದೆ ಬೀಸುವಳ್ಳಿ ಜಕರದೊ | ಳೋವೊಗಂಗಾಂಬುವಂ ತಂದುಗಣಪಂಬಾಯ್ಗೆ ಬಿಡುವನವು ಮಾಜಾಷ್ನವಿ || ಓವಿಮೆಯ್ದುಡವುವಳ್ ಭೃಂಗಿಭಸಿತವನಿಡುವ | ನಾವಿಮಲನಂದಿತೊಡೆಗುಡುವನಾತನತಲೆಗು | ಮಾವರಂತಾರಕ ಬ್ರಹ್ಮಮಂ ಬಲಗಿವಿಯೊಳೊರೆವನೆನೆ ಘನವದೆಂತೋ || 43 ||

ಅಂತಿಂತುಟೆಂದು ಬಣ್ಣಿವುದೇನೊ ವೇದವೇ | ದಾಂತ ಶಾಸ್ತ್ರಪುರಾಣ ತತಿಗಳಾಕ್ಷೇತ್ರದ | ರ್ಥಾಂತರಕೆ ಬರೆದಟೀಕೆಗಳೆನಿಪ ಎಲ್ಲಿಭಕ್ತಾಭಕ್ತರೆಂದೆನ್ನದೆ|| ಅಂತೆಪುಣ್ಯಾತ್ಮ ಪಾಪಾತ್ಮರೆನ್ನದೆ ಶಿವಾ | ಕಾಂತನೆಲ್ಲರ್ಗೆ ಮುಕ್ತಿಯನೀವನೆನುತಖಿಲ | ಮಂತಾಂಮೊದಲ್ ಬಲ್ಲವೋಲವಂತಿಳಿಪಿದನದೇಂಶಿವಜ್ಞಾನದೊದವೋ || 44 ||

ರವಿಸುಕೇಶನ ಪುರದ ಮಾಹೇಶ್ವರರ ನೋಯಿ | ಪವಸರದೊಳಾನಂದಿಕೋಪದಿಂನೋಡೆಬೀ | ಳ್ಪವಸುಂಧರೆಯೊಳಾರ್ತನಾಗುರುಳುತುಂ ಬಂದುನಿಜಪದಂಬಡೆಯಲೆಳಸೀ || ತಪೆಸಮರ್ಚಿಸಿದ ಬಾಲಾರ್ಕೇಶಲಿಂಗಮಿದು | ಶಿವರಪಿತದಕ್ಷಯಾಗಕೆ ಪೋದದೋಷಮಂ | ತಪಿಸೆಸೋಮಂಬಂದು ಪೂಜಿಸಿದ ಸೋಮೇಶಲಿಂಗಮಿದುನೋಡಿಮೆನುತುಂ || 45 ||

ಅಂದುನಿಜಸುತೆಗಳಿಪಿದತಿಪಾಪಮಂ ಕಳೆಯ | ಲೆಂದಜಂ ಯಜಿಸಿದಾ ಬ್ರಹ್ಮೇಶಲಿಂಗಮಿದು | ಸಂದಮುನಿಪತ್ನಿಯಂ ನೆರೆದಘವನಳಿಯಲೆಂದಿಂದ್ರಂ ಕರಂಯಜಿಸಿದಾ|| ಚಂದದಿಂದ್ರೇಶನಿದು ಸರ್ವೇಷ್ಟಸಿದ್ಧ್ಯರ್ಥ್ಯ | ಮಿಂದಿರಾಕಾಂತನರ್ಚಿಸಿದ ಕೃಷ್ಣೇಶನಿದು | ಒಂದಭಕ್ತಾಪರಾಧಂಗಳಿಮೆ ಕಾಲನರ್ಚಿಸಿದಕಾಲೇಶ್ವರನಿದು || 46 ||

ಅನ್ಯಾಯಕಳ್ಕದೀರಾರು ಬರಿಸಂಬರಂ | ಸನ್ಯಾಸಿಯೋರ್ವನತಿಕಾಮಿಶೌಂಡಿನಿಯಃ ಮಾ | ದನ್ಯವಧುವಂನೆರೆದು ತತ್ಸುರಾಭಾಂಡದೊಳಿದು ಲಿಂಗವಾಗಿಪುಟ್ಟೆ || ಅನ್ಯೂನದಿಂ ಸುರಾಭಾಂಡೇಶ ನೆನಿಸಿಬಹು | ಮಾನ್ಯತೆಯ ನಾಂತನಿದೆಪೇಳ್ವುದೇಂ ಗಿರಿರಾಜ | ಕನ್ಯಾಧವನೆ ಬಲ್ಲನಿದರ ಮಹಿಮೆಯನೆನುತುಳಿದಜಿಓದ್ಯಮಂ ನೋಡುತುಂ || 47 ||

ಅಲ್ಲಿತಂತಮ್ಮ ಪೆಸರಿಂ ಸುರನರೋರಗ | ರ್ಗಲ್ಲೀಲೆಯಿಂ ಯಜಿಸಿದಖಿಲ ಲಿಂಗಾಳಿಗಳ | ನುಲ್ಲಾಸದಿಂದೀಕ್ಷಿಸುತೆ ಬಂದು ಮಣಿ ಕರ್ಣಿಕೆಯನೋಡಿಕೊಂಡಾಡುತುಂ || ಇಲ್ಲಿರ್ಪ್ಪರ್ಮೃತ್ತಿಲ್ಲವುಂ ಸಕಲ್ಪಕಭೂತಿ | ಕಲ್ಲೆಲ್ಲವುಂಲಿಂಗಮುದಕವೆಲ್ಲಂತೀರ್ಥ | ವೆಲ್ಲಜನರುಂರುದ್ರರಿಂತೆಂದು ನಂಬದವನೇ ಶಿವದ್ರೋಹಿಯೆನುತುಂ || 48 ||

ಇಂತುಕಾಶೀಕ್ಷೇತ್ರದೊಳಗುಳ್ಳ ಖಿಲಮಹಿಮೆ | ಯಂತಾಂನಿರೀಕ್ಷಿಸುತೆವರ್ಣಿಸುತೆಹೃದಯದ | ಲ್ಲಂತಕಹರಧ್ಯಾನಶಂಭುಮಂತ್ರಸ್ಮರಣ ಯುತನಾಗಿಪುಳಕಿಸುತ್ತುಂ || ಮುಂತೆಶಿವಲೆಂಕಪಂಡಿತರ್ಗೆರಗಿದಾದಾನ | ದಾಂತಕನನಾಶಾರದಾಪೀಠಮಂತಧ್ವ | ಜಾಂತರದೊಳೊಪ್ಪುವಾವ್ಯಾಸಭುಜಮೊಳಗಾದವಂ ನೋಡುತುಂ ಪೊಗಳುತುಂ || 49 ||

ಪರಮಸಂಭ್ರಮದೆ ಗುರುರೂಪವಿಶ್ವೇಶ್ವರನ | ವರಭವನಮಂಬಂದು ಪೊಕ್ಕುನಯನಾನಂದ | ಕರಪರಂಜ್ಯೋತಿರಾಕಾರನಂಕಂಡು ಭಯಭಕ್ತಿಸಂಯುಕ್ತನಾಗಿ || ವರದವಾಚಾಮಗೋಚರವಚೋದ್ಯೋತಕೋ | ತ್ತರಪದಪದಾತೀತಪದವೃತ್ತಿಕಾರಕಾ | ನಿರುಪಮನಿಜಾನಂದಚರರೂಪ ನಿಷ್ಪ್ರಪಂಚಸಕಲಕಲಾಪ್ರೇರಕಾ || 50 ||

ವರಪರವ್ಯೋಮಸಂಕ್ಷೋಭಜಾಖಿಲತತ್ವ | ಪರಿಕರಣ ಶೀಲತತ್ತದ್ವೃತ್ತಿಸಂಸ್ಥಾಪ | ನರಸಾವಗತಯಥಾಸ್ಫುರಣಾನು ಸರಣಸಂಲೀನ ಕರಸಕಲ ಕೃತ್ಯಾ || ಪರತರೌದಾಸೀನ್ಯಭಾವನಿರುಪಾಧಿಕಾ | ಚರಣಸಂ ವಿನ್ಮಾತ್ರನಿರ್ವಿಕಲ್ಪಕಶಕ್ತಿ | ಭರಿತಪುರುಷಾರ್ಥಮಮಲಾಣ್ವಧಿಷ್ಠಿತದೇಶಿಕಾಕಾರ ಕೈವಲ್ಯದಾ || || 51 ||

ಕರ್ಣಾಟವಿಭಕ್ತಿಮಾತ್ರದಲ್ಲಿ ಯುಪನ್ಯಾಸಚ್ಛಾಯೆಯಿಂದನುಲೋಮಪ್ರತಿಲೋಮಾರ್ಥಪದಮಾಗಿ ಮಾಡಿದಕವಿಮುಖಕವಾಟಾಖ್ಯಾನಸಾರ್ಥಕಮಾದಮಹಾಪ್ರಬಂಧಮಿದು || ವರವಿತನುನಿರಭೀಗಕನತಾವಿಕಭಸಶಿವ | ನಿರತತನು | ವಿರುಚಾರು | ಚಜರಾತ | ನುಪಶುಪಶು | ಸರಸರಸ | ಕಮರಣರ | ತವಿರತಮಿ | ಯುತಯುಜಕ | ಕುಶಲಕರ | ಶಕಕಕರಕ || ಕರಕಕಕಶ | ಶರಕಲಶ | ಕುಕಜಯುತ | ಯುಪಿತರವಿ | ತರಣರಮ | ಕಸರಸರ | ಸಶುಪಶುಪ | ನುತರಾಜ | ಚರುಚಾರುವಿನುತತರ | ನಿವಶಿಸಭ | ಕವಿತಾನ | ಕಗಭೀರ | ನಿನುತವಿರವ || 52 ||

ಸಾಮರ್ಗಥರ್ವ ಯಜುಸಾಮಗಮ್ಯೇಶ ಪ್ರ । ಕಾಮಮನ್ಯೋನ್ಯಂ ವಿವಾದಮತಿಕೃತ್ವಾ ಭಿ । ತೋವರ್ಾಗಣಂ ಕುರ್ವತೋಸ್ಸಾಮ್ಯಲಸಯೋವಿಧುಬ್ರಹ್ಮಾಣೋರಪ್ಯಭೇದ್ಯ॥ ಶ್ರೀಮನ್ನಶೇಷತತ್ವಾತೀತ ಸರ್ವಗೋ।ದ್ದಾಮಘನನಾದ ಬಿಂದುಕಲೋತ್ಕ್ರಮ ಪ್ರಥಿತ । ಕಾಮದಶರಣ ವತ್ಸಲೋದ್ಧಗುರುರೂಪ ವಿಶ್ವೇಶಮೇ ಪ್ರಾದುರ್ಭವ ॥ 53 ॥

ಯೋದಿವ್ಯವಿಗ್ರಹೋಯಂ ವಿಮುಕ್ತಿದಮಾಪು।ರಾದರೇಣಚಿತಿಸ್ಸ್ಫುಟಾಯೇನಯಸ್ಮೈಸ । ದಾದೇವತಾನಮಸ್ಕುರ್ವಂತಿಯಸ್ಮಾನ್ನರಃ ಕೃತಾರ್ಥಾಭವಂತಿ ॥ ಆದಿಮಧ್ಯಾಂತರಹಿತಾಯಸ್ಯ ಶಕ್ತಿಃಕ್ರ । ಮಾದಣೂನಾಂಚಯಸ್ಮಿನ್ನೈಜಯೋಗೋಮ । ಹಾದೇವ ಸತ್ವಮವಿಮುಕ್ತೇಶಗುರುವಿಶ್ವನಾಥಮೇ ಪ್ರಾದ್ರುರ್ಭವ॥ 54 ॥

ಎಂದಿಂತುನುತಿಸೆ ಶಿವನತಿತುಷ್ಟನಾಗಿತ । ನ್ನಂದಿನುರುಗುಪ್ತಾಕೃತಿಯನಾಂತು ಪೊರಮಡುವೆ । ನೆಂದು ತಲ್ಲಿಂಗಗರ್ಭಂದೆಗೆಯೆ ಜಾಜ್ವಲ್ಯಮಾನಮಾಗೊಂದುಬೆಳಗು ॥ ಮಂದಯಿಸಿಪೊರಪೊಣ್ಮಿದೇಗುಲವನಾವರಿಸೆ । ಮುಂದುವರಿದೀಶ್ವರಕೃಪಾಶಕ್ತಿಪದ್ಮರಸ । ರಂದಲಪ್ಪಿತೊ ಇವರಚಿತ್ಸತಿಶಿವನನವಗ್ರಹಿಸಿತನ್ನಸುವೊ ಎನಿಸಿ ॥ 55 ॥

ನಳನಳಿಸಿ ತೊಳತೊಳಗುವಾ ಬೆಳಗಿನಲ್ಲಿಕ । ಣ್ಗೊಳಿಸಿನಂದೀಶಭೃಂಗೀಶವೀರೇಶಾದ್ಯ । ಖಿಲಗಣಾವಳಿಯಿಟ್ಟಣಿಸೆ ಚಂಡಿಕೀರ್ತಿಗಳ್ಬೊಗಳೆ ಸತ್ತ್ರಣವಘೋಷಂ॥ ವೊಳಗೆಶಿವೆಬೆಂಬಳಿಯೊಳೆಯ್ದೆ ಭೂಕಾಂತೆಪದ । ತಳಕೆ ತಳಿಗೆಯ್ವಹಾಸಿಕೆ ಗುಡುತ್ತಿರೆವಿನಿ । ಮಂಗಳಮೂರ್ತಿಗುರುರೂಪ ವಿಶ್ವಪತಿಲಿಂಗದಿಂತಳದು ಬರೆಕಂಡು ನಲಿದು ॥ 56 ॥

ಕರುವಿಟ್ಟವೊಲ್ಮರವಡುತೆ ರತಾಂ ತಸ್ತ್ರೀಯ । ಪರಿಪೊಲಿಂದ್ರಿಯಚೇಷ್ಟೆಯುಡುಗುತಗೆವೊಯ್ದಂತೆ । ಕರಮೆಮೆಯ್ಮವಿರೇಳುತಾಲಿವರಲಂತೆ ಕರಗುತ್ತೆಸಂಧ್ಯಾರ್ಕನಂತೆ ॥ ಹರಿಸದೆವಿವರ್ಣಿಸುತೆ ಲತೆಯವೊಲ್ಕಂಪಿಸುತೆ। ವರಮೇಘದಂತಶ್ರುಸುರಿಯುತೆ ಮದಾಳಿಯಂ । ತಿರೆವಿಸ್ವರಂದೋರುತಮಲಸಾತ್ವಿಕವೆ ಸಾಕಾರವಾದಂತೆ ಬಂದು ॥ 57 ॥

ಆತೀವ್ರಸುಖದಸೊಕ್ಕಿಂದೆ ಮೂರ್ಛೆಸಿಬೀಳ್ದ | ರೀತಿಯಿಂದಂಘ್ರಿಯೋಳ್ಬೀಳ್ದು ತೊದಲಿಸಿಮುದ್ದು | ಪಾತಿಸಿಂಬಣ್ಣಿಸುವಮಹಿಮನಂ ನೋಡಿಕರುಣಾಮೃತದೊಳೋಲಾಡಿಸಿ || ಆತುರದೆ ತೆಗೆದು ತಳ್ಕೈಸಿ ಮುಂಡಾಡಿಸಂ | ಪ್ರೀತಿಯಿಂದಿವ್ಯಪ್ರಸಾದತಾಂಬೂಲವಿ ।ತ್ತೋತುಮೆಯ್ದುಡವಿ ಯಿವ ನೆಮ್ಮನುದ್ಧರಿಸಿದವನೆಂದು ಗಣಕುಲಕುಸಿರುತೇ || 58 ||

ಮಂಗಲಾತ್ಮಕಕೆರೆಯಪದ್ಮರಸರಂ ಸರ್ವ । ಮಂಗಲೇಶಂ ಸರ್ವರತಿಶಯಂ ಬಟ್ಟುಘೇ | ಚಾಂಗುಬಲಮುಝುಭಾಪುಶಿವ ಮಹಾದೇವ ಜಯಜೀಯಜಯಜಯ ಯೆನುತಿರೆ || ಪೊಂಗುತೊಯ್ದೆರಡು ಬೆಳಗುಪಳಂಚಿ ಯೊಂದಾದ | ಪಾಂಗಿನಿಂ ಲಿಂಗದಮೃತಾಂಗದೊಳಡಂಗೆ ಗಣ | ಪುಂಗವಪೂರ್ಮಳೆಗರೆದರಾಗಳೊಡನೊಡನೆ ಭೃಂಗಿಗೀತಂಗಳಮರೆ ‖ 59 ||

ಆಮಹಾದೇವದುಂದುಭಿರವಂಗೆಯ್ದುಸುರ | ರಾವೋದದಿಂದೆನತರ್ನವನೆಸಗಿದರಿಂತು |ಸೌಮನಸ್ಯಮನಖಿಲಕಿತ್ತು ಶಿವನೋಳ್ಕೆರೆಯ ಪದ್ಮರಸರೈಕ್ಯಮಾಗಿ ‖ ವೈಮಲ್ಯನಿತ್ಯನಿರತಿಶಯಾನವಚ್ಛಿನ್ನ । ತಾಮಹಿತನಿರ್ವಿಕಲ್ಪಾನಂದಸಚ್ಚಿದುದ್ಧಾಮಾಪ್ಧಿಯೊಳಗದ್ವಯಾಖಂಡ ಲಕ್ಷ್ಮಾನುಪಮಸುಖದೊಳೊಪ್ಪುತಿರ್ದಂ ‖ 60 ‖

ಮತ್ತಮಲ್ಲಿರ್ದ್ದಶಿವಶರಣರಾಕಾಶಿಯೊಳ | ಗುತ್ತಮಾನಂದದಿಂ ಗುರುವರನಸುತಿಸುತಾ । ಯತ್ತಗಣಪರ್ವ್ವಮಂಮಾಡಿ ತಂತಮ್ಮತಾಣಕೆಪೋದರೀಪಾತ್ರೆಯಂ || ಇತ್ತಸುಕುಮಾರಪದ್ಮರಸಾರ್ಯರುರೆಕೇಳ್ದು । ಚಿತ್ತದೋಳ್ಹರಿಸಮಂತಾಳ್ದಭವಭಕ್ತಗ್ಗ್ರ | ದಾತ್ತೋತ್ಸವಂಗಳಂ ರಚಿಸಿಶಿವಸುಖದೊಳಿಳೆಯಂ ಪ್ರೊರೆವುತೊಪ್ಪುತಿರ್ದ್ದರಂ || 61 ||

ಇಂತೀಕೆರೆಯಪದ್ಮರಾಜಚರಿತಮನುಮಾ । ಕಾಂತ ಭಕ್ತರಪಾದರಕ್ಷೆಯಂಮುಚ್ಚಿರದೊ । ಳಾಂತು ತಚ್ಛಕ್ತಿಯಿಂದರಿದಸಿತ ನೊರೆದೆನೀಕೃತಿ ಶೈವಪೀತನೆಮಗೆ || ಎಂತಾದೊಡಂಲೇಕನೆಂಬನಿತು ಪಕ್ಷದಿಂ । ಕಂತುಹರನವರೆನ್ನ ರಚನಾಪ್ರಯಾಸದೊಳ | ಗಂ ತಿಳಿದುಕೈಕೊಂಡು ಪುಸ್ತಕಮನೆನ್ನಸಾರಯ್ದುನಡಸುವುದುಸತತಂ || 62 ||

ಇದುಕಾಲಕಾಮಮಮಾಯಾಭಯಧ್ವಾಂತರವಿ । ಯಿದುಸಕಲದುಷ್ಟ ಶೋಗಾಟವೀಪಟುದಾವ । ಏದುಫಣಿಗ್ರಹಚೋರ ನೃಪರಿಪುವಿಷಾಗ್ನಿ ವಿಪದಾದಿಬಾಧಾಭ್ರವಾತಂ ॥ ಇದುಸಮಸ್ತಾಘಾದ್ರಿವಿದಳನನಿಶಿತಭಿದುರ । ವಿದುಸಕೃಚ್ಛ್ರವಣಮಾತ್ರಾಭೀಷ್ಟಫಲದಾತೃ । ವಿದುಮುಮುಕ್ಷುಗಳ ಚಿದ್ಘುಟಿಕೆಯಿದು ಸುಪವಿತ್ರಮದರಿನಿದು ಪಠ್ಯಮೆಂದುಂ ॥ 63 ॥

ವರಶಿವಸಮಯಮತ್ಯಧಿಕವಾಗಿ ನಿಲ್ಕೆಮ್ಮ । ಗುರುವಂಶಮುದ್ಘಪ್ರವೃತ್ತಿಯಿಂ ಬಾಳ್ಗೆಮಗೆ।ಗುರುವಿಶ್ವಪತಿಪರಮಸೌಖ್ಯಮಂ ಮೇಣಪುನರಾಗತಿಯನಿತ್ತುಪೊರೆಗೆ ॥ ಧರೆಸಕಲಸಸ್ಯಂಗಳಿಂದೆ ಸಂಪನ್ನಮ । ಕ್ಕರಸುಗಳ್ ಪ್ರಕೃತಿಹಿತಮಾಗಿವರ್ತಿಸುಗೆ ಏಬು । ಧರಬುದ್ಧಿಯಂ ಸರಸ್ವತಿಬಣ್ಣಿಮಿಡುಗಖಿಲ ಶಾಂತಿಯಕ್ಕಿದರಫಲದಿಂ ॥ 64 ॥

ಅಚ್ಚಕನ್ನಡಂ ॥ ಹಂತಿಗೊರಲವನ ನೇಳಿಸೆಪೆರ್ಬೆರಲೊಳೊತ್ತಿ । ಹಂತಮಂಮುರಿದು ಮೂರವತೆಯುಳ್ಳರಮನೆಯ । ನಂತವುರಮಂಮಾಡಿ ಸೀರ್ವೂವಮುಡಿದುತನ್ನಂನೆನೆವ ಮಾಹೂನ್ಯರಾ॥ ಪಿಂತಿಲಮದು-ಣಿವರನೆನಿಸಿ ಕಪ್ಪುವಟ್ಟಿಗನ|ನಾಂತುಬರ ವಿಾವಹತ್ತದೆತುತ್ತತುದಿಯಾಗಿ । ಮಂತುರವರಿಜುದಾಳ್ದು ನೆರೆಮೆರೆವಕಾಶಿಯೊಡೆಯಂ ತಡೆಯದೋವುಗೆಮ್ಮಂ ॥ 65 ॥

ಪ್ರಾಕೃತಂ ॥ ಅಕ್ಕವಾದತ್ತಣಪ್ಪತ್ತೇಸಣಯಣಸಿವ । ಸಕ್ಕದೇವಜ್ಜತ್ತಳಚ್ಚೀಸಮುಹಳೇಹ।ಜಕ್ಕಮದ್ದಕ್ಕಿಣ್ಣ ಗುರುಚರಣಸವ್ವದೋಮುಹಜಾದದಕ್ಕಿಗಣ್ಣ ॥ ಉಕ್ಕಿರ್ತ್ತಸಗ್ಗಿತ್ತದಣ ಯಿಾಕಪದ್ಧವಿಳ । ಸಕ್ಕುಪಹಿಯಯಜಮ್ಮಕಾಣಣದಹಣಭಕ್ತ । ಜಕ್ಕವಾಯದಿ ಯತ್ತಣಕ್ಕೂರಹರತುಮಂ ರಖ್ಖಮಂವಿಸ್ಸೆಸ್ಸರಾ ॥ 66 ॥

ಸ್ಫುರಿಸಿಲಿಂಗತ್ರಯಮನಾಕ್ರಿಯಾಕಾರಕೋ । ತ್ಕರನಾಗಿ ತದ್ಧಿತಮನರಿಪಿಯಂತಸ್ಥೋರು । ತರವಿಧಿಯನೊರೆದುವಕ್ತವ್ಯಮಿಂತೆಂದು ಬೋಧಿಸಿಯಾಗಮದ ಹೃದಯಮಂ ॥ ನಿರವಿಸಿಲಸತ್ರೃತ್ಯಯಂಬೇಳ್ದು ಮೇಣ್ಪ್ರಕೃತಿ । ಪುರುಷವೃತ್ತಿಯನೆಯ್ದೆಕಾಣಿಸಿಸುಸೂತ್ರದಿಂ । ಚರಿಪನ್ವೊಲೆಸಗಿಶಾಪ್ಸಿಕರಗುರುವೆ ನಿಪಕೆರೆಯ ಪದ್ಮರಸರೋವುಗಿಳೆಯಂ ॥ 67 ॥

ಕಾಮಿತಜನಕೆ ಕಾಮದುಘವೆ ಭಕ್ತೌಘಚಿಂ | ತಾಮಣಿಯೆ ಭಜಕರಸು ರದ್ರುಮವೆ ನತಜನ | ಸ್ತೋಮಮೇರುವೆ ಭಾವಿಪರಸಿರಿಯೆ ನೆನೆವವರನಿಧಿಯೆ ಕ ರುಣಾಜಲಧಿಯೇ || ಸ್ವಾಮಿಮತ್ಕೆರೆಯಪದ್ಮರಸಾಂಕಗುರುವೆನಿ | ಪ್ಪಾಮ ಹಾಕೃತಿಯನೊರೆದೆಮಗೊಲ್ದುವಿಘ್ನಮನ | ನಾಮಯತ್ವಮನಮೃತವಾಣಿಯನ ಮಲಮತಿಯನತಿಸುಖವನಿತ್ತುಸಲಹಾ || 68 ||

ಮದಕುಧರವಿದಳನಭಿದುರ ಪರಮಶಿವಭಕ್ತ | ಪದಶತದಳಾದಭ್ರಮಕ ರಂದಲೀಲಾಪ್ರ | ಮದಪರವಶೀಭೂತ ಮಧುಕರೋಪಮ ಪದ್ಮಣಾಂಕಪ್ರ ಣೀತಮಾಗಿ || ಸದಮಳಾಖಿಳಶಾಸ್ತ್ರಸಾರಮೆಂದೆನಿಸುವ | ಭ್ಯುದಯಕರ ಪದ್ಮರಾಜಪುರಾಣಕಥೆಯೊಳಿಂ | ತಿದು ಗುರುವಿನೈಕ್ಯಮಂಪೇಳ್ದ ಪದಿಮೂ ರನೆಯಸಂಧಿ ಶಿವಮಸ್ತುಸತತಂ || 69 ||

ಈಶಾಪರಾವತಾರನ ವಿಬುಧನುತನ ಭವ | ಪಾಶನಾಶಕಕೆರೆಯ ಪದ್ಮ ಣಾರ್ಯನ ಲಸ | ಚ್ಛ್ರೀಶಿವಾದ್ವೈತ ಸಾಕಾರಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ನಾ || ಈಶುದ್ಧಚರಿತಮಂ ತಿಳಿಪಿದಗೊರ್ೕದಿದ|ಗಾ್ೕಸೆಯಿಂ ಕೇಳ್ದರ್ಗೆಭುಕ್ತಿ ಮುಕ್ತಿಗಳಂ ಮಹಾ | ಶುಭಂಗಳನಾಯುವಂಕೊಟ್ಟು ಗುರುರೂಪವಿಶ್ವನಾಥಂ ರಕ್ಷಿಪಂ || 70 ||

ಅಂತು ಸಂಧಿ 13 ಕ್ಕಂ ಪದಂಗಳು 1,266 ಕ್ಕಂ ಮಂಗಳಮಹಾ|| ಶ್ರೀ||

ಶ್ರೀಮದ್ಗುರುರೂಪವಿಶ್ವನಾಥಾರ್ಪಣಮಸ್ತು

